# ಕುಲದೀಪ್ ನಯ್ಯರ್ ಆತ್ಮಕಥೆ ಇದೀಗ ಕನ್ನಡದಲ್ಲಿ

'ಒಂದು ಜೀವನ ಸಾಲದು!'–
ಪತ್ರಕರ್ತ ಕುಲದೀಪ್ ನಯ್ಯರ್ ಅವರ ಆತ್ಮಕಥೆ ಮತ್ತು ಆ ಸ್ವರೂಪದಲ್ಲಿರುವ ಸ್ವಾತಂತ್ರ್ಯೋತ್ತರ ಭಾರತದ ಸತ್ಯಕಥೆ. ಇಲ್ಲಿರುವುದು ಒಬ್ಬ ವ್ಯಕ್ತಿಯ ಬದುಕಿನ ವಿವರಣೆಗಿಂತ ಹೆಚ್ಚಾಗಿ ಭಾರತದ ಕಳೆದ ಏಳು ದಶಕಗಳ ಏಳುಬೀಳುಗಳ ನಿರೂಪಣೆ. ಇದು ಸ್ವಂತ ಸಂಗತಿಗಳ ಆಪ್ತ ಕಥನವಲ್ಲ, ದೇಶದ ಆಗುಹೋಗುಗಳ ತಪ್ತ ಕಥನ. ಚರಿತ್ರೆಯ ಘಟನೆಗಳೇ ಅವರ ಭಾವಕೋಶ, ಆದ್ದರಿಂದ ಇದು ಸಮಕಾಲೀನ ಚರಿತ್ರಕೋಶ.
ಈ ಪುಸ್ತಕ ಮುಂದಿಡುವ ಅಪಾರ ವಿವರಗಳನ್ನು ಅರಗಿಸಿಕೊಳ್ಳಲು ಒಂದು ಓದು ಸಾಲದು!

**ಹೊಸತು**
**ಚಂದಾದಾರರಿಗೆ**
**ಭಾರಿ ರಿಯಾಯಿತಿ**

3 ವರ್ಷದ 'ಹೊಸತು' ಚಂದಾದಾರರಿಗೆ
₹450 ಬೆಲೆಯ ಈ ಕೃತಿ
₹350 ಬೆಲೆಗೆ ಲಭ್ಯ
₹100 ವಿಶೇಷ ರಿಯಾಯಿತಿ.
ಅಂಚೆ ವೆಚ್ಚ ಉಚಿತ

ಈ ಕೊಡುಗೆ
ಅಕ್ಟೋಬರ್ 31ರವರೆಗೆ

ಕುಲದೀಪ್ ನಯ್ಯರ್
ಆತ್ಮಕಥೆ

## ಒಂದು ಜೀವನ ಸಾಲದು!

ಕನ್ನಡಕ್ಕೆ : ಆರ್. ಪೂರ್ಣಿಮಾ



ನಿಮ್ಮ ಬೇಡಿಕೆಯೊಂದಿಗೆ ಚಂದಾ ಸಂಖ್ಯೆಯನ್ನು ತಿಳಿಸಿ

ರೂ. 350ರ ಡಿ.ಡಿ. ಅಥವಾ ಎಂ.ಒ. ಕಳಿಸಿ ಅಥವಾ ನಮ್ಮ ಪುಸ್ತಕ ಮಳಿಗೆಗೆ ಭೇಟಿ ನೀಡಿ



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560 001. ಫೋನ್ : 30578022, 22203580 ಫ್ಯಾಕ್ಸ್ : 30578023
e-mail : navakarnataka@gmail.com URL : www.navakarnataka.com

ಶಾಖೆಗಳು : ಬೆಂಗಳೂರು ✆ 22251382 :: ಮಂಗಳೂರು ✆ 2441016 ✆ 2425161 :: ಮೈಸೂರು ✆ 2424094 :: ಗುಲ್ಬರ್ಗಾ ✆ 224302

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...




**ಚಿತ್ರಗಳು :** ಎನ್. ಆರ್. ಹೆಗಡೆ ಬೊಮ್ನಳ್ಳಿ, ಶ್ರೀಹರಿ, ಪ್ರತೀಕ್, ವಿ. ಗೋಪಾಲ್, ಸುವರ್ಣ, ರವೀಂದ್ರ ಹೆಗ್ಗಡಿ, ಬಿ. ವಿ. ಎಚ್., ಕಮಲಂ ಅರಸು

**ಮುಖಚಿತ್ರ :** ಬರಿದಾಗುತ್ತಿರುವ ಕೃಷ್ಣರಾಜ ಸಾಗರ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಏಕೋ ಏನೋ ವ್ಯಂಗ್ಯಚಿತ್ರಗಳಿಗೆ ನಮ್ಮ ಈ ನಾಡಿನಲ್ಲಿ ಉಳಿಗಾಲವಿಲ್ಲ. ಈಚೆಗಷ್ಟೇ ಪಠ್ಯಪುಸ್ತಕಗಳಲ್ಲಿದ್ದ ವ್ಯಂಗ್ಯಚಿತ್ರಗಳ ಬಗ್ಗೆ ರಂಪಾಟವಾಯಿತು. ಬಹುಶಃ ಆ ವ್ಯಂಗ್ಯಚಿತ್ರಕಾರರು ಬದುಕಿದ್ದರೆ ರಾಷ್ಟ್ರದ್ರೋಹದ ಆಪಾದನೆ ಹೊತ್ತು ಕಾರಾಗೃಹ ಸೇರಬೇಕಾಗಿತ್ತೇನೋ! ಸದ್ಯ ಸತ್ತು ಅಮರರಾಗಿದ್ದಾರೆ. ಇನ್ನೊಂದು, ನಮ್ಮ ದೇಶಕ್ಕೆ ವ್ಯಂಗ್ಯಚಿತ್ರಗಳು ಪ್ರವೇಶಿಸಿದ್ದೇ ತಡವಾಗಿ. ಕಳೆದ ಶತಮಾನದ ಐವತ್ತರ ದಶಕದಲ್ಲಿ 'ಶಂಕರ್ಸ್ ವೀಕ್ಲಿ' ಎಂಬ ಸಂಪೂರ್ಣ ವ್ಯಂಗ್ಯಚಿತ್ರಗಳ ನಿಯತಕಾಲಿಕೆ ತುಂಬ ಜನಪ್ರಿಯವಾಗಿತ್ತು. ಅಂದಿನ ರಾಜಕಾರಣಿಗಳು ಅದನ್ನು ಕಂಡು ಮೂಗು ಮುರಿಯುತ್ತಿರಲಿಲ್ಲ. ಭಾರತೀಯರಾದ ನಮಗೆ ಹಾಸ್ಯಪ್ರಜ್ಞೆ ಕಡಿಮೆ ಎಂಬ ಆರೋಪ ಹಿಂದಿನಿಂದಲೂ ಇದೆ. ಇವತ್ತಿನ ದಿನಗಳಲ್ಲಿ ಪ್ರಿಂಟ್‌ಮೀಡಿಯಾ ಸಾಕಷ್ಟು ವ್ಯಾಪಕವಾಗಿ ಬೆಳೆದಿದ್ದರೂ ವ್ಯಂಗ್ಯಚಿತ್ರಗಳ ಪ್ರಕಟಣೆ ಕಮ್ಮಿಯಾಗುತ್ತಿದೆ. ಪುಟಗಟ್ಟಲೆ ಬರಹವನ್ನು ಒಂದು ಚಿತ್ರ ಅಥವಾ ವ್ಯಂಗ್ಯಚಿತ್ರ ವ್ಯಕ್ತಪಡಿಸಬಹುದು. ಸರಕಾರ ಮತ್ತು ಸಾರ್ವಜನಿಕರ ಆದರವಿಲ್ಲದೆ ಹೋದರೆ ಈ ಕಲಾಮಾಧ್ಯಮ ನಶಿಸಿಹೋಗುವುದು. ಅಸಹಿಷ್ಣುತೆಯು ತಾಂಡವವಾಡುತ್ತಿರುವ ಇಂದಿನ ವಾತಾವರಣದಲ್ಲಿ ಅನುದ್ದೇಶಿತ ತಿಳಿ ಹಾಸ್ಯದ ಟೀಕೆಯೂ ಅಪರಾಧವಾಗುತ್ತಿದೆ. ಸೃಜನಶೀಲ ಬರಹಗಾರರು, ಕಲಾವಿದರು ತಮ್ಮ ಕೃತಿ ರಚಿಸುವಾಗ ಯಾವ ಜಾತಿ, ರಾಜಕಾರಣಿ ಅಥವಾ ಜನವಿಭಾಗಕ್ಕೆ ಅಪಚಾರವಾದೀತೊ ಎಂದು ಯೋಚಿಸಬೇಕಾದ ಕಾಲ ಬಂದಿದೆ.

'ರಾಷ್ಟ್ರದ್ರೋಹ'ದ ಆರೋಪ ಬಹು ದೊಡ್ಡ ಅಪರಾಧಗಳಿಗೆ ಮಾತ್ರ ಸಾಧ್ಯ. ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ರೂಪುಗೊಂಡ ಅನಿಷ್ಟ ಕಾಯಿದೆಯಡಿ ಸಾಕಷ್ಟು ಮಂದಿ ಸ್ವಾತಂತ್ರ್ಯ ಹೋರಾಟಗಾರರು ಈ ಆಪಾದನೆಗೆ ಗುರಿಯಾಗಿ ನೇಣುಗಂಬ ಏರಿದ್ದಾರೆ. ಸ್ವತಂತ್ರ ಭಾರತದಲ್ಲಿ ಸಂವಿಧಾನದತ್ತವಾದ ಮೂಲಭೂತ ಹಕ್ಕುಗಳಲ್ಲಿ ದತ್ತವಾಗಿರುವ ಅವಕಾಶವನ್ನು ಈ ಕಾಯಿದೆ ಕಸಿದುಕೊಳ್ಳುತ್ತಿದೆ. ಈ ಕರಾಳ ಶಾಸನಕ್ಕೆ ಬಲಿಯಾಗಿರುವಾತ ವ್ಯಂಗ್ಯಚಿತ್ರಕಾರ ಅಸೀಮ್ ತ್ರಿವೇದಿ. ಸಾರ್ವಜನಿಕ ಪ್ರತಿಭಟನೆಯಿಂದಾಗಿ ಕಾರಾಗೃಹದಿಂದ ಜಾಮೀನಿನ ಮೇಲೆ ಬಿಡುಗಡೆಯಾಗಿದ್ದಾನೆ. ಸರಕಾರದ ಭ್ರಷ್ಟಾಚಾರದ ವಿರುದ್ಧವಾಗಿ ನಡೆಯುತ್ತಿರುವ ಹೋರಾಟಗಳಿಗೆ ಬೆಂಬಲ ನೀಡಿ ರಚಿತವಾಗಿರುವ ಈತನ ವ್ಯಂಗ್ಯಚಿತ್ರಗಳು, ಪೋಸ್ಟರುಗಳು ಆಡಳಿತಗಾರರನ್ನು ಬೆಚ್ಚಿಬೀಳಿಸಿವೆ. ನೇರವಾಗಿ ಕ್ರಮ ಕೈಗೊಳ್ಳಲು ಹಿಂಜರಿದ ಆಡಳಿತ ಖಾಸಗಿ ದೂರಿನ ಆಧಾರದ ಮೇಲೆ 'ದೇಶದ್ರೋಹ'ದ ಮೊಕದ್ದಮೆ ದಾಖಲಿಸಿ ಮುಂಬಯಿ ಪೊಲೀಸರು ಅಸೀಮ್ ತ್ರಿವೇದಿಯನ್ನು ಬಂಧಿಸಿದಾಗ ತೀವ್ರವಾದ ಪ್ರತಿಭಟನೆ ಬಂದಿತು. ಆತ ಜಾಮೀನನ್ನು ನಿರಾಕರಿಸಿದ್ದ. ಈಗ ವಿಚಾರಣೆ ಎದುರಿಸುತ್ತಿದ್ದಾನೆ. ಪತ್ರಕರ್ತರು, ಮಾಧ್ಯಮದವರು ಒಕ್ಕೊರಲಿನಿಂದ ಪ್ರತಿಭಟನೆ ಸೂಚಿಸಿದ್ದಾರೆ. ಪ್ರೆಸ್ ಕೌನ್ಸಿಲ್ ಅಧ್ಯಕ್ಷ ನ್ಯಾಯಮೂರ್ತಿ ಮಾರ್ಕಂಡೇಯ ಖಟ್ಜು ವ್ಯಂಗ್ಯಚಿತ್ರಕಾರನ ಬಂಧನವನ್ನು ಖಂಡಿಸಿದ್ದಾರೆ. ಈ ಮೊದಲು ಇದೇ ಬಗೆಯ ದೇಶದ್ರೋಹದ ಆಪಾದನೆಗೆ ಗುರಿಯಾಗಿರುವವರು ನಾಗರಿಕ ಹಕ್ಕುಗಳಿಗಾಗಿ ನಿರ್ಭೀತರಾಗಿ ಹೋರಾಡುತ್ತಿರುವ ಬಿನಾಯಕ ಸೇನ್ ಮತ್ತು ಅರುಂಧತಿ ರಾಯ್. ನಿಜವಾಗಿ ನೋಡಿದರೆ ''ಭ್ರಷ್ಟಾಚಾರ''ಕ್ಕಿಂತ ಮಿಗಿಲಾದ ರಾಷ್ಟ್ರದ್ರೋಹ ಇನ್ನೊಂದಿಲ್ಲ. ಭ್ರಷ್ಟಾಚಾರಿಗಳ ಮೇಲೇಕೆ ಈ ಗದಾ ಪ್ರಹಾರವಿಲ್ಲ?

* * *

ಗುಜರಾತ್‌ನಲ್ಲಿ ೨೦೦೨ರಲ್ಲಿ ನಡೆದ ನರಮೇಧದಲ್ಲಿ ಮಡಿದವರ ಸಂಖ್ಯೆ ಒಂದು ಸಾವಿರದ ಇನ್ನೂರಕ್ಕೂ ಹೆಚ್ಚು ಎಂದು ಅಂದಾಜು ಮಾಡಲಾಗಿದೆ. ನರೋದಾ ಪಾಟಿಯ ಎಂಬ ಒಂದೇ ಪ್ರದೇಶದಲ್ಲಿ ೯೭ ಮಂದಿ ಹತ್ಯೆಗೀಡಾದರು, ೮೦೦ ಕುಟುಂಬಗಳು ನೆಲೆ ಕಳೆದುಕೊಂಡವು. ಹತ್ತು ವರ್ಷದಿಂದ ಈ ದುರಂತದ ಬಗ್ಗೆ ಬೇರೆ ಬೇರೆ ಹಂತಗಳಲ್ಲಿ ತನಿಖೆ, ವಿಚಾರಣೆಗಳು ನಡೆಯುತ್ತಲೇ ಇವೆ. ಆದರೆ ನೊಂದ ಕುಟುಂಬಗಳವರಿಗೆ ನ್ಯಾಯ ಮಾತ್ರ ದೊರೆಯದೆ ಹೋಗಿದೆ. ಆಡಳಿತದಲ್ಲಿರುವ ಭಾಜಪದ ಮೋದಿ ಸರಕಾರ ಪ್ರೇರಿತವಾಗಿದ್ದ ಈ ದಾಂಧಲೆಯ ಪ್ರಕರಣಗಳನ್ನು ಮುಚ್ಚಿ ಹಾಕಲು ಸರ್ವಪ್ರಯತ್ನ ನಡೆದಿದೆ.

*(೮ನೇ ಪುಟಕ್ಕೆ)*

ತಿಂಗಳ ಪತ್ರಿಕೆ
ಹೊಸತು
ನಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೧೪ ಸಂಚಿಕೆ-೩ ಅಕ್ಟೋಬರ್ ೨೦೧೨

**ಗೌರವ ಸಂಪಾದಕ**
ಜಿ. ರಾಮಕೃಷ್ಣ

**ಸಂಪಾದಕ**
ಸಿದ್ದನಗೌಡ ಪಾಟೀಲ

**ಸಹಸಂಪಾದಕರು**
ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

**ವ್ಯವಸ್ಥಾಪಕ**
ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**
ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**
**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**
ನವಕರ್ನಾಟಕ ಪ್ರಕಾಶನ

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೯೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http ://navakarnataka.blogspot.in**
**http ://hosathumonthly.blogspot.in**




# ಯುಪಿಎ-೨ : ಹಗರಣಗಳ ಸರಮಾಲೆ

**ಕಾಂ**ಗ್ರೆಸ್ ನೇತೃತ್ವದ ಯುಪಿಎ ಸರಕಾರ ಪ್ರಾರಂಭದಿಂದ ಒಂದಲ್ಲ ಒಂದು ಹಗರಣದಲ್ಲಿ ಮುಳುಗಿದೆ. ಪ್ರತಿಸಲ ಪಾರ್ಲಿಮೆಂಟ್ ಅಧಿವೇಶನ ಪ್ರಾರಂಭವಾದಾಗಲೂ ಕೆಲದಿನಗಳು ಕಲಾಪ ನಡೆಯದೆ ಹೋಗಿವೆ. ಇದಕ್ಕೆ ವಿರೋಧಪಕ್ಷಗಳು ಎಷ್ಟು ಹೊಣೆಯೋ ಸರಕಾರವೂ ಅಷ್ಟೇ ಹೊಣೆ. ಹಗರಣಗಳಿಂದ, ಅನಿಯತ ಭ್ರಷ್ಟಾಚಾರದಿಂದ, ಬೊಕ್ಕಸಕ್ಕೆ ಸಾವಿರಾರು ಕೋಟಿ ರೂಪಾಯಿಗಳ ನಷ್ಟ ಒಂದು ಕಡೆಯಾದರೆ, ಪಾರ್ಲಿಮೆಂಟಿನ ಸದನಗಳ ಕಲಾಪ ನಡೆಯದೆ ನೂರಾರು ಕೋಟಿ ರೂಪಾಯಿಗಳ ತೆರಿಗೆ ಹಣ ಪೋಲು. ಅದಲ್ಲದೆ ಅಗತ್ಯವಾದ ಮಸೂದೆಗಳ, ಚರ್ಚೆಗಳ ಮುಂದೂಡಿಕೆ. ಟೆಲಿಕಾಮ್ ಹಗರಣದ ಬೆನ್ನಲ್ಲೇ ಬಂದಿರುವುದು ಕಲ್ಲಿದ್ದಲು ಹಂಚಿಕೆ ಹಗರಣ. ಎರಡರಿಂದಲೂ ಸರಕಾರದ ಬೊಕ್ಕಸಕ್ಕೆ ಸಾವಿರಾರು ಕೋಟಿ ರೂಪಾಯಿಗಳ ಭಾರಿ ನಷ್ಟ. ಮೊದಲಿನದರಲ್ಲಿ ಮಿತ್ರ ಪಕ್ಷ ಡಿಎಂಕೆ ಸಚಿವ ಎ. ರಾಜಾ ಹೊಣೆಯಾಗಿದ್ದು ಸಚಿವ ಸ್ಥಾನ ಕಳೆದುಕೊಂಡು ಕಾರಾಗೃಹ ಸೇರಿದ್ದಾಯಿತು. ಜಾಮೀನಿನ ಮೇಲೆ ಬಿಡುಗಡೆಯಾಗಿರುವ ಈತ ಮತ್ತು ಅವನ ಸಹಚರರ ವಿಚಾರಣೆ ಯಾವಾಗ ಮುಗಿದೀತೋ ಹೇಳುವಂತಿಲ್ಲ. ಇನ್ನು ಕಲ್ಲಿದ್ದಲ ಹಂಚಿಕೆ ಪ್ರಕರಣದಲ್ಲಿ ನೇರವಾದ ಹೊಣೆ ಪ್ರಧಾನಿ ಮನಮೋಹನ ಸಿಂಗ್‌ರದು. ಇದನ್ನು ಬಯಲಿಗೆ ಎಳೆದದ್ದು ಸಂವಿಧಾನಬದ್ಧವಾಗಿ ಸ್ಥಾಪಿತವಾಗಿರುವ ದಿ ಕಂಟ್ರೋಲರ್ ಅಂಡ್ ಆಡಿಟರ್ ಜನರಲ್ ಆಫ್ ಇಂಡಿಯ, ಸಂಕ್ಷೇಪವಾಗಿ ಸಿಎಜಿ ಸಂಸ್ಥೆ. ಈ ಹಗರಣದಿಂದಾಗಿ ಪಾರ್ಲಿಮೆಂಟಿನ ಮುಂಗಾರು ಅಧಿವೇಶನ ಪೂರ್ಣವಾಗಿ ಕೊಚ್ಚಿಹೋಯಿತು. ಒಂದು ದಿನವೂ ಕಲಾಪಗಳು ನಡೆಯಲಿಲ್ಲ. ಪ್ರಧಾನಿಯ ರಾಜೀನಾಮೆಗೆ ಪಟ್ಟುಹಿಡಿದಿರುವ ಪ್ರತಿಪಕ್ಷಗಳು ಮತ್ತು ಅಂಥ ಪ್ರಮಾದವೇನಾಗಿಲ್ಲ ಎಂದು ಅಧಿಕಾರಕ್ಕಂಟಿಕೊಂಡಿರುವ ಆಡಳಿತ ಪಕ್ಷಗಳ ಜಟಾಪಟಿಯಲ್ಲಿ ಸಮಸ್ಯೆಗಳಿಗೆ ಪರಿಹಾರ ಕಾಣದೆ ಪರಿತಪಿಸುತ್ತಿದ್ದಾರೆ ಜನಸಾಮಾನ್ಯರು.

ಭಾರತ ಅಪಾರವಾದ ನೈಸರ್ಗಿಕ ಸಂಪನ್ಮೂಲಗಳನ್ನು ಹೊಂದಿರುವ ರಾಷ್ಟ್ರ. ಇಲ್ಲಿನ ಖನಿಜಗಳ ಗಣಿಗಾರಿಕೆಯಲ್ಲಿ ಗಣಿಧಣಿಗಳು ಅದರಲ್ಲಿ ದುಡಿಯುವ ಕಾರ್ಮಿಕರನ್ನು ತೀವ್ರವಾದ ಶೋಷಣೆಗೆ ಗುರಿಪಡಿಸಿರುತ್ತಾರೆ. ಅಷ್ಟೇ ಪ್ರಮಾಣದಲ್ಲಿ ಸರಕಾರಕ್ಕೂ, ದೇಶಕ್ಕೂ ಮೋಸ ಮಾಡುತ್ತಾರೆ. ಪ್ರಧಾನವಾಗಿ ಉತ್ತರ ಭಾರತದಲ್ಲಿ ಹರಡಿಕೊಂಡಿರುವ ಕಲ್ಲಿದ್ದಲ ಗಣಿಗಳು ಯಾವತ್ತೂ ಅಕ್ರಮಗಳಿಗೆ ಹೆಸರಾದುವು. ನಮ್ಮ ದೇಶದಲ್ಲಿನ ಕಲ್ಲಿದ್ದಲ ನಿಕ್ಷೇಪ ಪ್ರಪಂಚದಲ್ಲೇ ಅತ್ಯಂತ ದೊಡ್ಡದು. ಭೂಗರ್ಭ ವಿಜ್ಞಾನಿಗಳ ಅಂದಾಜಿನ ಪ್ರಕಾರ ೨,೮೫,೮೬೩ ಮಿಲಿಯನ್ ಟನ್‌ಗಳು. ನಮ್ಮ ದೇಶದ ತಾಪ ವಿದ್ಯುತ್ ಕೇಂದ್ರಗಳಿಗೆ ಒದಗಿಸಲು ಸಾಕು ಈ ದಾಸ್ತಾನು. ಆದರೆ ಈ ಕೇಂದ್ರಗಳಿಗೆ ಕಲ್ಲಿದ್ದಲ ಸರಬರಾಜಿನ ಕೊರತೆ ಮಾತ್ರ ತಪ್ಪಿಲ್ಲ. ಕಾರಣ ಸಾವಿರಾರು ಕೋಟಿ ಲಾಭ ದೋಚಿಕೊಳ್ಳುವ ಗಣಿ ಕಂಪೆನಿಗಳ ಮಾಲೀಕರು ಗಣಿಗಾರಿಕೆ ಆಧುನೀಕರಿಸದಿರುವುದು. ಬಹುತೇಕ ಗಣಿಗಳು ಪೂರ್ಣ ಪ್ರಮಾಣದಲ್ಲಿ ಉತ್ಪಾದನೆ ಮಾಡುತ್ತಿಲ್ಲ. ಲಾಭಕ್ಕಾಗಿ ಕೃತಕವಾಗಿ ಕೊರತೆ ಸೃಷ್ಟಿಸುತ್ತಿರುತ್ತವೆ. ಅಕ್ರಮ ಗೂಂಡಾಗಿರಿಗೆ ಹೆಸರುವಾಸಿಯಾದ್ದು ಕಲ್ಲಿದ್ದಲ ಗಣಿ ಅವ್ಯವಹಾರಗಳ ಖನಿ.

೧೯೯೩ರಲ್ಲಿ ಖಾಸಗಿ ಕಂಪನಿಗಳಿಗೆ ಪ್ರೋತ್ಸಾಹ ನೀಡಲು ಕಾಯಿದೆಗೆ ತಿದ್ದುಪಡಿ ಮಾಡಲಾಯಿತು. ಹೆಚ್ಚಿನ ಉತ್ಪಾದನೆಯನ್ನು ಕೋಲ್ ಇಂಡಿಯಾ ಲಿಮಿಟೆಡ್ ಎಂಬ ಸರಕಾರಿ ಸಂಸ್ಥೆ ನಿರ್ವಹಿಸುತ್ತ ಬಂದಿತ್ತು. ೨೦೧೨ರಲ್ಲಿ ಎಲ್ಲರಿಗೂ ವಿದ್ಯುಚ್ಛಕ್ತಿ ಎಂಬ ಘೋಷಣೆಯ ಅಡಿಯಲ್ಲಿ ವಿದ್ಯುತ್ ಕಂಪೆನಿಗಳಿಗೆ ಕಲ್ಲಿದ್ದಲ ಸರಬರಾಜು ಹೆಚ್ಚಿಸುವ ಉದ್ದೇಶದಿಂದ ಸರಕಾರ ೪೪,೪೪೦ ಮಿಲಿಯ ಟನ್‌ಗಳು ನಿಕ್ಷೇಪವಿರುವ ೧೯೪ ಕಲ್ಲಿದ್ದಲ ಗಣಿಗಾರಿಕೆ ಪ್ರದೇಶವನ್ನು ಸರಕಾರಿ ಮತ್ತು ಖಾಸಗಿ ಸಂಸ್ಥೆಗಳಿಗೆ ವಿತರಿಸಿತು ೨೦೧೧ರ ಮಾರ್ಚ್ ತಿಂಗಳಲ್ಲಿ. ಈ ವ್ಯವಹಾರದಲ್ಲಿ ಅಕ್ರಮ ನಡೆದಿದೆ ಎಂಬುದೇ ಸಿಎಜಿ ಆಕ್ಷೇಪ. ಇದರಿಂದ ಖಾಸಗಿ ಕಂಪೆನಿಗಳಿಗೆ ಸುಮಾರು ೧.೮೬ ಲಕ್ಷ ಕೋಟಿ ರೂ.ಗಳು ಲಾಭವಾಗುವುದೆಂದು ಸಿಎಜಿ ವರದಿ ಅಂದಾಜು ಮಾಡಿದೆ. ಸರಕಾರ ವಿತರಣೆಯನ್ನು ಹರಾಜು ಮಾಡಿದ್ದರೆ ಸರಕಾರಕ್ಕೆ ಇಷ್ಟು ಹಣ ಬರುತ್ತಿತ್ತು ಎಂದು ಹೇಳಿದೆ. ಈ ಅವ್ಯವಹಾರದಲ್ಲಿ ಯಾರು ಯಾರಿಗೆ ಎಷ್ಟೆಷ್ಟು ಪಾಲು ದೊರೆತಿದೆ ಎನ್ನುವುದು ನಿಷ್ಪಕ್ಷಪಾತವಾದ ವಿಚಾರಣೆಯಿಂದ ಮಾತ್ರ ತಿಳಿಯಲು ಸಾಧ್ಯ. ಸರಕಾರ ಸಿಎಜಿ ವರದಿಯನ್ನು ಸಾರಾ ಸಗಟಾಗಿ ತಳ್ಳಿ ಹಾಕಿದೆ. ಅದು ಮಾಡಿರುವ ಅಂದಾಜು ಸರಿಯಲ್ಲ ಎನ್ನುವುದು ಒಂದು ವಾದವಾದರೆ, ಇನ್ನೊಂದು ಈ ಹಂಚಿಕೆಯಲ್ಲಿ ಸಂಬಂಧಪಟ್ಟ ರಾಜ್ಯಗಳ ಹೊಣೆಯೇ ಹೆಚ್ಚು ಎನ್ನುವುದು. ಕಲ್ಲಿದ್ದಲ ನಿಕ್ಷೇಪ ಅಧಿಕವಾಗಿರುವ ರಾಜ್ಯಗಳು ಭಾಜಪ ಆಡಳಿತದಲ್ಲಿವೆ ಎನ್ನುವುದನ್ನು ಗಮನಿಸಬೇಕು.

ವಿವಾದ ಈಗ ನ್ಯಾಯಾಲಯದ ಮೆಟ್ಟಿಲೇರಿದೆ. ಸರ್ವೋಚ್ಚ ನ್ಯಾಯಾಲಯದಲ್ಲಿ ಸಲ್ಲಿಸಲಾಗಿರುವ ಸಾರ್ವಜನಿಕ ಹಿತಾಸಕ್ತಿ ಅರ್ಜಿಯನ್ನು ವಿಚಾರಣೆಗೆ ಸ್ವೀಕರಿಸಿದೆ. ಅರ್ಜಿ ತಿರಸ್ಕರಿಸಲು ಸರಕಾರದ ವಾದವನ್ನು ತಳ್ಳಿಹಾಕಿದ ನ್ಯಾಯಾಲಯ ಸರಕಾರದಿಂದ ವಿವರಣೆ ಕೇಳಿದೆ. ಪಾರ್ಲಿಮೆಂಟಿನ ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯೂ ಈ ವಿವಾದವನ್ನು ಕೈಗೆತ್ತಿಕೊಂಡಿದೆ. ಈ ವಿಚಾರಣೆಗಳ ಫಲಿತಾಂಶವನ್ನು ಕಾದು ನೋಡಬೇಕಿದೆ.

ಏನೇ ಆಗಲಿ, 'ಕೋಲ್‌ಗೇಟ್' ಪ್ರಕರಣ ಎಂದೇ ಹೆಸರಾಗಿರುವ ಈ ಪ್ರಕರಣದಲ್ಲಿ ಸರಕಾರದ ನಿಲುವು ಎಳ್ಳಷ್ಟೂ

ಸಮರ್ಥನೀಯವಲ್ಲ. ಸಂವಿಧಾನಬದ್ಧವಾಗಿ ಸ್ಥಾಪಿತವಾಗಿರುವ ಸಿಎಜಿ ವರದಿಯನ್ನು ಸಾರಾಸಗಟಾಗಿ ತಳ್ಳಿಹಾಕುವುದು ಒಳ್ಳೆಯ ಸಂಪ್ರದಾಯವಲ್ಲ. ಕೇಂದ್ರ ಸರಕಾರ ಈ ಬಗ್ಗೆ ತನಿಖೆ ನಡೆಸಿ ಸಂಬಂಧಪಟ್ಟವರನ್ನು ಗುರುತಿಸಿ ಕ್ರಮ ಕೈಗೊಳ್ಳಲು ಮುಂದಾಗಬೇಕಿತ್ತು. ಬದಲು, ಇಲ್ಲದ ಸಬೂಬು ಹೇಳಿ ಜಾರಿಕೊಳ್ಳುವ ಪ್ರಯತ್ನ ನಡೆಸಿರುವುದು ಸರಿಯಲ್ಲ. ಹಾಗಾಗಿ, ಸರಕಾರ ಕೂಡಲೇ ಈ ಹಗರಣದ ಬಗ್ಗೆ ನಿಷ್ಪಕ್ಷಪಾತವಾದ ತನಿಖೆ ನಡೆಸಬೇಕೆಂಬುದು ಸೂಕ್ತ ಮಾರ್ಗ. ಅದು ಬಿಟ್ಟು ಮನಮೋಹನ ಸಿಂಗ್ ಸರಕಾರ ಜನರ ಗಮನವನ್ನು ಬೇರೆ ಕಡೆಗೆ ಹರಿಸಲು ನೋಡುತ್ತಿದೆ. ವಿವಾದಾತ್ಮಕವಾದ ಸುಧಾರಣೆಗಳನ್ನು ಜಾರಿಗೆ ತರಲು ಮುಂದಾಗದೆ ಸಮ್ಮಿಶ್ರ ಸರಕಾರದಲ್ಲಿ ಮಿತ್ರಪಕ್ಷಗಳ ಅಂಗೀಕಾರವನ್ನು ಪಡೆಯದೆ ಮನಮೋಹನ ಸಿಂಗ್ ಮತ್ತು ಅವರ ಪರಿವಾರದವರು ಬಂಡವಾಳಶಾಹಿ ವ್ಯವಸ್ಥೆಯನ್ನು ಬಲಗೊಳಿಸಲು ಆರ್ಥಿಕ ಸುಧಾರಣೆಯ ಹೆಸರಿನಲ್ಲಿ ಹಲವು ನಿರ್ಧಾರಗಳನ್ನು ಕೈಗೊಂಡಿದ್ದಾರೆ. ಅವುಗಳಲ್ಲಿ ವಿದೇಶಿ ಬಂಡವಾಳಕ್ಕೆ ಮುಕ್ತ ಅವಕಾಶಗಳನ್ನು ಕಲ್ಪಿಸಲು ಘೋಷಿಸಿರುವ ಕ್ರಮಗಳೂ ಒಂದು. ಇದರಲ್ಲಿ ಚಿಲ್ಲರೆ ಮಾರಾಟ ಕ್ಷೇತ್ರದಲ್ಲಿ ವಿದೇಶಿ ಬಂಡವಾಳಕ್ಕೆ ಅವಕಾಶ ಕಲ್ಪಿಸಿದೆ. ಸಾರ್ವಜನಿಕರ ಗಮನವನ್ನು ಬೇರೆ ಕಡೆಗೆ ತಿರುಗಿಸುವುದರಲ್ಲಿ ಕಾಂಗ್ರೆಸ್ ಚೆನ್ನಾಗಿ ನುರಿತಿದೆ. ಆದರೆ ಜನತೆ ಇದಕ್ಕೆ ಸರಿಯಾದ ಪ್ರತ್ಯುತ್ತರ ನೀಡುತ್ತಾರೆ.

## ಪ್ರಭುತ್ವಕ್ಕೆ ಕಿವಿ, ಕರುಳು ಇರಬೇಕು

ಪ್ರಭುತ್ವ ಯಾವುದೇ ಇರಲಿ, ಎಷ್ಟೇ ಬಲಿಷ್ಠವಾಗಿರಲಿ ಪ್ರಜೆಗಳ ಕೂಗಿಗೆ ಕಿವಿಗೊಡದಿದ್ದರೆ, ಜನರ ನೋವಿಗೆ ಕರುಳ ಮಿಡಿತ ತೋರದಿದ್ದರೆ ಆ ಪ್ರಭುತ್ವ ನಾಶವಾಗುತ್ತದೆ. ಪ್ರಭು ಪ್ರಭುತ್ವ ಪ್ರಜಾಪ್ರಭುತ್ವ ಯಾವುದೂ ಇದಕ್ಕೆ ಹೊರತಲ್ಲ. ಇತ್ತೀಚಿನ ದಿನಗಳಲ್ಲಿ ಮಧ್ಯ ಪೂರ್ವ ದೇಶಗಳಲ್ಲಿ ಉರುಳಿಬಿದ್ದ ಪ್ರಭುತ್ವಗಳು ಜನತೆಯೊಂದಿಗೆ ಸಂವಹನ, ಸಂವೇದನೆಯನ್ನು ಕಳೆದುಕೊಂಡ ತಾಜಾ ಉದಾಹರಣೆಗಳು ನಮ್ಮ ಮುಂದಿವೆ. ನಮ್ಮ ದೇಶದಲ್ಲಿ ಗುತ್ತೇದಾರಿ ರಾಜಕಾರಣವನ್ನು ಮಾಡಿದ ಕಾಂಗ್ರೆಸ್ ಸರಕಾರ ಅಧಿಕಾರ ಕಳೆದುಕೊಂಡು, ಗುತ್ತೇದಾರಿಕೆ ಶಕ್ತಿಯನ್ನೂ ಕಳೆದುಕೊಂಡು ಇಂದು ಅಧಿಕಾರಕ್ಕಾಗಿ ಪ್ರಾದೇಶಿಕ ಪಕ್ಷಗಳ ಮುಂದೆ ಅಂಗಲಾಚುತ್ತಿದೆ. ದೇಶದ ಕೇಂದ್ರ ಹಾಗೂ ಬಹುತೇಕ ರಾಜ್ಯಗಳಲ್ಲಿ ರಾಜಕೀಯ ಪಕ್ಷಗಳು ಪಾಳಿಯ ಪ್ರಕಾರ ಅಧಿಕಾರಕ್ಕೆ ಬರುತ್ತಿವೆ. ಅಧಿಕಾರ ಕಳೆದುಕೊಂಡ ಪಕ್ಷ ತನ್ನ ದುರಾಡಳಿತವನ್ನು, ಜನತೆಯ ನೋವಿಗೆ ಸ್ಪಂದಿಸದೇ ನಡೆಸಿದ ಆಡಳಿತವನ್ನು ವಿಮರ್ಶೆ ಮಾಡಿಕೊಳ್ಳುವುದಿಲ್ಲ. ಅಧಿಕಾರದಲ್ಲಿದ್ದಾಗ ಅವರ ಪಂಚೇಂದ್ರಿಯಗಳೇ ನಿಷ್ಕ್ರಿಯವಾಗಿದ್ದವೇನೋ ಎಂಬಂತೆ ವರ್ತಿಸಿರುತ್ತಾರೆ.

ಇತ್ತೀಚಿನ ದಿನಗಳಲ್ಲಿ ಮನವಿ, ಧರಣಿ, ಪ್ರತಿಭಟನೆ, ರ್‍ಯಾಲಿ, ಇಂಥ ಯಾವ ಚಟುವಟಿಕೆಗಳಿಗೂ ನಮ್ಮ ಆಡಳಿತಾರೂಢ ಪಕ್ಷಗಳು ಕಿವಿಗೊಡುತ್ತಿಲ್ಲ. ಕರ್ನಾಟಕದಲ್ಲಿ ಮೊನ್ನೆ (ದಿನಾಂಕ ೧೩-೧೪ ಸೆಪ್ಟೆಂಬರ್) ನಡೆದ ಸಾರಿಗೆ ನೌಕರರ ಮುಷ್ಕರವನ್ನೇ ಗಮನಿಸಿದರೆ ಇದು ಮನದಟ್ಟಾಗುತ್ತದೆ. ಎರಡು ದಿನ ಚಳುವಳಿ ನಡೆಸಿದ ಸಾರಿಗೆ ನೌಕರರ ಬೇಡಿಕೆಯಾದರೂ ಏನು ಎಂದರೆ 'ನಮ್ಮನ್ನು ಕರೆದು ಮಾತನಾಡಿ' ಎಂಬುದು. ಪ್ರಜಾಪ್ರಭುತ್ವಕ್ಕೆ ಇದಕ್ಕಿಂತ ದುರ್ಗತಿ ಇರಲಾರದು. ರಾಜ್ಯದ ಬಿ.ಜೆ.ಪಿ. ಸರಕಾರದ ಸಾರಿಗೆ ಮಂತ್ರಿ ತನ್ನದೇ ಇಲಾಖೆಯಲ್ಲಿನ ಒಂದು ಲಕ್ಷದ ಹತ್ತು ಸಾವಿರದಷ್ಟು ಸಂಖ್ಯೆಯಲ್ಲಿರುವ ಕಾರ್ಮಿಕರನ್ನು ಕರೆದು ಮಾತನಾಡಿಸಲೂ ಸಿದ್ಧನಿರಲಿಲ್ಲ. ಕೈಯ್ಯಲ್ಲಿ ಬಂದೂಕು ಹಿಡಿದು ಕಾಡಿನಲ್ಲಿರುವ ನಕ್ಸಲೈಟ್‌ರನ್ನು ಕರೆದು 'ಬನ್ನಿ ಮಾತನಾಡಿ' ಎಂದು ಗೋಗರೆವ ಸರಕಾರ ಕೈಯಲ್ಲಿ ಮನವಿ ಹಿಡಿದು ನಿಂತ ಒಂದು ಲಕ್ಷ ಹತ್ತು ಸಾವಿರ ಕಾರ್ಮಿಕರ ಪ್ರತಿನಿಧಿಗಳನ್ನು ಮಾತನಾಡಿಸಲು ಸಿದ್ಧವಾಗಿಲ್ಲ. ಇದೇನನ್ನು ತೋರಿಸುತ್ತದೆ ? ಮನವಿಗೆ ನಾವು ಬಗ್ಗುವುದಿಲ್ಲ, ಬಂದೂಕು ಹಿಡಿದರೆ ಮಾತನಾಡುತ್ತೇವೆ ಎಂಬ ಸಂದೇಶ ಕೊಡುವುದಿಲ್ಲವೆ ?

ಸಾರಿಗೆ ನೌಕರರ ಎರಡು ದಿನದ ಚಳುವಳಿಯ ಸಂದರ್ಭದಲ್ಲಿ ಕರ್ನಾಟಕ ರಸ್ತೆ ಸಾರಿಗೆ ಇಲಾಖೆಯ ಒಳಗೆ ಬಡಪಾಯಿ ಕಾರ್ಮಿಕರ ಮೇಲೆ ನಡೆಯುತ್ತಿರುವ ದೌರ್ಜನ್ಯ, ಶೋಷಣೆಯ ಸಂಗತಿಗಳು ಬಯಲಾದವು. ಮಾಧ್ಯಮದವರು ರಾಜ್ಯದ ಜನತೆ ಬೆಚ್ಚಿಬೀಳುವಂಥ ಸಂಗತಿಗಳನ್ನು ಬಯಲಿಗಿಟ್ಟರು. ಕರ್ನಾಟಕದಲ್ಲಿ ಜನತೆಯಿಂದ ಆಯ್ಕೆಯಾದ ಸರಕಾರಗಳು ಕಳೆದ ೧೬ ವರ್ಷಗಳಿಂದ ಸಾರಿಗೆ ಸಂಸ್ಥೆಯಲ್ಲಿ ಸರ್ವಾಧಿಕಾರಿ ಆಡಳಿತ ನಡೆಸಿವೆ. ಅದರಲ್ಲಿ ಕಾಂಗ್ರೆಸ್, ಜೆಡಿಎಸ್, ಬಿ.ಜೆ.ಪಿ. ಎಲ್ಲ ಪಕ್ಷಗಳದ್ದೂ ಪಾಲಿದೆ. ಸಾರಿಗೆ ಸಂಸ್ಥೆಯಲ್ಲಿ ಕಾರ್ಮಿಕ ಸಂಘಗಳಿಗೆ ಚುನಾವಣೆ ನಡೆಯುತ್ತದೆ. ಪ್ರತಿ ನಾಲ್ಕು ವರ್ಷಗಳಿಗೊಮ್ಮೆ ಚುನಾವಣೆ ನಡೆಸಿ ಬಹುಮತ ಪಡೆದ ಸಂಘಟನೆಗೆ ಮಾನ್ಯತೆ ಕೊಟ್ಟು ಆ ಸಂಘಟನೆಯ ಜೊತೆ ಸರಕಾರ (ಆಡಳಿತ ಮಂಡಲಿ) ಪ್ರತಿ ನಾಲ್ಕು ವರ್ಷಕ್ಕೊಮ್ಮೆ ಕಾರ್ಮಿಕರ ವೇತನ ಭತ್ಯೆ ಇತ್ಯಾದಿ ಸೌಲಭ್ಯಗಳ ಕುರಿತು ಒಪ್ಪಂದ ಮಾಡಿಕೊಳ್ಳುತ್ತದೆ. ಆದರೆ ೧೯೯೫ರಲ್ಲಿಯೇ ಕೊನೆಯ ಒಪ್ಪಂದವಾಯಿತು. ೧೯೯೭ರಲ್ಲಿ ಕಾರ್ಮಿಕ ಸಂಘಟನೆಗಳಿಗೆ ನಡೆದ ಚುನಾವಣೆಯೇ ಕೊನೆಯದು. ಆ ಚುನಾವಣೆಯಲ್ಲಿ ಎಡಪಂಥೀಯ ಧೋರಣೆಯ ಎ.ಐ.ಟಿ.ಯು.ಸಿ. ನಾಯಕತ್ವದ ಕೆ.ಎಸ್.ಆರ್.ಟಿ.ಸಿ. ಸ್ಟಾಫ್ ಆ್ಯಂಡ್ ವರ್ಕರ್ಸ್ ಫೆಡರೇಶನ್ ಬಹುತೇಕ ವಿಭಾಗಗಳಲ್ಲಿ ಬಹುಮತ ಪಡೆದು ಆಯ್ಕೆ


ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ







**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಆಯಿತು. ಕಾರ್ಮಿಕರ ಹಕ್ಕುಗಳಿಗಾಗಿ ಹಲವಾರು ಹೋರಾಟಗಳನ್ನು ನಡೆಸಿತು. ಸಂಸ್ಥೆಯಲ್ಲಿ ನಡೆದ ಭ್ರಷ್ಟಾಚಾರಗಳನ್ನು ವಿರೋಧಿಸಿತು. ಎಲ್ಲಕ್ಕಿಂತ ಮುಖ್ಯವಾಗಿ ೧೯೯೭ರಲ್ಲಿ ಸರಕಾರ ಸಾರಿಗೆ ಸಂಸ್ಥೆಯನ್ನು ವಿಭಜಿಸಿ ನಾಲ್ಕು ಸಂಸ್ಥೆಗಳನ್ನಾಗಿ ಮಾಡಲು ಹೊರಟಿತು. (ಈಗ ನಾಲ್ಕು ವಿಭಾಗಗಳಾಗಿ ವಿಂಗಡಿಸಿದ್ದಾರೆ. ಇದು ಸಾರಿಗೆ ಸಂಸ್ಥೆಯನ್ನು ಖಾಸಗೀಕರಣಗೊಳಿಸುವ ಹುನ್ನಾರ). ಹೀಗೆ ನಾಲ್ಕು ವಿಭಾಗಗಳನ್ನಾಗಿ ಮಾಡಿ ಸಾರಿಗೆ ಸಂಸ್ಥೆಯನ್ನು ಖಾಸಗೀಕರಣ ಮಾಡುವ ಹುನ್ನಾರವನ್ನು ಕಾರ್ಮಿಕ ಸಂಘಟನೆ ವಿರೋಧಿಸಿತು. ನ್ಯಾಯಾಲಯದ ಮೆಟ್ಟಿಲು ಹತ್ತಿತು. ಅಲ್ಲಿಗೆ ಸರಕಾರ, ಸಾರಿಗೆ ಸಂಸ್ಥೆ ಆಡಳಿತ ಮಂಡಲಿ, ಭ್ರಷ್ಟ ಅಧಿಕಾರಿಗಳು ಸೇರಿ ಸಾರಿಗೆ ಸಂಸ್ಥೆಯಲ್ಲಿ ಕಾರ್ಮಿಕ ಸಂಘಟನೆಗಳನ್ನು ನಿರ್ನಾಮ ಮಾಡುವ ತೀರ್ಮಾನ ತೆಗೆದುಕೊಂಡರು. ಭ್ರಷ್ಟ ಅಧಿಕಾರಿಗಳು ಎಷ್ಟು ಬಲವಾಗಿದ್ದರೆಂದರೆ ಯಾವುದೇ ಪಕ್ಷದ ಸರಕಾರ ಬಂದರೂ ಕಾರ್ಮಿಕರೊಡನೆ, ಸಂಘಟನೆಗಳೊಡನೆ ಮಾತನಾಡಲಾಗದಂಥ ವಾತಾವರಣ ನಿರ್ಮಿಸಿದರು. ೧೯೯೬ರಿಂದ ೨೦೦೮ರ ವರೆಗೆ ಕಾರ್ಮಿಕರ ಪ್ರಾತಿನಿಧ್ಯಕ್ಕಾಗಿ ಚುನಾವಣೆಯನ್ನೂ ನಡೆಸದೆ ಕಾರ್ಮಿಕ ಸಂಘಟನೆಗಳೊಂದಿಗೆ ಮಾತುಕತೆಯನ್ನೂ ಮಾಡದೆ ನಾಲ್ಕು ಬಾರಿ ಏಕಪಕ್ಷೀಯವಾಗಿ ತೀರ್ಮಾನ ತೆಗೆದುಕೊಂಡು, ನ್ಯಾಯಾಲಯದ ಆದೇಶಗಳನ್ನೂ ಧಿಕ್ಕರಿಸಿ ಕಾರ್ಮಿಕರ ಮೇಲೆ ಹೇರಿದರು.

ಸಾರಿಗೆ ಸಂಸ್ಥೆಯಲ್ಲಿ ಕಾನೂನೇ ಇಲ್ಲದ ವಾತಾವರಣ ನಿರ್ಮಾಣವಾಯಿತು. ಧ್ವನಿ ಎತ್ತಿದ ಕಾರ್ಮಿಕರನ್ನು ಅಮಾನತು, ವಜಾ ಶಿಕ್ಷೆಗೊಳಪಡಿಸಲಾಯಿತು. ಕಾರ್ಮಿಕರ ಕೌಟುಂಬಿಕ ಸಮಸ್ಯೆ ಉಂಟುಮಾಡಲು ದೂರದ ಊರಿಗೆ ವರ್ಗಾವಣೆ ಮಾಡಲಾಯಿತು. ಸರಕಾರಗಳು ಭ್ರಷ್ಟ ಅಧಿಕಾರಿಗಳಿಗೆ ಕಡಿವಾಣ ಹಾಕದೇ ಮಂತ್ರಿ ಮಾನ್ಯರು ಅವರ ಭ್ರಷ್ಟಾಚಾರದಲ್ಲಿ ಪಾಲು ಪಡೆದಾಗ ಭ್ರಷ್ಟರ ಆರ್ಭಟ ಮಿತಿ ಮೀರಿತು. ಬಿ.ಜೆ.ಪಿ. ಎಂಬ ಭ್ರಷ್ಟ ಜನರ ಪಕ್ಷವೇ ಅಧಿಕಾರಕ್ಕೆ ಬಂದಮೇಲೆ ಸಾರಿಗೆ ಸಂಸ್ಥೆಯ ಭ್ರಷ್ಟ ಅಧಿಕಾರಿಗಳ ಸುಲಿಗೆಗೆ ದೊಡ್ಡಮಟ್ಟದ ಬೆಂಬಲ ಸಿಕ್ಕಿತು. ಸಭೆ ನಡೆಸಿದ ಕಾರ್ಮಿಕರ ಮೇಲೆ ೩೦೦ ಪೊಲೀಸ್ ಕೇಸ್‌ಗಳನ್ನು ಹಾಕಲಾಗಿದೆ. ಡಿಪೊ, ಬಸ್ ನಿಲ್ದಾಣ ಸುತ್ತಮುತ್ತ ಕಾರ್ಮಿಕ ನಾಯಕರು ಬರದಂತೆ ರಾಜ್ಯದ ಎಲ್ಲ ಕಡೆ ಇಂಜೆಂಕ್ಷನ್ ಆದೇಶ ಪಡೆಯಲಾಗಿದೆ. ಸಂಸ್ಥೆ ನಡೆಯುವುದೇ ಚಾಲಕ, ನಿರ್ವಾಹಕ, ಮೆಕ್ಯಾನಿಕ್, ನೌಕರ, ಸೆಕ್ಯೂರಿಟಿ ಸಿಬ್ಬಂದಿಯಿಂದ. ಇದನ್ನು ಮನಗಾಣದ ಅಧಿಕಾರಿಗಳು ತಮ್ಮಿಂದಲೇ ಸಂಸ್ಥೆ ಎಂಬ ಅಹಂನಿಂದ ಕಾರ್ಮಿಕರ ಮೇಲೆ ದಬ್ಬಾಳಿಕೆ ನಡೆಸಿದರು. ಡ್ಯೂಟಿ ಕೊಡಲು ಲಂಚ, ರೂಟ್ ಕೊಡಲು ಲಂಚ, ರಜೆ ಕೊಡಲು ಲಂಚ, ಹಕ್ಕಿನ ವರ್ಗಾವಣೆಗೂ ಲಂಚ ಹೀಗೆ ಎಲ್ಲ ಹಂತದಲ್ಲಿ ಲಂಚದ ಬೆಂಕಿ ಸುಡುತ್ತಿತ್ತು. ಸಣ್ಣಪುಟ್ಟ ತಪ್ಪುಗಳಿಗೆ ದೊಡ್ಡ ಪ್ರಮಾಣದ ದಂಡ, ಅಮಾನತು ಶಿಕ್ಷೆಗೆ ನೌಕರರು ಬಲಿಯಾದರು. ಬಸ್‌ನಲ್ಲಿ ಪ್ರಯಾಣಿಕ ಟಿಕೆಟ್ ಪಡೆಯದಿದ್ದರೆ ನಿರ್ವಾಹಕನಿಗೆ ದಂಡ. ಬಸ್ ಹೆಚ್ಚು ಡೀಸೆಲ್ ಕುಡಿದರೆ, ಬಸ್ ತಡವಾಗಿ ಬಂದರೆ ಚಾಲಕನಿಗೆ ದಂಡ. ಮೆಕ್ಯಾನಿಕ್‌ಗಳು ಹಗಲು ಕೆಲಸ ಮಾಡಿ ರಾತ್ರಿ ಮನೆಗೂ ಹೋಗದೆ ಕೆಲಸ ಮುಂದುವರಿಸಬೇಕಾದ ಸ್ಥಿತಿ, ನಿರಾಕರಿಸಿದರೆ ಗೈರುಹಾಜರಿ, ವೇತನ ಕಡಿತ. ಚಾಲಕರು ಎರಡೆರಡು ಕಡ್ಡಾಯ ಡ್ಯೂಟಿ ಮಾಡಿ ನಿದ್ದೆ ಇಲ್ಲದೆ ಅಪಘಾತಗಳಾಗಿವೆ. ಇದೆಲ್ಲಕ್ಕಿಂತ ದೊಡ್ಡ ಸುಲಿಗೆಯೆಂದರೆ ಒಂದು ಲಕ್ಷ ಹತ್ತು ಸಾವಿರ ನೌಕರರಲ್ಲಿ ೩೩ ಸಾವಿರ ಟ್ರೈನಿಗಳು ಅಂದರೆ ತರಬೇತಿ ಹೊಂದುತ್ತಿರುವವರು, ಎರಡು ವರ್ಷದಲ್ಲಿ ಮುಗಿಯಬೇಕಾದ ಅವರ ತರಬೇತಿ ಆರು ವರ್ಷ, ಕೆಲವರಿಗೆ ಎಂಟು ವರ್ಷವಾದರೂ ಮುಗಿದಿಲ್ಲ. ಕಾರಣ ಅವರು ಪರಿಣತಿ ಪಡೆದಿಲ್ಲವೆಂದಲ್ಲ ಅವರನ್ನು ನಾಲ್ಕು ಸಾವಿರದಿಂದ ಆರು ಸಾವಿರ ವೇತನಕೊಟ್ಟು ದುಡಿಸಿಕೊಳ್ಳುವುದು. ಎಷ್ಟೋ ಮಹಿಳಾ ಟ್ರೈನಿಗಳು ಇಂದಿಲ್ಲಾ ನಾಳೆ ಕೆಲಸ ಖಾಯಂ ಆಗಬಹುದೆಂಬ ಆಸೆಯಿಂದ ಮದುವೆಯನ್ನೇ ಮುಂದೂಡಿದ್ದಾರೆ. ಕೊಡುವ ನಾಲ್ಕು ಸಾವಿರ ರೂಪಾಯಿಯಲ್ಲಿಯೇ ದಂಡದ ಕಾಟ ಬೇರೆ. ಇಂಥ ಎಲ್ಲ ಶೋಷಣೆ, ದಬ್ಬಾಳಿಕೆಯನ್ನು ತಾಳಲಾಗದೇ ನೌಕರರು ಬಸ್ ಡಿಪೋಗಳಲ್ಲಿಯೇ ಆತ್ಮಹತ್ಯೆ ಮಾಡಿಕೊಂಡ ಉದಾಹರಣೆಗಳಿವೆ. ಎಷ್ಟೋ ಜನ ಈ ಕೆಲಸವೇ ಬೇಡ ಎಂದು ರಾಜಿನಾಮೆ ಕೊಟ್ಟು ಹೋಗಿದ್ದಾರೆ.

ಕಳೆದ ೧೬ ವರ್ಷಗಳಿಂದ ತುಳಿತಕ್ಕೊಳಗಾದ ಕಾರ್ಮಿಕ ಸಂಘಟನೆಗಳು ಕೊನೆಗೂ ಒಂದಾಗಿ ಹೋರಾಟಕ್ಕೆ ಕರೆಕೊಟ್ಟವು. ಏಪ್ರಿಲ್ ೨೭ರಂದೇ ಮುಷ್ಕರ ಮಾಡಬೇಕೆಂದು ಕರೆ ನೀಡಿದವು. ಮ್ಯಾನೇಜ್‌ಮೆಂಟ್ ಮಾತುಕತೆಗೆ ಕರೆವ ಭರವಸೆ ನೀಡಿತು. ಅವರ ಮಾತನ್ನು ನಂಬಿ, ಜನರಿಗಾಗುವ ತೊಂದರೆಯನ್ನು ಗಮನಿಸಿ ಮುಷ್ಕರವನ್ನು ಹಿಂದೆ ಪಡೆದವು. ಆದರೆ ಸರಕಾರ/ಮ್ಯಾನೇಜ್‌ಮೆಂಟ್ ಮಾತುಕತೆಗೆ ಕರೆಯದೇ ಕಾರ್ಮಿಕ ನಾಯಕರ ವರ್ಗಾವಣೆ, ವಜಾ ಕೆಲಸವನ್ನು ತೀವ್ರಗೊಳಿಸಿ ಕಾರ್ಮಿಕ ಸಂಘಟನೆಗಳ ಕರೆಗೆ ಓಗೊಡದಂತೆ ಕಾರ್ಮಿಕರನ್ನು ಹೆದರಿಸಿತು. ದಾರಿ ಕಾಣದ ಕಾರ್ಮಿಕ ನಾಯಕರು ಸಪ್ಟೆಂಬರ್ ೧೩-೧೪ರಂದು ಮುಷ್ಕರಕ್ಕೆ ಕರೆಕೊಟ್ಟರು. ರಾಜ್ಯದಲ್ಲಿ ೨೩,೦೦೦ ಬಸ್‌ಗಳಿವೆ. ಬಹುತೇಕ ಬಸ್‌ಗಳು ಬೀದಿಗಿಳಿಯಲಿಲ್ಲ. ಸಾರಿಗೆ ಮಂತ್ರಿ ಪ್ರತಿಶತ ೮೦ರಷ್ಟು ಬಸ್‌ಗಳು ಓಡುತ್ತಿವೆ ಎಂದು ಸುಳ್ಳು ಹೇಳಿದರು. ವಾಸ್ತವದಲ್ಲಿ ಪ್ರತಿಶತ ೮೦ರಷ್ಟು ಬಸ್‌ಗಳು ಮುಷ್ಕರ ಹೂಡಿದ್ದವು. ಆಗಲೂ ಕಣ್ಣು ತೆರೆಯದ ಸಾರಿಗೆ ಮಂತ್ರಿ ಅಧಿಕಾರಿಗಳ ಮಾತುಕೇಳಿ ಕಾರ್ಮಿಕರ ಬಂಧನ ಸತ್ರ ಆರಂಭಿಸಿದರು. ಚಿಕ್ಕೋಡಿಯಲ್ಲಿ ಮುಷ್ಕರನಿರತ ಕಾರ್ಮಿಕರು ಸಿಗದೇ ಇದ್ದಾಗ ಅವರ ಮಕ್ಕಳನ್ನು ಬಂಧಿಸಿ ಕರೆದೊಯ್ದ ನೀಚ ಘಟನೆಯೂ ನಡೆಯಿತು. ಸಾರಿಗೆ ಮಂತ್ರಿ, ಗೃಹಮಂತ್ರಿ ಒಬ್ಬರೇ ಇದ್ದಾಗ ಸಾರಿಗೆ ಅಧಿಕಾರಿ ಯಾರೋ, ಪೊಲೀಸ್ ಅಧಿಕಾರಿ ಯಾರೋ ತಿಳಿಯದಾಗಿತ್ತು. ಇಬ್ಬರ ಕೆಲಸವೂ ಒಂದೇ – ಮುಷ್ಕರವನ್ನು ವಿಫಲಗೊಳಿಸುವುದು. ಇದಕ್ಕಾಗಿ ಸರಕಾರ ಎಸ್ಮಾ (ಅಗತ್ಯ ಸೇವಾ ನಿರ್ವಹಣಾ ಕಾನೂನು) ಜಾರಿಗೆ ತಂದು ಕೆಲಸಕ್ಕೆ ಹಾಜರಾಗದ ಕಾರ್ಮಿಕರನ್ನು ಬಂಧಿಸಿ ಜೈಲಿಗಟ್ಟುವುದಾಗಿ ಘೋಷಿಸಿತು. ಅದಕ್ಕೂ ಜಗ್ಗದ ಕಾರ್ಮಿಕರು ಜೈಲಿಗೆ ಹೋಗಲು ಸಿದ್ದರಾದರು. ಕಾರ್ಮಿಕರು ಜೈಲಿಗೆ ಹೋಗಬಹುದು. ಆದರೆ ೨೩೦೦೦ ಬಸ್ ನಡೆಸಲು ಸಚಿವರು, ಶಾಸಕರು, ಅಧಿಕಾರಿಗಳಿಂದ ಸಾಧ್ಯವಿಲ್ಲ. ಅದಕ್ಕೆ ಕಾರ್ಮಿಕರೇ ಬೇಕು. ಕೊನೆಗೂ ಸಾರಿಗೆ ಮಂತ್ರಿ ಮುಷ್ಕರದ ಎರಡನೇ ದಿನ ಸಂಜೆ ಕಾರ್ಮಿಕ ಸಂಘಟನೆಗಳ ಜಂಟಿ ಸಮಿತಿಯನ್ನು ಮಾತುಕತೆಗೆ ಕರೆದರು.

ಗಮನಿಸಬೇಕಾದ ಸಂಗತಿಯೆಂದರೆ ಯಾವಾಗ ಮಾಧ್ಯಮಗಳು ಸಾರಿಗೆ ಸಂಸ್ಥೆಯೊಳಗಿನ ಪ್ರಭುತ್ವ ಭಯೋತ್ಪಾದನೆಯನ್ನು ಬಯಲಿಗೆ ತಂದವೋ, ದಬ್ಬಾಳಿಕೆಯ ಸ್ವರೂಪವನ್ನು ಜನರಿಗೆ ತಿಳಿಸಿದವೋ ಜನ ಸರಕಾರಕ್ಕೆ ಶಾಪ ಹಾಕಿದರು. ಹಿಂದಿನ ಆಡಳಿತ ಪಕ್ಷಗಳೂ ಸೇರಿದಂತೆ ಬಿ.ಜೆ.ಪಿ. ಹೊರತುಪಡಿಸಿ ಎಲ್ಲ ರಾಜಕೀಯ ಪಕ್ಷಗಳು ಸರಕಾರದ ನೀತಿಯನ್ನು ಖಂಡಿಸಿದವು. ಎಲ್ಲದಕ್ಕಿಂತ ಮುಖ್ಯವಾಗಿ ಮುಖ್ಯಮಂತ್ರಿ ಜಗದೀಶ ಶೆಟ್ಟರ ಅವರು ಸಾರಿಗೆ ಮಂತ್ರಿ ಅಶೋಕ ಅವರಿಗೆ ಒಂದು ಮಾತು ಹೇಳುವ ಶಕ್ತಿಯನ್ನೂ ಪಡೆದಿರಲಿಲ್ಲ ಎಂಬುದು.

ಇತ್ತೀಚಿನ ದಿನಗಳಲ್ಲಿ ಪಂಚೇಂದ್ರಿಯಗಳಿಲ್ಲದ ಸರಕಾರಗಳು ಬರುತ್ತಿರುವುದರಿಂದ ಜನರ ಹೋರಾಟಗಳು ನಿರಾಶಾದಾಯಕ ಅಂತ್ಯಕಾಣುವುದೇ ಹೆಚ್ಚಾಗಿತ್ತು. ಎಸ್ಮಾದಡಿ ಜೈಲಿಗೆ ಹೋಗಲೂ ಸಿದ್ಧರಾಗಿ ತಮ್ಮ ಬದುಕನ್ನು ಪಣಕ್ಕಿಟ್ಟು ಹೋರಾಡಿ ಯಶಸ್ವಿಯಾದ ಸಾರಿಗೆ ಕಾರ್ಮಿಕರಿಗೆ ಅಭಿನಂದನೆಗಳು ಸಲ್ಲಬೇಕು.

ಇದೇ ರೀತಿ ಕೇಂದ್ರ ಸರಕಾರ ಇತ್ತೀಚೆಗೆ ಡೀಸೆಲ್ ಬೆಲೆ ಏರಿಸಿ, ಅಡುಗೆ ಅನಿಲಕ್ಕೆ ಮಿತಿಹಾಕಿದ ನೀತಿಯನ್ನು ಪ್ರತಿಭಟಿಸಿ, ಚಿಲ್ಲರೆ ವ್ಯಾಪಾರದಲ್ಲಿ ವಿದೇಶಿ ನೇರ ಬಂಡವಾಳಕ್ಕೆ ಅವಕಾಶ ಮಾಡಿಕೊಟ್ಟ ನೀತಿಯನ್ನು ವಿರೋಧಿಸಿ ಅಖಿಲ ಭಾರತ ಮಟ್ಟದಲ್ಲಿ ಬಂದ್ ಆಚರಿಸಲಾಯಿತು. ಇಷ್ಟು ತೀವ್ರವಾದ ವಿರೋಧವಿದ್ದರೂ ಮಾನ್ಯ ಮನಮೋಹನ ಸಿಂಗ್ ಅವರು ಸ್ವಲ್ಪವೂ ಅಳುಕದೆ ತಮ್ಮ ನೀತಿಯನ್ನು ಸಮರ್ಥಿಸಿಕೊಂಡಿದ್ದಾರೆ. ಬದಲಾಗಿ ೧೯೯೧ರಲ್ಲಿ ಅಂದಿನ ಪ್ರಧಾನಿ ಪಿ. ವಿ. ನರಸಿಂಹರಾವ್ ಸಂಪುಟದಲ್ಲಿ ತಾವೇ ಅರ್ಥ ಸಚಿವರಾಗಿ ಜಾರಿಗೆ ತಂದ ಜಾಗತೀಕರಣದ ನೀತಿಯನ್ನೂ ಸಮರ್ಥಿಸಿಕೊಂಡಿದ್ದಾರೆ. ಅಂದು ದೇಶದಲ್ಲಿ ಎಡಪಕ್ಷಗಳು ಆರ್ಥಿಕ ಉದಾರಿಕರಣ ನೀತಿಗೆ ತೋರಿದ ಪ್ರತಿರೋಧವನ್ನು ಟೀಕಿಸಿ, ತಮ್ಮ ನೀತಿಗಳಿಂದಾಗಿಯೇ ದೇಶ ಅಭಿವೃದ್ಧಿ ಹೊಂದುತ್ತಿದೆ, ಈಗ ಇನ್ನೂ ಹೆಚ್ಚಿನ ಅಭಿವೃದ್ಧಿ ಪಥದಲ್ಲಿ ಸಾಗುತ್ತಿದ್ದೇವೆ ಎಂದು ಹೇಳಿದ್ದಾರೆ. ಹಸಿವು, ಬಡತನ, ನಿರ್ವಸತಿ, ರೈತರ ಆತ್ಮಹತ್ಯೆ, ಬೀದಿಗೆ ಬೀಳುತ್ತಿರುವ ಕಾರ್ಮಿಕವರ್ಗ, ಬೆಲೆ ಏರಿಕೆ, ಹಣದುಬ್ಬರ, ಪಾತಾಳಕ್ಕಿಳಿಯುತ್ತಿರುವ ಅಭಿವೃದ್ಧಿ ಸೂಚ್ಯಂಕ, ಕುಸಿಯುತ್ತಿರುವ ರೂಪಾಯಿ ಮೌಲ್ಯ ಇವೆಲ್ಲ ಯಾವ ಅಭಿವೃದ್ಧಿಯ ಲಕ್ಷಣಗಳು ಎಂದು ಪ್ರಧಾನಿಗಳು ಹೇಳಬೇಕು. ಇದೆಲ್ಲ ಗೊತ್ತಾಗಬೇಕಾದರೆ ಪ್ರಭುತ್ವಕ್ಕೆ ಕಿವಿ, ಕರುಳು ಅವಶ್ಯ.

# ಶರಣಯ್ಯ ಶರಣು – ಒಬಾಮಂಗೆ ಶರಣು

ಪ್ರಧಾನಿ ಮನಮೋಹನ ಸಿಂಗರಿಗೆ ಹೊಸ ಆರ್ಥಿಕ ಸಲಹೆಗಾರ ರಾಜನ್ ಕೆಲಸಕ್ಕೆ ಸೇರಿ ಒಂದು ತಿಂಗಳೂ ಕಳೆದಿಲ್ಲ, ಅವನ ಪ್ರಭಾವ ಆಗಲೇ ವ್ಯಕ್ತವಾಗಿದೆ. ಆತ ಬಂದಿದ್ದು ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಯಿಂದ. ಚಿಕಾಗೋದಲ್ಲಿ ಆತ ಫ್ರೀಡ್‌ಮನ್ ಶಿಷ್ಯ. ಸಿಂಗ್ ಮತ್ತು ಅಹ್ಲುವಾಲಿಯ ವಿಶ್ವ ಬ್ಯಾಂಕ್ ಹಿನ್ನೆಲೆಯವರು. ಮೂವರೂ ಅಮೆರಿಕಾದ ನೇಹಿಗರು, ಒತ್ತಡಕ್ಕೆ ಮಣಿಯುವವರು. ಹೊಸ ಆರ್ಥಿಕ ಸಲಹೆಗಾರ ಒಬಾಮ ಆಶಯವೋ, ಆಜ್ಞೆಯೋ, ಅವುಗಳಲ್ಲಿ ಯಾವುದನ್ನು ಹೊತ್ತು ಬಂದನೋ; ಅಂತೂ ಆಣತಿಯಂತೆ ಕೆಲಸ ಮಾಡಿದ್ದಾನೆ. ವಾಲ್‌ಮಾರ್ಟ್ ಕಂಪನಿ ಆತನಿಗೆ ಬಾಗಿನ ನೀಡುವುದು ಖಚಿತ. ಸೆಪ್ಟೆಂಬರ್ ೧೪ರಂದು ''ಭಾರತದ ಬೆಳವಣಿಗೆಗಾಗಿ'' ಅನೇಕ ಆರ್ಥಿಕ ಸೂತ್ರಗಳನ್ನು ಸಡಿಲಿಸಿ ವಿದೇಶಿ ಬಂಡವಳಿಗರಿಗೆ ಮತ್ತು ಸ್ಥಳೀಯ ಉದ್ಯಮಿಗಳಿಗೆ ಪುಲಕ ಉಂಟು ಮಾಡಿದ ನೀತಿಗಳನ್ನು ಪ್ರಕಟಿಸಲಾಯಿತು. ಉದ್ಯಮ ಮತ್ತು ವಾಣಿಜ್ಯಗಳ ಮಾಲಿಕರ ಕೇಂದ್ರ ಸಂಸ್ಥೆಯೂ ಸೇರಿದಂತೆ ಭಾರತದ ಬಂಡವಳಿಗರು 'ಸೂರೆಯ ದಾಹ' ಇನ್ನೇನು ಇಂಗಲಿದೆ ಎಂಬ ಹುಮ್ಮಸ್ಸಿನಿಂದ ನೀತಿಯನ್ನು ಸ್ವಾಗತಿಸಿ ಸಂಭ್ರಮದಿಂದ ಸಿಂಗ್ ಅವರನ್ನು ಮೆಚ್ಚಿ ಅಭಿನಂದಿಸಿದ್ದಾರೆ. ಬಡತನ, ನಿರುದ್ಯೋಗ, ರೈತರ ಬವಣೆ, ಎಲ್ಲಾ ಕೊನೆಗಾಣುವ ಹಂತವನ್ನು ದೇಶವು ಕೆಲಕಾಲದಲ್ಲಿ ತಲುಪಲಿದೆ ಎಂಬ ಉತ್ಸಾಹದ ಮಾತುಗಳನ್ನಾಡಿ ಮೂರ್ಖರಲ್ಲದ ಜನತೆಯ ಎದುರು ಕೋಡಂಗಿಗಳಂತೆ ಮಾತನಾಡಿದ್ದಾರೆ, ಕುಣಿದಿದ್ದಾರೆ. ಉತ್ಸಾಹವೆಲ್ಲ ಅವರಷ್ಟೇ ಮಂದಿಯಲ್ಲಿ ತುಂಬಿದೆ, ದೇಶದ ಜನ ಮತ್ತು ಆರ್ಥಿಕ ತಜ್ಞರು ಅದರಲ್ಲಿ ಪಾಲ್ಗೊಂಡಿಲ್ಲ. ಸಿಂಗ್ ಅವರು ಅಧಿಕಾರ ದೊರೆತಾಗ ಕಾಂಗ್ರೆಸ್ ಪಕ್ಷದವರಾದ್ದು; ಈಗ ಅವರ ಪಕ್ಷವೊಂದನ್ನುಳಿದು ಬೇರಾವ ರಾಜಕೀಯ ಪಕ್ಷವೂ ಅವರ ನೀತಿಗಳನ್ನು ಸ್ವಾಗತಿಸಿಲ್ಲ, ಸ್ವಾಗತಿಸುವುದಿರಲಿ, ಖಂಡತುಂಡವಾಗಿ ಎಲ್ಲ ಪಕ್ಷಗಳೂ ಹೊಸ ನೀತಿಯನ್ನು ಖಂಡಿಸಿವೆ. ಭಾರತೀಯ ಜನತಾ ಪಕ್ಷಕ್ಕೆ ಸಿಂಗ್‌ರ ಹೊಸ ನೀತಿಯಲ್ಲಿ ಹುಳುಕೇನೂ ಕಾಣುವುದಿಲ್ಲ, ಬಾಯಿಮಾತಿಗೆ ಮತ್ತು ಚುನಾವಣೆಯು ಹತ್ತಿರ ಬರುತ್ತಿರುವುದರಿಂದ ನೀತಿಯನ್ನು ಟೀಕಿಸಿದೆ, ಅಷ್ಟೆ. ಆ ಪಕ್ಷದ ಪ್ರಕಾರ ''ನೀತಿಯು ಸರಿ'', ಆದರೆ ''ನಿಧಾನವಾಗಿ ಪ್ರಕಟಿಸಬೇಕಿತ್ತು.'' ಅಂದರೆ ತಾನು ಕೇಂದ್ರ ಸರ್ಕಾರದಲ್ಲಿ ಆಳುವ ಪಕ್ಷವಾದಾಗ ಎಂದರ್ಥವಿರಬೇಕು.

ಆಹಾರಧಾನ್ಯ ಮುಂತಾದವುಗಳ ಚಿಲ್ಲರೆ ಮಾರಾಟಕ್ಕೆ ವಿದೇಶಿ ಬಂಡವಾಳ ಹೂಡುವವರ ಪ್ರವೇಶವು ''ಆರ್ಥಿಕತೆಗೆ ಭಾರಿ ಅಭಿವೃದ್ಧಿಯ ದಟ್ಟಪ್ರೇರಣೆ ನೀಡುತ್ತದೆ'' ಎಂದು ಉದ್ಯಮಿಗಳ ಕೇಂದ್ರ ಹೇಳಿದೆ. ರೈತರು ತಮ್ಮ ಉತ್ಪನ್ನಗಳಿಗೆ ಲಾಭದಾಯಕ ಬೆಲೆ ಪಡೆಯಲು ಇದು ಸಾಧನವಾಗಲಿದೆಯೆಂಬ ಅಪ್ಪಟ ಸುಳ್ಳು ಮತ್ತು ಮೋಸದ ಮಾತನ್ನಾಡಿರುವ ಈ ಕೇಂದ್ರಕ್ಕೆ ರೈತರು ಲಗ್ಗೆ ಇಡಬೇಕಾದ ಸನ್ನಿವೇಶ ಉಂಟಾಗಿದೆ. ಇಲ್ಲಿಯವರೆಗೆ ಇರದಿದ್ದ ಆಧುನಿಕ ಸೌಲಭ್ಯ, ಆಡಳಿತ ವಿಧಾನ ಮತ್ತು ಮೌಲಿಕ ತಂತ್ರಜ್ಞಾನ, ಇವೆಲ್ಲಾ ವಾಲ್‌ಮಾರ್ಟ್‌ನಂತಹ ಅಂಗಡಿಗಳು ಬರುವುದರಿಂದ ಸಾಧ್ಯವಾಗುತ್ತದೆಂದು ಉದ್ಯಮಿಗಳ ಕೇಂದ್ರದ ಮಹಾಕಾರ್ಯದರ್ಶಿ ರಾಜೀವ ಕುಮಾರ ಬರೆದಿದ್ದಾರೆ. ಇದನ್ನು ಒಳಹೊಕ್ಕು ವಿಶ್ಲೇಷಿಸಿದರೆ ಈ ಕೇಂದ್ರ ಮತ್ತು ನಮ್ಮ ಪ್ರಧಾನಿಯ ಪ್ರಕಾರ ಒಬ್ಬ ವಿದೇಶಿ ಪ್ರಧಾನಮಂತ್ರಿ ಅಧಿಕಾರಕ್ಕೆ ಬಂದರೆ ಭಾರತವು ಉಜ್ವಲವಾದ ಭವಿಷ್ಯ ಹೊಂದಿರುತ್ತದೆ ಮತ್ತು ಪ್ರಸ್ತುತ ನೀತಿಯು ಆ ದಿಕ್ಕಿನಲ್ಲಿ ದೊಡ್ಡ ಹೆಜ್ಜೆಯಾಗಿದೆ ಎಂಬ ಅಭಿಪ್ರಾಯ ಮೂಡುತ್ತದೆ. ರಾಜೀವ ಕುಮಾರ್ ಹೇಳಿಕೆಯಂತೆ ಚಿಲ್ಲರೆ ಮಾರಾಟದ ಕ್ಷೇತ್ರದಲ್ಲಿ ಈ ಎಲ್ಲ ''ಆಧುನಿಕರ'' ಪಾಲು ಈಗ ಕೇವಲ ಶೇ. ೫ ಇದೆ; ಇನ್ನಿಪ್ಪತ್ತು ವರ್ಷಗಳಲ್ಲಿ ಅಬ್ಬಾ, ಎಂದರೆ ಅದು ಶೇ. ೨೦ ಆಗುತ್ತದೆ, ಅಷ್ಟೆ. ಇಂಥ ದ್ರೋಹದ ಸುಳ್ಳು ಹೇಳುವ ಕೇಂದ್ರವನ್ನು ಹೊಂದಿರುವುದು ನಮ್ಮ ದೇಶದ ದುರಂತ. ಅವರ ಲಾಭವು ಹೆಚ್ಚೆಂದರೆ ಈಗಿನ ೪೫೦ ಬಿಲಿಯನ್ ಡಾಲರು ಗಳಿಂದ ೬೫೦ಕ್ಕೆ ಏರುತ್ತದಂತೆ. (ಅವರ ಲೆಕ್ಕ ಎಲ್ಲ ಡಾಲರುಗಳಲ್ಲೇ ಎಂಬುದು ಅವರು ಯಾವ ದೇಶದ ಪರ ಎಂಬುದರ ಸೂಚನೆ). ಅಂದರೆ ನಮ್ಮ ದೇಶದ ಚಿಲ್ಲರೆ ಮಾರಾಟದ ವರ್ತಕರಿಗೆ ಯಾವ ತೊಂದರೆಯೂ ಬರುವುದಿಲ್ಲವೆಂಬುದು ಅವರ ಖೋಟಾ ಆಶ್ವಾಸನೆ. ಅವರು ಹೇಳದಿರುವ ಅಂಶ ಇದು: ಒಂದು ವಾಲ್‌ಮಾರ್ಟ್ ಅಂಗಡಿಗೆ ಕನಿಷ್ಠ ಐವತ್ತು ಎಕರೆ ಭೂಮಿ ಬೇಕು. ಯಾರ ಭೂಮಿಯನ್ನು ಕಿತ್ತುಕೊಂಡು ಅದಕ್ಕೆ ಕೊಡುತ್ತಾರೆ? ಆ ಭೂಮಿಯಲ್ಲಿ ಬೆಳೆ ಬೆಳೆಯುತ್ತಿರುವವರನ್ನು ಮತ್ತು ವಾಸಿಸುತ್ತಿರುವವರನ್ನು ಯಾವ ಸಮುದ್ರಕ್ಕೆ ಎಸೆಯುತ್ತಾರೆ?

ಇನ್ನೊಂದು ಸುಳ್ಳು ಹೀಗಿದೆ : ಚಿಲ್ಲರೆ ವ್ಯಾಪಾರಕ್ಕೆ ವಿದೇಶಿ ಬಂಡವಾಳ ಬರುವುದರಿಂದ ''ಒಂದು ಕೋಟಿ ಹೊಸ ಉದ್ಯೋಗಗಳ ಸೃಷ್ಟಿಯಾಗುತ್ತದೆ.'' ಹೌದೆ ಸ್ವಾಮಿ, ಹಾಗಿದ್ದರೆ ಈಗಾಗಲೆ ಬಂದಿರುವ ಟಾಟಾ, ರಿಲಯನ್ಸ್, ಸ್ಪೆನ್ಸರ್ಸ್, ಇತ್ಯಾದಿಗಳು ಎಷ್ಟು ಲಕ್ಷ ಉದ್ಯೋಗಗಳನ್ನು ಸೃಷ್ಟಿಮಾಡಿವೆ ಮತ್ತು ರೈತರಿಗೆ ಎಷ್ಟು ಲಾಭ ಸಂದಾಯ ಮಾಡಿವೆ? ರೈತ ಮತ್ತು ವಿದೇಶಿ ವ್ಯಾಪಾರಿಗಳ ನಡುವೆ ನೇರ ಸಂಬಂಧ ಇದ್ದು ರೈತರ ಲಾಭ ಗಮನಾರ್ಹವಾಗಿ ಹೆಚ್ಚುತ್ತದೆಂಬುದು ಸಿಂಗ್ ಅವರ ಲೆಕ್ಕಾಚಾರದ ಇನ್ನೊಂದು ಕುತಂತ್ರ. ವಿದೇಶಿ ವ್ಯಾಪಾರಿಗಳು ರೈತರಿಗೆ ಹೊಸ ತಳಿಯ ಬೀಜಗಳನ್ನು ಸರಬರಾಜು ಮಾಡಿ ಉತ್ಪನ್ನ ಹೆಚ್ಚಿಸುತ್ತಾರಂತೆ! ಇನ್ನೇನು, ನಮ್ಮ ರೈತರಿಗೆ ಆಕಾಶ ಎಟಕಿಬಿಡುತ್ತದೆ! ಅಮೆರಿಕಾದಲ್ಲಿ ಸಹ ಈ ಅಂಗಡಿಗಳ ಮಾಲಿಕರಿಂದ ಅಲ್ಲಿಯ ರೈತರಿಗೆ ಲಾಭವಾಗಿಲ್ಲ; ಅಲ್ಲಿಯ ರೈತರಿಗೆ ಲಾಭ ಬರುವುದು ಸರ್ಕಾರ ನೀಡುವ ಸಬ್ಸಿಡಿಗಳಿಂದ. ಮನಮೋಹನ ಸಿಂಗ್ ನಮ್ಮ ರೈತರಿಗೆ ಸಬ್ಸಿಡಿ ನೀಡುವುದಿಲ್ಲ. ಅವರಿಂದ ಸೆಳೆದು ವಿದೇಶಿ ಬಂಡವಳಿಗರಿಗೆ ಲಾಭ ಮಾಡಿಕೊಡುತ್ತಾರೆ. ಇಂದು ನಮ್ಮ ದೇಶದ ಮಾರಾಟ ಕ್ಷೇತ್ರದಲ್ಲಿ ಒಂದು ಕೋಟಿ ಇಪ್ಪತ್ತು ಲಕ್ಷ ಚಿಕ್ಕ ಮತ್ತು ದೊಡ್ಡ ಅಂಗಡಿಗಳಿವೆ, ನಾಲ್ಕು ಕೋಟಿ ಉದ್ಯೋಗಿಗಳಿದ್ದಾರೆ. (ಅವರ ಲಾಭ, ಸಂಬಳ, ಇವುಗಳಲ್ಲಿ ವೈಪರೀತ್ಯಗಳಿವೆಯೆಂಬುದು ಬೇರೆ ವಿಚಾರ). ವಾಲ್‌ಮಾರ್ಟ್‌ನಂಥ ಅಂಗಡಿಗಳು ಇವರನ್ನೆಲ್ಲಾ ಸ್ವಾಹಾ ಮಾಡಿಕೊಂಡು ತನ್ನ ಲಾಭ ಲೂಟಿ ಮಾಡಿ ಕೊಳ್ಳುತ್ತದೆ. ಅದನ್ನು ಮಾಡಿಕೊಳ್ಳಲು ಬೇಕಾದ ನೀತಿಯನ್ನು ಭಾರತ ಸರ್ಕಾರದಿಂದ ಪಡೆಯಲು ವಾಲ್‌ಮಾರ್ಟ್ ಎರಡು ವರ್ಷಗಳಲ್ಲಿ ೫೨ ಕೋಟಿ ರೂಪಾಯಿಗಳನ್ನು ಖರ್ಚು ಮಾಡಿದೆಯೆಂದು ಅಮೆರಿಕಾದ ವಕ್ತಾರರು ಆ ದೇಶದಲ್ಲಿ ಪ್ರಕಟಿಸಿದ್ದಾರೆ. ಆ ಹಣದಲ್ಲಿ ಎಷ್ಟು ನಮ್ಮ ದೇಶದ ಆನಂದ ಶರ್ಮನಂಥವರ ಜೇಬಿಗೆ ಹರಿದಿದೆ ಎಂಬುದನ್ನು ಊಹಿಸಿಕೊಳ್ಳಬಹುದು.

ಈಗ ಮನಮೋಹನ ಸಿಂಗ್ ಅವರು ಪ್ರಕಟಿಸಿರುವ ಬಹುತೇಕ ಎಲ್ಲ ವಿಸ್ತೃತ ನೀತಿಗಳೂ ವಿದೇಶಿ ಬಂಡವಾಳವನ್ನು ಆಕರ್ಷಿಸಲು ಸಮರ್ಥವಾದುವೆಂದು ಅವರೇ ಪ್ರಲಪಿಸಿದ್ದಾರೆ. ಈ ಬಗ್ಗೆ ಕೆಲವು ತಿಂಗಳುಗಳ ಹಿಂದೆಯೇ ಪಾರ್ಲಿಮೆಂಟಿನ ಸ್ಥಾಯಿ ಸಮಿತಿಯೊಂದು ಇಂದಿನ ಆರ್ಥಿಕ ಸನ್ನಿವೇಶವನ್ನು ಸಮೀಕ್ಷಿಸಿ ಹಣಕಾಸಿನ ವಿಷಯದಲ್ಲಿ ವಿದೇಶಿ ಬಂಡವಾಳವನ್ನು ಹರಿಸಿಕೊಳ್ಳಲು ಇವೇ ಕ್ರಮಗಳನ್ನು ಸೂಚಿಸಿತ್ತು. ಸಮಿತಿಯ ಸದಸ್ಯ ಗುರುದಾಸ್ ದಾಸ್‌ಗುಪ್ತ ಆ ಸಲಹೆಗಳನ್ನು ನಿರಾಕರಿಸಿ ತಮ್ಮ ವಿರೋಧದ ಬಗ್ಗೆ ಪ್ರತ್ಯೇಕ ಟಿಪ್ಪಣಿಯನ್ನು ವರದಿಗೆ ಲಗತ್ತಿಸಿದ್ದರು. ಆದರೆ ಮನಮೋಹನ ಸಿಂಗ್ ಸರ್ಕಾರಕ್ಕೆ ನಮ್ಮ ದೇಶದ ಜನತೆಗಿಂತಲೂ ಅಮೆರಿಕಾದ ಬಂಡವಳಿಗರು ಮತ್ತು ಅವರ ಲಾಭ ಹೆಚ್ಚು ಪ್ರಿಯವಾದುದು. ಆದ್ದರಿಂದ ದೇಶದ ಪ್ರಗತಿ, ಅಭಿವೃದ್ಧಿ, ಶೇ. ೯ರಷ್ಟು ನಿವ್ವಳ ಉತ್ಪಾದನೆ, ಎಂದೆಲ್ಲಾ ಮಂಕುಬೂದಿ ಎರಚುತ್ತಾ ನಮ್ಮ ದೇಶವನ್ನು ವಿದೇಶಿ ಬಂಡವಾಳದ ಕೈಂಕರ್ಯಕ್ಕೆ ತಳ್ಳುತ್ತಿದ್ದಾರೆ, ನಮ್ಮ ಸಾರ್ವಭೌಮತ್ವವನ್ನು ಬಿಡಿಗಾಸು ಲೆಕ್ಕಕ್ಕೆ ಇಳಿಸಿದ್ದಾರೆ. ಅದಕ್ಕಾಗಿ ಡೀಸೆಲ್ ಬೆಲೆ ಹೆಚ್ಚಿಸುತ್ತಾರೆ, ಹಣದುಬ್ಬರಕ್ಕೆ ಕಡಿವಾಣ ಹಾಕುತ್ತಿದೆಯೆಂದು ರಿಸರ್ವ್ ಬ್ಯಾಂಕನ್ನು ದೂಷಿಸುತ್ತಾರೆ, ವಾಲ್‌ಮಾರ್ಟ್‌ಗೆ ರತ್ನಗಂಬಳಿ ಹಾಸಿ ಸ್ವಾಗತ ನೀಡುತ್ತಾರೆ, ವಿಜಯ ಮಲ್ಯನಂಥವರಿಗೆ ಕೋಟಿಗಟ್ಟಲೆ ಸಾಲ ನೀಡಬೇಕೆಂದು ಬ್ಯಾಂಕುಗಳನ್ನು ಬರಿದು ಮಾಡುತ್ತಾರೆ, ವಿಮಾನಯಾನ ಕ್ಷೇತ್ರಕ್ಕೆ ವಿದೇಶಿ ಬಂಡವಳಿಗರನ್ನು ಆಹ್ವಾನಿಸುತ್ತಾರೆ, ಸಾರ್ವಜನಿಕ ಉದ್ದಿಮೆಗಳ ಸಂಪತ್ತನ್ನು ಖಾಸಗಿಯವರಿಗೆ ಹಸ್ತಾಂತರಿಸುತ್ತಾರೆ. ಇದು ಖಂಡನೀಯ, ಇದು ಜನದ್ರೋಹ, ಇದು ದೇಶದ್ರೋಹ. ಸಿಂಗ್ ಸರ್ಕಾರಕ್ಕೆ ಬೆಂಬಲ ನೀಡುತ್ತಿರುವ ಪಕ್ಷಗಳದ್ದು ಈ ಪಾಪಕಾರ್ಯದಲ್ಲಿ ಸಾಕಷ್ಟು ಪಾತ್ರವಿದೆ. ತೋರಿಕೆಗೆ ಅಬ್ಬರಿಸುವುದರಿಂದ ಅವರ ಮೋಸಕ್ಕೆ ಜನತೆ ಬಲಿ ಬೀಳುವುದಿಲ್ಲ.

ಫ್ಯಾಸಿಸಂ ಎಂಬುದು ದೂರದಲ್ಲೆಲ್ಲೋ ಇಲ್ಲ, ನಮ್ಮ ಕಡೆ ಬರುತ್ತಿದೆ, ನಮ್ಮ ಬಳಿಗೆ ನುಗ್ಗುತ್ತಿದೆ, ನಮ್ಮನ್ನು ನವ-ವಸಾಹತುಶಾಹಿಗೆ ದಬ್ಬುತ್ತಿದೆ. ಈಗ ಎಚ್ಚರ ತಪ್ಪಿದರೆ ಗಂಡಾಂತರ ತಪ್ಪಿದ್ದಲ್ಲ. ಸಿಂಗ್ ಸರ್ಕಾರಕ್ಕೆ ಧಿಕ್ಕಾರ ಹೇಳಬೇಕು, ಅದರ ಜಾಗದಲ್ಲಿ ಸುಷ್ಮಾ ಸರ್ಕಾರ ಬರಕೂಡದು, ಜನಪರ ಪ್ರಭುತ್ವ ನಮ್ಮದಾಗಬೇಕು.

*ಈ ತಿಂಗಳು (೩ನೇ ಪುಟದಿಂದ)*

ಕಾಂಗ್ರೆಸ್ ನಾಯಕರುಗಳೂ ಕೂಡ ದೆಹಲಿಯಲ್ಲಿ ಸಿಕ್ಖರ ಮೇಲೆ ನಡೆದ ಹತ್ಯಾಕಾಂಡದ ಆರೋಪ ಎದುರಿಸ ಲಾಗದೆ ಅಂತಹ ಆಸಕ್ತಿಯನ್ನು ತೋರುತ್ತಿಲ್ಲ. ಇಷ್ಟು ವರ್ಷ ಗಳಾದರೂ ದೆಹಲಿ ಹತ್ಯಾಕಾಂಡದ ಬಗ್ಗೆ ಸಮರ್ಪಕವಾದ ನ್ಯಾಯ ದೊರೆತಿಲ್ಲ. ಅದೇ ಹಾದಿ ಹಿಡಿದು ಹೋಗುತ್ತದೆ ಗುಜರಾತ್‌ನ ನರಮೇಧ.

ಒಂದು ದಶಕವಾದ ಮೇಲೆ ಗುಜರಾತಿನ ರಾಜಧಾನಿ ಅಹಮದಾಬಾದ್‌ನಲ್ಲಿರುವ ವಿಶೇಷ ನ್ಯಾಯಾಲಯ ೩೨ ಮಂದಿ ಆರೋಪಿಗಳಿಗೆ ಶಿಕ್ಷೆ ವಿಧಿಸಿರುವುದು ನೊಂದವರಿಗೆ ಸ್ವಲ್ಪ ಸಮಾಧಾನ ತಂದಿದೆ. ಇದು ಮುಖ್ಯವಾಗಿ ನರೋದಾ ಪಾಟಿಯಾ ಪ್ರಕರಣ ಕುರಿತು ಮಾತ್ರ. ಅಪರಾಧಿಗಳಿಗೆ ೨೦ ರಿಂದ ೩೦ ವರ್ಷಗಳ ಕಾರಾಗೃಹ ಶಿಕ್ಷೆ ವಿಧಿಸಿದೆ. ತಮ್ಮ ಪಕ್ಷ ಭಾಜಪದ ಕಾರ್ಯಕರ್ತರು ಯಾರೂ ಗುಜರಾತ್ ಗಲಭೆಗಳಲ್ಲಿ ನೇರವಾಗಿ ಭಾಗಿಯಾಗಿಲ್ಲ; ಗೋಧ್ರಾ ಪ್ರಕರಣಕ್ಕೆ ಸಂಬಂಧಿಸಿದಂತೆ ಸಾರ್ವಜನಿಕ ಪ್ರತಿಕ್ರಿಯೆ ಅಷ್ಟೆ. ಇದು ಮುಖ್ಯಮಂತ್ರಿ ನರೇಂದ್ರ ಮೋದಿ ಮತ್ತು ಸಂಘ ಪರಿವಾರದವರ ನಿಲುವು. ಈಗ ಈ ತೀರ್ಪಿನಿಂದ ಅವರ ಹಸಿ ಸುಳ್ಳು ಬಯಲಾಗಿದೆ. ವಿಶೇಷ ನ್ಯಾಯಾಲಯದಲ್ಲಿ ಜೀವಾವಧಿ ಶಿಕ್ಷೆಗೆ ಗುರಿಯಾಗಿರುವವರಲ್ಲಿ ಪ್ರಮುಖರು ನರೇಂದ್ರ ಮೋದಿ ಸರಕಾರದಲ್ಲಿ ಸಚಿವೆಯಾಗಿದ್ದ ಮಾಯಾ ಕೊಡ್ನಾನಿ ಮತ್ತು ಬಜರಂಗ ದಳದ ಸಂಚಾಲಕ ಬಾಬು ಬಜರಂಗಿ. ದೇಶದ ಪ್ರಧಾನಿಯಾಗುವ ಕನಸು ಕಾಣುತ್ತಿರುವ ಭಾಜಪದ ಕಣ್ಮಣಿ ನರೇಂದ್ರ ಮೋದಿ ಏನು ಹೇಳುತ್ತಾರೆ ? ನಮ್ಮ ನ್ಯಾಯಾಂಗ ವ್ಯವಸ್ಥೆ ಚುರುಕು ಗೊಂಡರೆ ಇನ್ನೆಷ್ಟು ಮಂದಿ ಸಂಘಪರಿವಾರದವರು ಸೆರೆಮನೆ ಸೇರುತ್ತಾರೊ !

✶ ✶ ✶

'ಕೂಸು ಹುಟ್ಟುವುದಕ್ಕೆ ಮುಂಚೆಯೇ ಕುಲಾವಿ' ಎಂಬ ನಾಣ್ನುಡಿ ಇದೆ. ಇನ್ನೂ ಚುನಾವಣೆಗೆ ಎರಡು ವರ್ಷ ಇದೆ. ಮನಮೋಹನ ಸಿಂಗ್ ಸರಕಾರಕ್ಕೆ ಹಠಾತ್ ಹೃದಯಾಘಾತ ಸಂಭವಿಸದಿದ್ದರೆ ಚುನಾವಣೆಗಳು ನಡೆಯುವುದು ೨೦೧೪ರಲ್ಲಿ. ಆದರೆ ಈಗಲೇ ಮುಂದಿನ ಪ್ರಧಾನಿ ಯಾರು ಎಂಬ ಬಗ್ಗೆ ಇಲೆಕ್ಟ್ರಾನಿಕ್ ಮಾಧ್ಯಮ ಗಳಲ್ಲಿ ಒಣ ಚರ್ಚೆ ಪ್ರಾರಂಭವಾಗಿದೆ. ಯುಪಿಎ-೨ ಸರಕಾರದ ಪತನಕ್ಕಾಗಿ ಈ ಮಾಧ್ಯಮ ಕ್ಷಣಗಣನೆಯಲ್ಲಿ ನಿರತವಾಗಿದೆ. ಅದು ಬಿಡಿ. ಉತ್ಪ್ರೇಕ್ಷೆಯೇ ಅದಕ್ಕೆ ಜೀವಾಳ, ನೋಡುಗರೇ ಆಹಾರ. ರಾಜಕೀಯ ಪಕ್ಷಗಳಲ್ಲಿ ಲೆಕ್ಕಾಚಾರ ಈಗಲೇ ಪ್ರಾರಂಭವಾಗಿರುವುದು ಮೋಜಿನ ಸಂಗತಿ. ಕೇಂದ್ರದಲ್ಲಿ ಅಧಿಕಾರಕ್ಕೆ ಬರಲು ಹಂಬಲಿಸು ತ್ತಿರುವ ಭಾರತೀಯ ಜನತಾ ಪಕ್ಷದಲ್ಲಿ ಪ್ರಧಾನಿ ಪಟ್ಟಕ್ಕೆ ಪೈಪೋಟಿ ಪ್ರಾರಂಭವಾಗಿದೆ. ಕಾಂಗ್ರೆಸ್ ನೇತೃತ್ವದ ಯುಪಿಎ ಇಲ್ಲವೆ ಭಾಜಪ ನೇತೃತ್ವದ ಎನ್‌ಡಿಎ ಎರಡೇ ಈಗ ಆಯ್ಕೆಗಿರುವುದು. ತೃತೀಯರಂಗ ಮುಂದೆ ಬಂದರೆ ಸ್ವಾಗತ. ಈ ಪ್ರಯೋಗ ಸಾಧ್ಯವಾದರೆ ಒಳ್ಳೆಯದು. ಅದೇನೇ ಇರಲಿ ಭಾಜಪದಲ್ಲಿ ಮಾತ್ರ ಪ್ರಧಾನಿ ಹುದ್ದೆಗಾಗಿ ತಳಮಳ. ವಾಜಪೇಯಿ ಸರಕಾರದಲ್ಲಿ ಎರಡನೇ ಸ್ಥಾನದಲ್ಲಿದ್ದ ಬಾಬ್ರಿ ಮಸೀದಿ ಧ್ವಂಸದ ರೂವಾರಿ, ರಾಮಮಂದಿರದ ಕನಸುಗಾರ ಲಾಲಕೃಷ್ಣ ಅದ್ವಾನಿ, ಈಗ ಇಳಿ ವಯಸ್ಸಿನಲ್ಲಿ ಸಂಘಪರಿವಾರದ ಅವಕೃಪೆಗೆ ಒಳಗಾಗಿದ್ದಾರೆ. ಗುಜರಾತ್ ಗಲಭೆ ಕಳಂಕ ಹೊತ್ತಿರುವ ನರೇಂದ್ರ ಮೋದಿ ಗೆಲ್ಲುವ ಕುದುರೆ ಎಂಬ ನಿರೀಕ್ಷೆ. ಆದರೆ ಬಿಹಾರದ ಮುಖ್ಯಮಂತ್ರಿ ನಿತೀಶ್ ಕುಮಾರ್ ಮೋದಿಯ ಕಡು ವಿರೋಧಿ, ಅಷ್ಟೇ ಅಲ್ಲ ಆತನೂ ಒಬ್ಬ ಅಭ್ಯರ್ಥಿ ಕೂಡ. ಇನ್ನು ಪ್ರಧಾನಿ ಪಟ್ಟಕ್ಕಾಗಿ ಕಾಯುತ್ತಿರುವ ದೊಡ್ಡ ಪಟ್ಟಿಯೇ ಭಾಜಪದಲ್ಲಿದೆ. ಶಿವಸೇನೆಯ ಸರ್ವಾಧಿಕಾರಿ ಬಾಳ ಸಾಹೇಬ್ ಠಾಕ್ರೆ ಲೋಕಸಭೆಯಲ್ಲಿ ಪ್ರತಿಪಕ್ಷದ ನಾಯಕಿ ಸುಷ್ಮಾ ಸ್ವರಾಜ್ ಹೆಸರು ಸೂಚಿಸಿ ಭಾಜಪದಲ್ಲಿ ಇನ್ನಷ್ಟು ಗೊಂದಲ ಎಬ್ಬಿಸಿದ್ದಾರೆ. ಇನ್ನು ಯುಪಿಎ ಮಟ್ಟಿಗೆ ಮನಮೋಹನ ಸಿಂಗ್ ಈ ಅವಧಿ ಮುಗಿಸಿದರೆ ಸಾಕಾಗಿದೆ. ಗಾಂಧಿ ಕುಟುಂಬದ ರಾಜಕುಮಾರ ರಾಹುಲ ಗಾಂಧಿಯೇ ಇಲ್ಲ ಪ್ರಿಯಾಂಕಾ ವಡೋದ್ರಾನೇ. ಈ ಊಹಾಪೋಹವಂತೂ ಇದೆ. ಮತದಾರನ ಮಟ್ಟಿಗೆ ಯಾರೇ ಬಂದರೂ ಅವನ ಬವಣೆ ಮಾತ್ರ ತಪ್ಪದು. ಈಗಿರುವ ಎರಡು ಸಮ್ಮಿಶ್ರಗಳಲ್ಲಿ ಯಾವುದೇ ಬಂದರೂ ಅಮೆರಿಕದ ಪ್ರಭುಗಳಿಗೆ ಶರಣು.

✶ ✶ ✶

ಕರ್ನಾಟಕದಲ್ಲಂತೂ ಚುನಾವಣೆಯ ಧೂಳು ಈಗಲೇ ಎದ್ದಿದೆ. ಕಾಂಗ್ರೆಸ್, ಭಾಜಪ, ಜೆಡಿಎಸ್ ನಾಯಕರುಗಳು ಪೈಪೋಟಿಯ ಮೇಲೆ ಬರ ಪ್ರದೇಶ ಗಳಲ್ಲಿ ಪ್ರವಾಸ ಮಾಡುತ್ತಿದ್ದಾರೆ. ಆದರೆ ಬರಪೀಡಿತ ಜನರಿಗೆ ಮಾತ್ರ ಬಿಡಿಕಾಸಿನ ಪ್ರಯೋಜನವಾಗಿಲ್ಲ. ಇಂಥ ಪ್ರವಾಸಗಳಿಂದ ಆಗುವುದೂ ಇಲ್ಲ. ಈ ನಾಯಕರು ಗಳಿಗೆಲ್ಲ ಮುಂಬರುವ ಚುನಾವಣೆಗಳ ಮೇಲೆ ಕಣ್ಣು. ಕಾಂಗ್ರೆಸ್ಸಿನಲ್ಲಿ ಅಧ್ಯಕ್ಷರ ಬದಲಾವಣೆಗೆ ಕಸರತ್ತು ನಡೆಯುತ್ತಿದ್ದರೆ, ಭಾಜಪದಲ್ಲಿನ ತಲೆನೋವುಗಳೇ ಬೇರೆ. ಜಗದೀಶ ಶೆಟ್ಟರ್ ನೇತೃತ್ವದ ತೇಪೆ ಸರಕಾರ ಬಂದಮೇಲೆ ಆಡಳಿತ ಮತ್ತಷ್ಟು ಸ್ಥಗಿತಗೊಂಡಿದೆ. ಮೊದಲೇ ಸದಾನಂದ ಗೌಡರ ಸರಕಾರ ನಿಶ್ಚೇಷ್ಟಿತ ವಾಗಿತ್ತು. ಈ ಭಾಜಪದಲ್ಲಿ ಮೂರು ಪಾಳೆಯಗಳ ನಡುವೆ ಕಿತ್ತಾಟ. ಮತ್ತೆ ರಾಜ್ಯಾಧ್ಯಕ್ಷರು ಯಾರಾಗುತ್ತಾರೆ ಎಂಬ ಲೆಕ್ಕಾಚಾರ. ಇದರ ಮೇಲೆ ಮಾಜಿ ಮುಖ್ಯಮಂತ್ರಿ ಯಡಿಯೂರಪ್ಪ ಮೊನ್ನೆ ಭಾಜಪ ತ್ಯಜಿಸುವ ಬಾಂಬ್ ಸಿಡಿಸಿದ್ದಾರೆ. ಭಾಜಪ ಹೈಕಮಾಂಡನ್ನು ಬ್ಲಾಕ್‌ಮೇಲ್ ಮಾಡುತ್ತಿರುವ ಈತ ಹೊಸ ಪಕ್ಷ ಕಟ್ಟುವ ಪಟ್ಟುಗಳನ್ನು ಹಾಕುತ್ತಲೇ ಬಂದಿದ್ದಾರೆ. ಇದರ ಮಧ್ಯೆ ಜಾತಿ ರಾಜಕಾರಣ ಬುಸುಗುಟ್ಟುತ್ತಿದೆ. ಮುಂಬರುವ ಚುನಾವಣೆ ಗಳಲ್ಲಿ ಅತಂತ್ರ ಸ್ಥಿತಿ ಮಾತ್ರ ಕಟ್ಟಿಟ್ಟ ಬುತ್ತಿ. ಏನಾಗುವುದೋ ನೋಡೋಣ.

✶ ✶ ✶

ನಮ್ಮ ರಾಜ್ಯದ ಕೆಲವು ಶಾಸಕರು ಅರ್ಜೆಂಟೈನಾ, ಪೆರು, ಮುಂತಾದ ದೇಶಗಳಿಗೆ ಹೋಗಿ ಅನುಭವಗಳ ದೊಡ್ಡ ಮೂಟೆ ಹೊತ್ತು ಹಿಂದಿರುಗಿದ್ದಾರೆ. ಅವರ ಪರಿಣತಿ ಇದರಿಂದ ಗಗನಕ್ಕೇರಿದೆ. ಅದನ್ನು ಸ್ವಲ್ಪ ಭೂಮಿಗಿಳಿಸಿ ನಮ್ಮ ರಾಜ್ಯಕ್ಕೆ ಅಭಿವೃದ್ಧಿಯ ಗಂಟನ್ನು ದಾನ ಮಾಡುವವರಿದ್ದಾರೆ. ಹಿಂದಕ್ಕೆ ಬಾರದೆ ಅಲ್ಲೇ ಎಲ್ಲೋ ಆಂಡೀಸ್ ಪರ್ವತಗಳಲ್ಲಿ ಈ ಶಾಸಕರು ಕಳೆದು ಹೋಗಿದ್ದರೆ ನಮಗದೆಷ್ಟು ನಷ್ಟವಾಗುತ್ತಿದ್ದಿತೆಂಬುದನ್ನು ಲೆಕ್ಕಹಾಕಲು ಸರಿಯಾದ ಗಣಕಯಂತ್ರಗಳೇ ಇಲ್ಲ ವೆನ್ನುತ್ತಾರೆ. ಮಾಹಿತಿ ಹಕ್ಕಿನ ಕಾಯ್ದೆಯಡಿ ಅರ್ಜಿ ಹಾಕಿ ಇವರ ಅಗಾಧ ಜ್ಞಾನಾನುಭವಗಳ 'ಅರ್ಜನೆ'ಗಾಗಿ ಬೊಕ್ಕಸದಿಂದ ಎಷ್ಟು ಹಣ ವೆಚ್ಚವಾಯಿತೆಂದು ತಿಳಿಯುವುದು ಅಗತ್ಯ. ಶಾಸಕರು ಈಗ ಯಾವ ಕ್ಷೇತ್ರದ ಅಭಿವೃದ್ಧಿಗೆ ತಮ್ಮ ವಿಶೇಷ ಪರಿಣತಿಯನ್ನು ಬಳಸುತ್ತಾರೆ ಎಂಬುದನ್ನು ಕುತೂಹಲದಿಂದ ವೀಕ್ಷಿಸಬೇಕಾಗಿದೆ. ತರಬೇತಿಯ ನಂತರ ಸಾಮಾನ್ಯವಾಗಿ ಒಂದು ಪರೀಕ್ಷೆ ಇರುತ್ತದೆ. ಅದರಲ್ಲಿ ನೂರಕ್ಕೆ ೪೦ ಅಂಕಗಳನ್ನಾದರೂ ಪಡೆಯದಿದ್ದರೆ ಅಭ್ಯರ್ಥಿಯು ತೇರ್ಗಡೆ ಹೊಂದದೆ ಮತ್ತೊಮ್ಮೆ ಪರೀಕ್ಷೆಗೆ ಬರಬೇಕು. ಅಂದರೆ ಫೇಲಾಗುವ ಶಾಸಕರನ್ನು ಮತ್ತೊಮ್ಮೆ ಅರ್ಜೆಂಟೈನಾ ಮತ್ತು ಪೆರು ದೇಶಗಳಿಗೆ ಕಳಿಸುವ ಜವಾಬ್ದಾರಿ ನಮ್ಮ ರಾಜ್ಯದ ಜನರದ್ದು. ಸದರಿ ಶಾಸಕರಿಗೆ ಒಂದು ಸಾರ್ವಜನಿಕ ಪರೀಕ್ಷೆ ನಡೆಸೋಣವೆಂಬ ಉದ್ದೇಶದಿಂದ ಅವರಿಗೆ ಒಂದು ಪ್ರಶ್ನಪತ್ರಿಕೆ ಕೊಡಲಾಗುತ್ತಿದೆ. ಸರಿಯಾದ ಉತ್ತರ ನೀಡದ ಶಾಸಕರಿಗೆ ''ದಂಡಪಿಂಡ'' ಎಂಬ ಅಭೂತಪೂರ್ವ ಪ್ರಶಸ್ತಿಯನ್ನು ಘೋಷಿಸಲಾಗುತ್ತದೆ. ಇಲ್ಲಿ ೧೨ ಪ್ರಶ್ನೆಗಳಿವೆ. ಅವುಗಳಲ್ಲಿ ಕನಿಷ್ಠ ಹತ್ತಕ್ಕೆ ಉತ್ತರ ಬರೆಯಬೇಕು. ಒಂದೊಂದು ಪ್ರಶ್ನೆಗೂ ೧೦ ಅಂಕ ಗಳಿರುತ್ತವೆ. ಅನುತ್ತೀರ್ಣರಾದ ಶಾಸಕರ ಹೆಸರುಗಳನ್ನು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು. ಉತ್ತರ ಪತ್ರಿಕೆಗಳನ್ನು ನೇರವಾಗಿ ಪತ್ರಿಕೆಯ ಕಚೇರಿಗೆ ಒಂದು ವಾರದೊಳಗಾಗಿ ಕಳಿಸಬೇಕು.

೧. ನೀವು ಹೋಗಿದ್ದ ಯಾವ ದೇಶದಲ್ಲಿ ಪೆರೋನ್ ಎಂಬುವನು ಅಧ್ಯಕ್ಷನಾಗಿದ್ದ ಮತ್ತು ಯಾವಾಗ ? ಅವನು ಅಮೆರಿಕಾ ಸರ್ಕಾರದೊಡನೆ ಎಂತಹ ಸಂಬಂಧ ಹೊಂದಿದ್ದ ? ತರುವಾಯದಲ್ಲಿ ಶ್ರೀಮತಿ. ಪೆರೋನ್ ಏನಾದರು ?

೨. ಮಾಲ್ವಿನಾಸ್ ದ್ವೀಪಗಳು ಎಲ್ಲಿವೆ ಮತ್ತು ಏತಕ್ಕೆ ಪ್ರಸಿದ್ಧಿ ಪಡೆದಿವೆ ? ಅವು ಯಾರಿಗೆ ಸೇರಬೇಕೆಂಬುದರ ಬಗ್ಗೆ ನಿಮ್ಮ ಅಭಿಪ್ರಾಯವೇನು ? ಸದ್ಯದಲ್ಲಿ ಅಲ್ಲಿಯ ಆಳ್ವಿಕೆ ಯಾರ ಕೈಯ್ಯಲ್ಲಿದೆ ?

೩. ಹಿರಾಂ ಬಿಂಗಂ ಎಂಬುವವನ ಹೆಸರು ಕೇಳಿದ್ದೀರಾ ? ನೀವು ನೋಡಿದ ಯಾವ ಸ್ಥಳ ಅವನ ಹೆಸರಿನೊಡನೆ ಸಂಬಂಧ ಹೊಂದಿದೆ ? ಆ ಸ್ಥಳದ ಇತಿಹಾಸದ ಬಗ್ಗೆ ನೂರು ಪದಗಳಲ್ಲಿ ಒಂದು ಪುಟ್ಟ ಪ್ರಬಂಧ ಬರೆಯಿರಿ.

೪. 'ಇಂಕಾ' ಎಂಬುದು ಯಾವ ಇಂಕಿನ ಹೆಸರು ? ನಿಮ್ಮ ಪ್ರವಾಸದಲ್ಲಿ ಅದನ್ನು ಎಲ್ಲಿಯಾದರೂ ಕಂಡಿರಾ ಮತ್ತು ಕೊಂಡಿರಾ ? ಅದಕ್ಕೆ ಸಂಬಂಧಿಸಿದ್ದನ್ನೇನಾದರೂ ನಿಮ್ಮ ಮಕ್ಕಳಿಗಾಗಿ ತಂದಿದ್ದೀರಾ ?

೫. ನೀವು ಹೋಗಿದ್ದ ಯಾವ ದೇಶದಲ್ಲಿ ರೈತರ ಚಳುವಳಿಯೊಂದು ದೊಡ್ಡ ಪ್ರಮಾಣದಲ್ಲಿ ನಡೆದಿದೆ ?

ಚಳುವಳಿಯ ಸ್ವರೂಪ ಕುರಿತು ನೂರು ಪದಗಳಲ್ಲಿ ನಿಮ್ಮ ಅಮೋಘ ಜ್ಞಾನವನ್ನು ಹಂಚಿಕೊಳ್ಳಿ.

೬. ನೀವು ಕಂಡ ಯಾವ ಸೊಗಸಾದ ಪ್ರದೇಶವು ಪದ್ಯ ಬರೆಯಲು ಸ್ಫೂರ್ತಿ ನೀಡಿತು ? ಅಲ್ಲಿ ಬರೆದ ೧೪ ಸಾಲುಗಳ ಒಂದು ಕವನವನ್ನು ಸಾದರಪಡಿಸಿ. ಅಲ್ಲಿ ಬರೆದಿಲ್ಲದಿದ್ದರೆ ಈಗ ಬರೆದುಕೊಡಿ. ಒಂದು ಮಾತ್ರ.

೭. ಕರ್ನಾಟಕದ ಸಾಂಸ್ಕೃತಿಕ ರಾಯಭಾರಿಗಳಾಗಿ ನೀವು ಹೋಗಿದ್ದ ದೇಶಗಳಲ್ಲಿ ನೀವು ಪರಿಚಯಿಸಿಕೊಂಡ ವಿಶಿಷ್ಟ ಸಂಸ್ಕೃತಿಗಳ ಸೂಕ್ಷ್ಮ ಪರಿಚಯ ಮಾಡಿಕೊಡಿ. (ನಿಮ್ಮ ಉತ್ತರಗಳನ್ನು ಗುಟ್ಟಾಗಿಡಲಾಗುತ್ತದೆ, ಆದ್ದರಿಂದ ಮುಕ್ತವಾಗಿ ನೀವು ಪಡೆದ ರಂಜನೆಯನ್ನು ರಸವತ್ತಾಗಿ ವರ್ಣಿಸಿ.)

೮. ನೀವು ಯಾವುದೋ ದೊಡ್ಡ ನದಿಯನ್ನು ನೋಡಿ ಬಂದಿದ್ದೀರಿ. ಅದರ ಹೆಸರೇನು ಮತ್ತು ಅದು ಯಾವ ಯಾವ ದೇಶಗಳಲ್ಲಿ ಹರಿಯುತ್ತದೆ ? ಆ ನದಿಯ ನೀರನ್ನು ಕಾವೇರಿಗೆ ಹರಿಸಲು ಒಂದು ಯೋಜನೆಯ ನೀಲಿನಕ್ಷೆಯನ್ನು ತಯಾರಿಸಿಕೊಡಿ.

೯. ನೀವು ಹೋಗಿದ್ದ ದೇಶಗಳಲ್ಲಿ ವಸಾಹತುಶಾಹಿ ದರ್ಪ, ದೌರ್ಜನ್ಯ, ಯಾವ ರೀತಿಯಲ್ಲಿ ಯಾವ ದೇಶಗಳವರು ನಡೆಸಿದ್ದರು ಮತ್ತು ಯಾವಾಗ ? ಆ ದೇಶಗಳಿಂದ ಲೂಟಿಯಾದ ಸಂಪತ್ತು ಯಾವ ಸ್ವರೂಪದ್ದಾಗಿತ್ತು ?

೧೦. ರಯೋ ಡಿ ಜನೈರೋ ಎಂಬ ನಗರದ ಯಾವ ಹೊಟೇಲುಗಳಲ್ಲಿ ಕೆಳಗಿನ ಸೌಲಭ್ಯಗಳಿವೆ ? ಸೌಲಭ್ಯಗಳಿಂದ ದೊರೆಯುವ ಮೋಜನ್ನು ವಿವರಿಸಿ.

(ಅ) ಹರಿಯುವ ನೀರಿನಲ್ಲಿ ಜಲಚರಗಳು ಮತ್ತು ತಿನ್ನಲು ಅವನ್ನು ಆಯ್ಕೆ ಮಾಡಿಕೊಳ್ಳುವ ವಿಧಾನ. (ಆ) ಅಲ್ಲಿಯ ಕ್ಲಬ್ಬುಗಳಲ್ಲಿ ಕಾಣಸಿಗುವ ನೃತ್ಯದ ವೈಶಿಷ್ಟ್ಯ. (ಇ) ಹೊಟೇಲಿನಲ್ಲಿ ನೀವು ನೋಡಿರಬಹುದಾದ ವೃತ್ತಪತ್ರಿಕೆಗಳ ಮತ್ತು ನಿಯತಕಾಲಿಕೆಗಳ ಸ್ವಾರಸ್ಯ.

೧೧. ಪ್ರವಾಸವನ್ನು ನಿಮ್ಮ ಹಣದಲ್ಲಿ ಕೈಗೊಂಡಿದ್ದರೆ ಅದಕ್ಕೆ ತಗಲಬಹುದಾಗಿದ್ದ ಒಟ್ಟು ವೆಚ್ಚವೆಷ್ಟು ಮತ್ತು ಅದನ್ನು ಹೇಗೆ ಸರಿದೂಗಿಸುತ್ತಿದ್ದಿರಿ ? (ಸಂಕೋಚ ಇಲ್ಲದೆ ಧನದ ಮೂಲವನ್ನು ತಿಳಿಸಿ, ಅದನ್ನು ಬಹಿರಂಗಗೊಳಿಸುವುದಿಲ್ಲ.)

೧೨. ಕರ್ನಾಟಕದ ಜನತೆಯು ನೀವು ಹೋಗಿದ್ದ ಸ್ಥಳಗಳಲ್ಲಿ ಎಲ್ಲಿಯಾದರೂ ಒಂದೆಡೆ ನಿಮ್ಮ ಪುನರ್ವಸತಿಗೆ ಏರ್ಪಾಟು ಮಾಡಲು ತೀರ್ಮಾನಿಸಿದರೆ ನೀವು ನೋಡಿದ ಯಾವ ಕಾಡು ಅಥವಾ ಪರ್ವತವನ್ನು ಆಯ್ಕೆ ಮಾಡಿಕೊಳ್ಳುತ್ತೀರಿ ? ನಿಮ್ಮ ಆಯ್ಕೆಗೆ ಮೂರು ಕಾರಣಗಳನ್ನು ಕೊಡಿ.

ಕೊಸರಿನ ಪ್ರಶ್ನೆ ನಂ. ೧೩ : ನೀವು ಹೋಗಿದ್ದ ಯಾವ ಸ್ಥಳದ ಬಗ್ಗೆ ನೇಮಿಚಂದ್ರ ಎಂಬ ಪ್ರಸಿದ್ಧ ಲೇಖಕಿ ಒಂದು ಪುಸ್ತಕ ಬರೆದಿದ್ದಾರೆ ? ಅವರು ಪ್ರವಾಸ ಮಾಡಿದ ವಿಧಾನಕ್ಕೂ ನಿಮ್ಮ ವಿಧಾನಕ್ಕೂ ಇರುವ ವ್ಯತ್ಯಾಸಗಳನ್ನು ಪಟ್ಟಿ ಮಾಡಿ. (ಈ ಪ್ರಶ್ನೆಯ ಉತ್ತರಕ್ಕೆ ಬೋನಸ್ ಮಾರ್ಕ್ಸ್ ನೀಡಲಾಗುತ್ತದೆ.)

✶ ✶ ✶

ಸೆಪ್ಟೆಂಬರ್ ೧೧ ಚಿಲಿಯ ಚುನಾಯಿತ ಅಧ್ಯಕ್ಷ ಸಾಲ್ವೆಡಾರ್ ಅಲೆಂಡೆಯನ್ನು ಅಮೆರಿಕಾದ ಗೂಂಡಾ ಅಧ್ಯಕ್ಷ ರಿಚರ್ಡ್ ನಿಕ್ಸನ್ ಕೊಂದ ದಿನ. (ತಪ್ಪೋ ಸರಿಯೋ ಗೊತ್ತಿಲ್ಲ, ನಿಕ್ಸನ್‌ನ ಹೆಸರನ್ನು ಅವರ ದೇಶದ ಕೆಲವು ಶಾಲಾ ಬಾಲಕರು ಪಿಗ್ಸನ್ ಎಂದು ಬರೆಯುತ್ತಿದ್ದರು). ಹತ್ಯೆ ನಡೆದು ೩೯ ವರ್ಷಗಳು ಕಳೆದಿವೆ. ಹತ್ಯೆಯ ೪೦ನೆಯ ವರ್ಷದ ''ಸಮಾರಂಭ''ವನ್ನು ಅಮೆರಿಕಾದ ಕೇಂದ್ರ ಗೂಢಚಾರ ಸಂಸ್ಥೆಯಿಂದ ಹಣ ಪಡೆದ ವಿಶ್ವವಿದ್ಯಾಲಯಗಳ ಮಹಾನ್ ಸಂಶೋಧಕರು ವಿಶಿಷ್ಟ ರೀತಿಯಲ್ಲಿ ಆಚರಿಸಿದ್ದಾರೆ. ನಮ್ಮ ದೇಶದ ಕೆಲವು ಪತ್ರಿಕೆಗಳು ಮನೋರೋಗಕ್ಕೆ ತುತ್ತಾಗಿರುವುದರಿಂದ ಆ ಸಂಶೋಧನೆಯ ವಿವರಗಳನ್ನು ಸಂಕೋಚವಿಲ್ಲದೆ ಮತ್ತು ಯಾವ ಟಿಪ್ಪಣಿಯನ್ನೂ ನೀಡದೆ ಪ್ರಕಟಿಸಿವೆ. ಅಲೆಂಡೆಯ ಸಾವು ಹೇಗೆ ಸಂಭವಿಸಿತೆನ್ನುವ ಬಗ್ಗೆ ಈ ತಗಲೂಫ಼ಿ ಸಂಶೋಧನೆಯು ಹೊಸ ಮಾಹಿತಿ ಮತ್ತು ವಿವರಗಳನ್ನು ನೀಡಿದೆ. ಇದು ಇತಿಹಾಸದ ಪುನರ್ನಿರ್ಮಾಣ. ನಮ್ಮ ಶ್ರೀ. ಮೋಹನ್ ಭಾಗವತ್‌ರು ಆ ಸಂಶೋಧಕರ ಬಳಿ ಶಿಷ್ಯತ್ವವಿಲ್ಲದೆಯೂ ಇತಿಹಾಸದ ''ಪುನರ್ಬರೆಯುವಿಕೆ''ಯಲ್ಲಿ ನಿಷ್ಣಾತರಾಗಿದ್ದಾರಾದ್ದರಿಂದ ಬೇರೆ ಬೇರೆ ಹೆಸರುಗಳ ''ಕೃಪಾ''ಗಳಲ್ಲಿರುವ ವಿದ್ವಾಂಸರು ಅವರಲ್ಲಿಗೆ ಹೋದರೆ ಸಾಕು. ಅದಿರಲಿ, ಸಿ.ಐ.ಎ. ಸಂಶೋಧನೆಯ ಪ್ರಕಾರ ಎರಡು ''ಖಚಿತ'' ತೀರ್ಮಾನಗಳು ಬಂದಿವೆ : (ಅ) ಚಿಲಿಯ ರಾಜಧಾನಿಯಲ್ಲಿ ಅಧ್ಯಕ್ಷರ ನಿವಾಸದ ಮೇಲೆ ಬಾಂಬು ದಾಳಿ ನಡೆಸಿ ಅಲೆಂಡೆಯನ್ನು ಕೊಂದಿದ್ದು ಸಿ.ಐ.ಎ. ಅಲ್ಲ, ಅಮೆರಿಕಾದ ವಿಮಾನಗಳಲ್ಲ, ನಿಕ್ಸನ್ ನಿರ್ದೇಶನದಲ್ಲಿ ಅಲ್ಲ. (ಆ) ಬಾಂಬು ದಾಳಿಗೆ ಬೆದರಿ ಅಲೆಂಡೆ ಆತ್ಮಹತ್ಯೆ ಮಾಡಿಕೊಂಡು ನಿರ್ಗಮಿಸಿದರೇ ವಿನಾ ಸ್ಥೈರ್ಯದಿಂದ ದಾಳಿಯನ್ನು ಎದುರಿಸಲಿಲ್ಲ.

ಸದ್ಯ, ಈ ಸಂಶೋಧನೆಯು ಇನ್ನೂ ಮುಂದುವರಿದು ''ಚಿಲಿಯಲ್ಲಿ ಪ್ರಜಾಪ್ರಭುತ್ವ ನೆಲೆಸಲೆಂಬ ಉದ್ದೇಶದಿಂದ ಅಲೆಂಡೆ ಸ್ವತಃ ಅಧಿಕಾರವನ್ನು ಪಿಶಾಚಿ ಪಿನೋಶೆಗೆ ವರ್ಗಾಯಿಸಿದರು'' ಎಂದು ಹೇಳಿಲ್ಲ. ಅದರ ಸಂಶೋಧನೆಗೆ ಸಿ.ಐ.ಎ. ಬೇರೆ ಇನ್ನಾರಿಗಾದರೂ ''ಫ಼ಂಡ್'' ಕೊಡುತ್ತದೆ, ಅದರ ಲಾಭ ಪಡೆಯುವ ವಿದ್ವಾಂಸರು ಅಮೆರಿಕಾದ ವಿಶ್ವವಿದ್ಯಾನಿಲಯಗಳಲ್ಲಿ ಬೇಕಾದಷ್ಟಿದ್ದಾರೆ. ಅಮೆರಿಕಾದ ಸಂಶೋಧಕರು ಇರುವ ದಾಖಲೆಗಳನ್ನು ಸುಟ್ಟು, ಇಲ್ಲದ ದಾಖಲೆಗಳನ್ನು ಸೃಷ್ಟಿಸುವುದರಲ್ಲಿ ಪ್ರವೀಣರು. ಅಂತಹ ಚಾರಿತ್ರಿಕ ದಾಖಲೆಗಳು ಯಾವುವು ? ೧೯೭೩ರ ಸೆಪ್ಟೆಂಬರ್ ೧೧ಕ್ಕೆ ಮುಂಚೆ ಒಂದು ವರ್ಷ ಅಮೆರಿಕಾ ನಡೆಸಿದ ಕುತಂತ್ರಗಳು, ಕೊಲೆಗಳು; ಸೆಪ್ಟೆಂಬರ್ ೧೧ರಂದು ನಡೆಸಲಾದ ವೈಮಾನಿಕ ದಾಳಿಯಲ್ಲಿ ಚಿಲಿಯ ರಾಷ್ಟ್ರಾಧ್ಯಕ್ಷರ ನಿವಾಸವು ಭಗ್ನಗೊಂಡಿದ್ದು; ಇನ್ನೂ ಬಾಂಬುಗಳ ದಾಳಿ ನಡೆಯುತ್ತಿದ್ದಾಗಲೆ ದೇಶದ ಜನತೆಯನ್ನು ಉದ್ದೇಶಿಸಿ ಅಲೆಂಡೆ ರೇಡಿಯೋ ಮುಖಾಂತರ ಮಾಡಿದ ಭಾಷಣ.

ಆ ಭಾಷಣದ ಧ್ವನಿಮುದ್ರಿಕೆ 'ಹೊಸತು' ಬಳಿ ಇದೆ, ಯಾರು ಬೇಕಾದರೂ ಬಂದು ಕೇಳಿಕೊಳ್ಳಬಹುದು. ಅಲೆಂಡೆ ಭಾಷಣಕ್ಕೆ ಹಿನ್ನೆಲೆಯಾಗಿ ಬಾಂಬುಗಳ ಘೋರ ಸದ್ದಿದೆ. ಭಾಷಣದಲ್ಲಿ ಅಲೆಂಡೆ ಹೇಳುತ್ತಿದ್ದಾರೆ : ''ಸುತ್ತ ಬಾಂಬುಗಳು ಬೀಳುತ್ತಿವೆ. ರಾಷ್ಟ್ರಾಧ್ಯಕ್ಷರ ನಿವಾಸಕ್ಕೆ ಬೆಂಕಿ ಬಿದ್ದಿದೆ. ಇದರಲ್ಲೇ ನಾನು ನಮ್ಮ ಜನತೆಯ ಪರವಾಗಿ ಸೆಣಸಿ ಮಡಿಯುತ್ತೇನೆ, ತಪ್ಪಿಸಿಕೊಂಡು ಓಡಿಹೋಗುವ ಪ್ರಶ್ನೆಯೇ ಇಲ್ಲ. ಚಿಲಿಗೆ ಜಯವಾಗಲಿ. ಚಿಲಿಯ ಜನತೆಯ ಕ್ರಾಂತಿ ಚಿರಾಯುವಾಗಲಿ. ನಮ್ಮ ಐಕ್ಯರಂಗ ವಿಜಯಿಯಾಗಲಿ.'' ಅಲೆಂಡೆ ಭಾಷಣದ ನಂತರ ಐಕ್ಯರಂಗದ ಸಾಮೂಹಿಕ ಹಾಡು ಸಹ ಪ್ರಸಾರವಾಗಿತ್ತು. ವಿಶ್ವ ಶಾಂತಿ ಮಂಡಲಿಯು ಭಾಷಣ ಮತ್ತು ಹಾಡನ್ನು ಧ್ವನಿಮುದ್ರಿಸಿ ವಿಶ್ವದಲ್ಲೆಲ್ಲಾ ಹಂಚಿತ್ತು, ಪ್ರಚಾರ ಮಾಡಿತ್ತು. ''ಏಳು ಸಮುದ್ರಗಳ ನೀರಿನಿಂದ ಕೈ ತೊಳೆದರೂ ಅಮೆರಿಕಾ ಕೈಗಳಿಗೆ ಮೆತ್ತಿಕೊಂಡಿರುವ ರಕ್ತ ಅಳಿಸಿಹೋಗುವುದಿಲ್ಲ'' ಎಂದು ಶೇಕ್ಸ್‌ಪಿಯರ್‌ನ ವಾಕ್ಯವೊಂದನ್ನು ಬದಲಿಸಿ ನಾವು ಹೇಳಬೇಕಾಗಿದೆ.

ಈ ಧೂರ್ತ ''ಸಂಶೋಧನೆ'' ಪ್ರಕಟವಾದ ದಿನವೇ ಲಿಬ್ಯಾದ ಬೆಂಗಾಜ಼ಿಯಲ್ಲಿ ಅಮೆರಿಕದ ದೂತಾವಾಸದ ಮುಖ್ಯಸ್ಥ ಸ್ಟೀವನ್ಸ್‌ನ ಕೊಲೆಯ ವರದಿಯೂ ಪ್ರಕಟವಾಗಿದೆ. ಅದನ್ನೂ 'ಆತ್ಮಹತ್ಯೆ' ಎಂದು ಸಂಶೋಧನೆ ಮಾಡಿ ಹೇಳೋಣವೆ ? ಇನ್ನೂ ಮುಂದೆ ಹೋಗಿ ಲಿಬ್ಯಾದ ಅಧ್ಯಕ್ಷ ಗದಾಫ಼ಿ ಸತ್ತಿದ್ದು ಸಹ ಆತ್ಮಹತ್ಯೆ ಮಾಡಿಕೊಂಡು ಎಂದುಬಿಟ್ಟರೆ ಚೆನ್ನಾಗಿರುತ್ತದಲ್ಲ! ಅಮೆರಿಕಾ ಕೈಗಳಲ್ಲಿ ರಕ್ತ ಎಷ್ಟು ಮೆತ್ತಿಕೊಂಡಿದೆಯೋ ಅಷ್ಟನ್ನೂ ತೊಳೆದುಹಾಕಿಕೊಳ್ಳುವ ಪ್ರಯತ್ನ ಏಕೆ ಬೇಡ ? ಚಿಲಿಯಲ್ಲಿ ೧೯೭೩ರಲ್ಲಿ ನಡೆಸಿದ ಹತ್ಯೆಯಿಂದ ಅಮೆರಿಕಾ ಇಡೀ ದಕ್ಷಿಣ ಅಮೆರಿಕಾದಲ್ಲಿ ಕ್ಯೂಬ ಒಂದನ್ನುಳಿದು ಬೇರೆಲ್ಲ ದೇಶಗಳ ಮೇಲೆ ಹತೋಟಿ ಸಾಧಿಸಿಕೊಂಡಿತು. ೨೦೧೨ರ ವೇಳೆಗೆ ಚಿಲಿಯೂ ಸೇರಿದಂತೆ ದಕ್ಷಿಣ ಅಮೆರಿಕಾದ ಎಲ್ಲ ದೇಶಗಳೂ ವಾಷಿಂಗ್‌ಟನ್‌ನಿಂದ ಬಹುದೂರ ಸರಿದು ಸ್ವತಂತ್ರವಾಗಿ ನಿಂತಿವೆ. ಅದರಿಂದ ಅಮೆರಿಕಾಕ್ಕೆ ಎಲ್ಲಿಲ್ಲದ ಹೊಟ್ಟೆ ಉರಿ ಮತ್ತು ಗರ್ವಭಂಗ. ಅದನ್ನು ಮುಚ್ಚಿಕೊಳ್ಳಲು ಸಿ.ಐ.ಎ. ಸಂಶೋಧನೆಗಳು ಇನ್ನೂ ವಿಪುಲವಾಗಿ ಬರಲಿವೆ, ಕಾದುನೋಡಿ.

ಲಿಬ್ಯಾದಲ್ಲಿ ಅಮೆರಿಕಾದ ಪುಟ್ಟ ರಾಯಭಾರಿಯ ಕೊಲೆಯು ''ಮಿತಿ ಮೀರಿದ ಪಾತಕ'' ಎಂದು ಒಬಾಮ ಹೇಳಿದ್ದು ವರದಿಯಾಗಿದೆ. ನಮ್ಮ ದೇಶದ ಕೆಲವು ಪತ್ರಿಕೆಗಳು ಹೆಚ್ಚುಕಡಿಮೆ ಅದೇ ಅರ್ಥ ಬರುವ ಸಂಪಾದಕೀಯಗಳನ್ನು ಬರೆದು ಪರಿಶುದ್ಧವಾಗಿವೆ. ಆ ದೇಶದ ಅಧ್ಯಕ್ಷನನ್ನು ಕೊಂದಿದ್ದು ''ಮಿತಿಮೀರಿದ ಪಾತಕ'' ಅಲ್ಲವೆ ? ಒಬಾಮ ಅದನ್ನೇಕೆ ಹೇಳುವುದಿಲ್ಲ ? ಅದು ''ಅಧಿಕಾರದ ಬದಲಾವಣೆ'' ಎಂಬ ವ್ಯಾಖ್ಯಾನವನ್ನು ಅಮೆರಿಕಾ ನೀಡುತ್ತಿದೆಯಲ್ಲವೆ ? ಒಂದು ದೇಶದ ಅಧ್ಯಕ್ಷನನ್ನೂ ಒಳಗೊಂಡಂತೆ ಸಾವಿರಾರು ಜನರನ್ನು ಕೊಂದ ಅಮೆರಿಕಾದ ಒಬ್ಬ ರಾಯಭಾರಿಯ ಕೊಲೆಯಾದರೆ ಅದರಲ್ಲೇನು ಆಶ್ಚರ್ಯ ? ಲಿಬ್ಯಾದ ಜನ ಅವನಿಗೆ ಆರತಕ್ಷತೆಯ ಗೌರವ ನೀಡುತ್ತಾರೆಂಬ ನಿರೀಕ್ಷೆ ಇತ್ತೇನು ? ಎಲ್ಲ ದೇಶಗಳಲ್ಲೂ ತಾಲಿಬಾನರನ್ನು, ಅಲ್-ಕೈದಾದವರನ್ನು ತಂದು ಕೂಡಿಸಿ ಅಮೆರಿಕಾ ಉಗ್ರರ ವಿರುದ್ಧ ಹೋರಾಟ ಮಾಡುತ್ತಾ ಇನ್ನಷ್ಟು ಲಕ್ಷ ಮಂದಿಯನ್ನು ಕೊಂದು ಪ್ರಜಾಪ್ರಭುತ್ವವನ್ನು ಉದ್ಧಾರ ಮಾಡಬಹುದು !

●




## ಸೆಪ್ಟೆಂಬರ್ ತಿಂಗಳ ಸಂಚಿಕೆ

''ಭ್ರಷ್ಟಾಚಾರದ ವಿರುದ್ಧ ಸಮರ ನಿರಂತರ'' ಕುರಿತು ಬರೆದ ಸಂಪಾದಕೀಯವು ಹಲವು ವಿಷಯಗಳ ಮೇಲೆ ಬೆಳಕು ಚೆಲ್ಲುತ್ತದೆ. ಆದರೆ, ಭ್ರಷ್ಟಾಚಾರದ ವಿರುದ್ಧ ಸಮರ ಕೆಳಗಿನಿಂದ ಸುಧಾರಣೆಯಾಗ ಬೇಕೆಂದು ತಿಳಿಸಿರುವುದು ಅಷ್ಟು ಸಮಂಜಸವಲ್ಲ. ಆಡಳಿತದಲ್ಲಿ ಶೇ. ೨ರಷ್ಟು ವಿವಿಧ ಹಂತದ ಅಧಿಕಾರಿಗಳಿದ್ದರೆ, ಉಳಿದವರು ಕೆಳಹಂತದ ನೌಕರರು. ಹಾಗಾಗಿ ಭ್ರಷ್ಟಾಚಾರ ವಿರುದ್ಧ ಸಮರ/ಸುಧಾರಣೆ ಮೇಲಿನಿಂದ ಪ್ರಾರಂಭವಾಗಿ ಕೆಳಗೆ ಹೋಗಬೇಕು. ಒಟ್ಟು ಮತದಾರರಲ್ಲಿ ಶೇ. ೧ಕ್ಕಿಂತ ಕಡಿಮೆ ಪ್ರಮಾಣದಲ್ಲಿ ಚುನಾಯಿತ ಸದಸ್ಯರಿದ್ದಾರೆ. ಹಾಗಾಗಿ ಭ್ರಷ್ಟಾಚಾರದ ವಿರುದ್ಧ ಸಮರ ಚುನಾಯಿತ ಸದಸ್ಯರಿಂದ ಪ್ರಾರಂಭವಾಗಿ ಕೆಳಹಂತದ ಮತದಾರರವರೆಗೆ ಹೋಗಬಹುದು. ಒಟ್ಟಿನಲ್ಲಿ ಭ್ರಷ್ಟಾಚಾರ ವಿರುದ್ಧ ಸಮರ ಮೇಲಿನಿಂದ ಕೆಳಗೆ ಹೋಗುವಂತೆ ಮಾಡಬೇಕು.

*ತುಮಕೂರು* **ವಾಮನ ರಾವ್**

ಬರಗಾಲದ ಕರ್ನಾಟಕದ ಪ್ರತೀಕವಾಗಿ ಮುತ್ತುಹಾಳಕೇರಿ ಅವರ ಮುಖಚಿತ್ರ ಗಮನ ಸೆಳೆಯಿತು.

ಮುಖಪುಟ ಲೇಖನವೆಂದೇ ಹೇಳಬಹುದಾದ ಬರ ಪರಿಣಾಮಗಳು, ಪರಿಹಾರ ಮತ್ತು ನೀತಿ ನಿರೂಪಣೆಯನ್ನು (ಡಾ|| ರಾಜೇಂದ್ರ ಪೋದ್ದಾರ್) ನಮ್ಮನ್ನಾಳುವ ರಾಜಕಾರಣಿಗಳು ಅಗತ್ಯ ಓದಲೇಬೇಕು !

ಆಗಸ್ಟ್ ಸಂಚಿಕೆಯ 'ನಮಗೆ ಸ್ವಾತಂತ್ರ್ಯ ಬಂದೇ ಇಲ್ಲವೇ ?' ಲೇಖನಕ್ಕೆ ಬಂದ ಪ್ರತಿಕ್ರಿಯೆಗಳು ಉತ್ತಮ ಚರ್ಚೆಗೆ ವೇದಿಕೆಯಾಯಿತು.

ಪ್ರಸಕ್ತ ಪರಿಸ್ಥಿತಿಯಲ್ಲಿ ನಾವು ಚಿಂತಿಸಬೇಕಾದ ವಿಚಾರದ ಬಗ್ಗೆ ಸಂಪಾದಕೀಯ ''ಯಾರ ಸಂಸ್ಕೃತಿಯ ರಕ್ಷಣೆ?'' ಗಾಯತ್ರಿಯವರಿಂದ ಚೆನ್ನಾಗಿ ಮೂಡಿ ಬಂದಿದೆ. ನಮ್ಮ ಸಂಸ್ಕೃತಿ ಪರಂಪರೆಗಳು ಉಳಿಯಬೇಕು ಎನ್ನುವುದರಲ್ಲಿ ಎರಡು ಮಾತಿಲ್ಲ. ಆದರೆ ಹೇಗೆ ಎಂಬುದೇ ಪ್ರಶ್ನೆ. ಜಾಗತೀಕರಣದ ಹೆಸರಿನಲ್ಲಿ ನಮ್ಮದಲ್ಲದ ಆಚರಣೆಗಳನ್ನು ಆಹಾರ ಸಂಸ್ಕೃತಿಯನ್ನು ಬೆಳೆಸುತ್ತಿರುವ ಯುವ ಜನತೆಯ ನಡವಳಿಕೆಯೂ ಪ್ರಶ್ನಾರ್ಹವಲ್ಲವೇ?

*ಮೈಸೂರು* **ಕೊ. ಸು. ನರಸಿಂಹಮೂರ್ತಿ**

'ಹೊಸತು' ಸೆಪ್ಟೆಂಬರ್ ೨೦೧೨ ಸಂಚಿಕೆಯ ಮುಖಪುಟ ಕರುಣಾಜನಕ ಹಾಗೂ ಕಲಾತ್ಮಕವಾಗಿದೆ. ತಲೆಯ ಮೇಲಿನ ಬಿಂದಿಗೆಯನ್ನು ಒಂದು ಕೈಯಲ್ಲಿ ಹಿಡಿದು, ನಿದ್ರಿಸುತ್ತಿರುವ ಮಗುವನ್ನು ಕಂಕುಳದಲ್ಲಿ ಹಿಡಿದಿಟ್ಟುಕೊಂಡು ಮುನ್ನಡೆಯುತ್ತಿರುವ ಗ್ರಾಮೀಣ ಮಹಿಳೆಯ ಕಷ್ಟಸಹಿಷ್ಣುತೆ ಅಪಾರವಾದುದು. ಈ ಮಹಿಳೆ ಪೂಜಾರ್ಹಳು.

ಇನ್ನೊಂದು ಮಾತು. ಈ ಸಂಚಿಕೆಯನ್ನು ಎಲ್ಲಾ ಮಾನ್ಯ ಮಂತ್ರಿಗಳಿಗೂ ತಲುಪಿಸಬೇಕು. ನಮ್ಮ ಗ್ರಾಮೀಣ ಮಹಿಳೆಯರು ಈ ಪರದಾಟದಲ್ಲಿರುವಾಗ, ಕೋಟಿಗಟ್ಟಲೆ ವ್ಯಯದಲ್ಲಿ, ಇನ್ನೋವ ಕಾರುಗಳಿಗಾಗಿ ಒತ್ತಾಯಿಸುತ್ತಿರುವ, ಭೋಗಜೀವಿ ಸುಖಲೋಲುಪ್ತ ಮಂತ್ರಿಗಳು, ಈ ಚಿತ್ರ ನೋಡಲಿ. ಇಂತಹ ದೃಶ್ಯಗಳು ಅವರಿಗೆ ಅಗತ್ಯವಿಲ್ಲವೆಂಬ ಭಾವನೆ ಅವರದಾಗ ಕೂಡದು.

*ಬೆಂಗಳೂರು* **ಯು. ಎಸ್. ವೆಂಕಟರಾಮನ್**




ಅಂತರರಾಷ್ಟ್ರೀಯ ಗಣಿತ ವರ್ಷದ ಹಿನ್ನಲೆಯಲ್ಲಿ ''ಗಣಿತ ಶಾಸ್ತ್ರ'' ವಿಷಯದ ಕುರಿತು ಎಚ್. ಎಲ್. ಎಸ್. ರಾವ್ ಉಪಯುಕ್ತ ಮಾಹಿತಿ ನೀಡಿದ್ದಾರೆ.

ವ್ಯಾವಹಾರಿಕವಾಗಿ ಪ್ರತಿಯೊಬ್ಬರಿಗೂ ಅತ್ಯಮೂಲ್ಯ ವಾಗಿರುವ ಗಣಿತ ವಿಷಯದ ಬಗ್ಗೆ ಈ ವರ್ಷ ಶಾಲಾ-ಕಾಲೇಜುಗಳಲ್ಲಿ ವಿಜ್ಞಾನ ಸಂಘ ಸಂಸ್ಥೆಗಳು ಕಾರ್ಯಕ್ರಮಗಳನ್ನು ರೂಪಿಸಿದರೆ ಒಳಿತು.

ಶಿಕ್ಷಕರೂ ಲೇಖನ ಓದಿ ಮಕ್ಕಳಲ್ಲಿ ಗಣಿತದ ಬಗ್ಗೆ ಆಸಕ್ತಿ ಮೂಡುವ ಹಾಗೆ ಬೋಧಿಸಬೇಕು.

*ಬಳ್ಳಾರಿ* **ಸುರೇಶ ಅಂಗಡಿ**

ಜಿ. ಎಸ್. ಜಯದೇವ ಅವರ ''ಗಿರಿಜನ ಸಂಸ್ಕೃತಿಯ ಮೇಲೆ ಬದಲಾಗುತ್ತಿರುವ ಆಹಾರ-ವ್ಯವಸಾಯ ಪದ್ಧತಿಯ ಪರಿಣಾಮಗಳು'' (ಸೆ. ೨೦೧೨) ಎಂಬ ಲೇಖನ ಅತ್ಯಂತ ಸಕಾಲಿಕ. ವಿದ್ಯಾರ್ಥಿ ತಂಡ ಸೋಲಿಗರ ಮೇಲೆ ನಡೆಸಿದ ಕ್ಷೇತ್ರಕಾರ್ಯದ ಫಲಿತಗಳನ್ನು ಜಯದೇವ ಅವರು ವಿಶ್ಲೇಷಿಸುತ್ತ ಅಭಿವೃದ್ಧಿ ಎಂಬುದು ಕೇವಲ ಆರ್ಥಿಕ ಪ್ರಗತಿ ಮಾತ್ರವಲ್ಲ ಎಂಬುದನ್ನು ಸೋಲಿಗರ ಜೀವನ ಕ್ರಮವನ್ನು, ಅವರ ಆರೋಗ್ಯವನ್ನು ಗಮನಿಸಿದರೆ ತಿಳಿಯುತ್ತದೆ. ಕಾಫಿ, ಮೆಣಸುಗಳು ಅವರಿಗೆ ಹೇರಳವಾಗಿ ಹಣವನ್ನು ತಂದುಕೊಟ್ಟಿರುವುದು ನಿಜ. ಆದರೆ ಈ ಹಣದ ನಿರ್ವಹಣೆಗೆ ಬೇಕಾದ ಶಿಸ್ತು ಸಂಯಮಗಳು ಸೋಲಿಗ ಸಂಸ್ಕೃತಿಗೆ ಆಗಂತುಕ ವಿಷಯಗಳು. ಹಣ ನಿರ್ವಹಣೆ ತಿಳಿಯದ ಈ ಮುಗ್ಧ ಗಿರಿಜನರು ಹೆಚ್ಚಾದ ಹಣದಿಂದ ಏನು ಮಾಡಬೇಕೆಂದು ತಿಳಿಯದೆ ಸಾರಾಯಿ, ಭಂಗಿ ಮುಂತಾದ ವ್ಯಸನಗಳ ದಾಸರಾಗಿ ತಮ್ಮ ಆರೋಗ್ಯವನ್ನು ಮತ್ತಷ್ಟು ಕೆಡಿಸಿಕೊಳ್ಳುತ್ತಿದ್ದಾರೆಂದು - ತಿಳಿಸುತ್ತಾರೆ.

*ಬೆಂಗಳೂರು* **ಶಿವರಾಮಯ್ಯ**

ಆಗಸ್ಟ್ ೨೦೧೨ರ ಸಂಚಿಕೆಯಲ್ಲಿ ಮೊದಲ ಲೇಖನವಾಗಿ 'ಜೀವಿ'ಯವರ ಸಂದರ್ಶನವಿರುವುದು ನನಗೆ ಸಂತಸ ತಂದಿದೆ. ಆದರೆ ಓದುತ್ತ ಹೋದಂತೆ ತುಸು ನಿರಾಶೆಯಾಗಿದೆ. ಅವರು ಹುಟ್ಟಿದ್ದು ೨೩-೮-೧೯೧೩ರಂದು. ಸಂದರ್ಶನ ಲೇಖನದಲ್ಲಿ ೨೩-೮-೧೯೧೨ ಎಂದು ನಮೂದಿಸಿರುವುದು ಸರಿಯೇ ? ಜೀವಿಯವರು ೨೩-೮-೨೦೧೩ರಂದು ನೂರನೇ ವರ್ಷದಲ್ಲಿ ಪಾದಾರ್ಪಣೆ ಮಾಡುತ್ತಾರೆ ಹಾಗೂ ಅವರನ್ನು ಶತಾಯುಷಿ ಎಂದು ಬ್ರಾಂಡ್ ಒತ್ತಲು ೨೩-೦೮-೨೦೧೪ರ ತನಕ ತಾಳ್ಮೆ ವಹಿಸಬೇಕಾದದ್ದು ಅನಿವಾರ್ಯ.

*ಬೆಳಗಾವಿ* **ಅನಂತ ಕಲ್ಲೋಳ**

(ಜಿ.ವಿ.ಯವರು ಹುಟ್ಟಿದ ವರ್ಷದ ವ್ಯತ್ಯಾಸದ ಬಗ್ಗೆ ಕ್ಷಮೆ ಕೋರುತ್ತೇವೆ. ನೀವು ಸೂಚಿಸಿರುವ ತಾರೀಖು ಸರಿ. ನೂರನೇ ವರ್ಷ ವಿಚಾರ ಯಾವತ್ತೂ ವಿವಾದಾತ್ಮಕ. ಅವರವರಿಗೆ ತೋರಿದಂತೆ ಆಚರಿಸುತ್ತಾರೆ. – ಸಂ.)

ಸೆಪ್ಟೆಂಬರ್-೨೦೧೨ರ ಸಂಚಿಕೆಯಲ್ಲಿನ ಬಹುತೇಕ ಎಲ್ಲಾ ಲೇಖನ, ಸಂಪಾದಕೀಯ, ಕಾವ್ಯ, ಕಥೆಗಳು ಪರಿಣಾಮಕಾರಿಯಾಗಿವೆ. ''ನೆಮ್ಮದಿಯ ನಾಳೆ ನಮ್ಮದು'' ಆಶಾವಾದದೊಂದಿಗೆ ಪ್ರಗತಿಪರ ಚಿಂತನೆಗಳ, ರಾಜ್ಯ, ರಾಷ್ಟ್ರ ಮತ್ತು ಅಂತರರಾಷ್ಟ್ರ ರಾಜಕೀಯ ವಿದ್ಯಮಾನಗಳ, ಭ್ರಷ್ಟಾಚಾರ ಮತ್ತು ಸ್ವಜನ ಪಕ್ಷಪಾತಗಳ ಅನಾವರಣ ಮಾಡುತ್ತಾ ಜನಜಾಗೃತಿ ಮೂಡಿಸುವ ಕಾರ್ಯದಲ್ಲಿ ಪತ್ರಿಕೆ ಮುಂಚೂಣೆಯಲ್ಲಿದೆಯೆಂದು ತಿಳಿಸಲು ಅಭಿಮಾನವೆನಿಸುತ್ತಿದೆ.

ಈಶಾನ್ಯ ಭಾರತದ ಜನರ ವಲಸೆ ಘಟನೆ ಹಿನ್ನಲೆಯಲ್ಲಿ ಕರ್ನಾಟಕ ರಾಜ್ಯದ ಜನರ ಔದಾರ್ಯದ ಬಗ್ಗೆ ಕರ್ನಾಟಕ ಸರ್ಕಾರದ ಪಕ್ಷಪಾತ ಧೋರಣೆಯ ಬಗ್ಗೆ ವಿಷದವಾಗಿ ಪ್ರಸ್ತಾಪಿಸಿ ''ಕೋಮುವಾದಿಗಳೇ ಅಧಿಕಾರ ಹಿಡಿದಾಗ ಎಲ್ಲಾ ಕೋಮುಗಳ ಜನತೆ ಜಾಗೃತರಾಗಬೇಕು'' ಎನ್ನುವ ಆಶಯ ವ್ಯಕ್ತಪಡಿಸಿರುವ ಮಾನ್ಯ ಸಿದ್ದನಗೌಡ ಪಾಟೀಲರ ಸಂಪಾದಕೀಯ ಮೌಲ್ಯಯುತವಾಗಿದೆ.

''ಭ್ರಷ್ಟಾಚಾರದ ವಿರುದ್ಧ ಸಮರ'' ಮತ್ತು ''ಯಾರ

ಸಂಸ್ಕೃತಿಯ ರಕ್ಷಣೆ'' ಸಂಪಾದಕೀಯಗಳೂ ಕೂಡ ಓದುಗರ ಮನಮುಟ್ಟುವಂತಿವೆ. ಕೆ. ಎಸ್. ರವಿಕುಮಾರ್ ರವರ ''ಎಲ್ಲವೂ ವೇದಗಳಲ್ಲಿದೆ!'' ಲೇಖನದಲ್ಲಿ ಚಲನಶೀಲತೆ ಇಲ್ಲದ ಪೂರ್ವಾಗ್ರಹಪೀಡಿತ, ರೋಗಗ್ರಸ್ತ, ಕೊಳಕು ಜನರ ಮನೋಸ್ಥಿತಿಯನ್ನು ತೆರೆದಿಡುವುದರ ಜೊತೆಗೆ ನಿಜಕ್ಕೂ ಭಾರತರತ್ನ ಅಷ್ಟೇ ಏಕೆ ವಿಶ್ವರತ್ನವೇ ಆಗಿರುವ ಮಹಾನ್ ವಿಜ್ಞಾನಿ, ಮಾನವತಾವಾದಿ, ಸಹನಶೀಲ, ಸತ್ಯಪ್ರತಿಪಾದಕ ''ಮೇಘನಾದ ಸಹಾ'' ಅವರ ಜೀವನ, ಸಾಧನೆ, ಕಾಣಿಕೆಗಳ ಪರಿಚಯ ಮಾಡಿಕೊಟ್ಟಿರುವುದು ಶ್ಲಾಘನೀಯವಾಗಿದೆ.

''ನೆನಪಿನಂಗಳದಲ್ಲಿ ಕ್ಯಾಪ್ಟನ್ ಲಕ್ಷ್ಮಿ'' ಲೇಖನದಲ್ಲಿ ಮಹಿಳೆಯರ ದಿಟ್ಟತನವನ್ನು ಮನಗಾಣಿಸುತ್ತಾ ''ಕ್ಯಾಪ್ಟನ್ ಲಕ್ಷ್ಮಿ'' ಅಂಥವರು ನಮ್ಮ ಆಧುನಿಕ ವಿದ್ಯಾವಂತ ಮಹಿಳೆಯರಿಗೆ ಮಾದರಿಯಾಗಿದ್ದಾರೆಂಬ ಮನವರಿಕೆ ಮೂಡಿಸಲಾಗಿದೆ. ''ಸರ್ವಜ್ಞಾಂಕಿತ ತ್ರಿಪದಿ''ಗಳು ಲೇಖನದಲ್ಲಿ ಡಾ|| ರಾಮಲಿಂಗಪ್ಪನವರು ವಿಮರ್ಶಾತ್ಮಕವಾಗಿ, ತೌಲನಿಕವಾಗಿ ಓದುಗರಿಗೆ ಪರಿಚಯಿಸಿರುವುದು ಪರಿಣಾಮಕಾರಿಯಾಗಿದೆ.

ದಾವಣಗೆರೆ — *ಪಿ. ಅಂಜನಪ್ಪ ಗುಂಡಗತ್ತಿ*

### ಕವಿ ಲಕ್ಕೂರು ಆನಂದ ಅವರ ಕೃತಿಗೆ ವಿಭಾ ಸಾಹಿತ್ಯ ಪ್ರಶಸ್ತಿ

ಕವಯತ್ರಿ ವಿಭಾ ಅವರ ನೆನಪಿನಲ್ಲಿ ಸಂಘಟಿಸಿದ ೨೦೧೨ರ 'ವಿಭಾ ಸಾಹಿತ್ಯ ಪ್ರಶಸ್ತಿ'ಯು ಕೋಲಾರದ ಲಕ್ಕೂರು ಆನಂದ ಅವರ 'ಉರಿವ ಏಕಾಂತ ದೀಪ' ಎಂಬ ಹಸ್ತಪ್ರತಿಗೆ ದೊರಕಿದೆ. ಈ ಪ್ರಶಸ್ತಿಯು ರೂ. ೫೦೦೦ ನಗದು ಮತ್ತು ಪ್ರಶಸ್ತಿ ಫಲಕವನ್ನು ಒಳಗೊಂಡಿದೆ. ಸ್ಪರ್ಧೆಯ ತೀರ್ಪುಗಾರರಾಗಿ ಕನ್ನಡದ ಖ್ಯಾತ ಲೇಖಕರಾದ ಡಾ|| ಬಂಜಗೆರೆ ಜಯಪ್ರಕಾಶ ಹಾಗೂ ಖ್ಯಾತ ಕವಯತ್ರಿ ಡಾ|| ಎಚ್. ಎಲ್. ಪುಷ್ಪಾ ಕಾರ್ಯ ನಿರ್ವಹಿಸಿದ್ದರು. ಪ್ರಶಸ್ತಿ ಪುರಸ್ಕೃತ ಕೃತಿಯು ಗದಗದ ಲಡಾಯಿ ಪ್ರಕಾಶನದಿಂದ ಪ್ರಕಟಗೊಳ್ಳಲಿದ್ದು, ಪ್ರಶಸ್ತಿ ಪ್ರದಾನ ಸಮಾರಂಭ ಮತ್ತು ಕೃತಿ ಬಿಡುಗಡೆಯ ಕಾರ್ಯಕ್ರಮವು ಇದೇ ಅಕ್ಟೋಬರ್ ತಿಂಗಳಲ್ಲಿ ಧಾರವಾಡದಲ್ಲಿ ನೆರವೇರಲಿದೆ ಎಂದು ಸಂಚಾಲಕರಾದ ಪ್ರಕಾಶ ಮತ್ತು ಸುನಂದಾ ಕಡಮೆ ತಿಳಿಸಿದ್ದಾರೆ.

### 'ಆಹಾರ ಪದ್ಧತಿ ಬದಲಾಯಿಸಿ, ರೋಗ ಮುಕ್ತರಾಗಿ'

''ಸಕ್ಕರೆ ಕಾಯಿಲೆಯನ್ನು ಇನ್ಸುಲಿನ್ - ಮಾತ್ರೆಗಳಿಲ್ಲದೆ ನಿಯಂತ್ರಣದಲ್ಲಿರಿಸಿಕೊಳ್ಳಬಹುದು.'' ಈ ಕಾರ್ಯಕ್ರಮ ಗಾಂಧೀಭವನದಲ್ಲಿ ೧೯-೮-೨೦೧೨ ಭಾನುವಾರದಂದು ಸಫಲತೆ ಕಂಡು ಆನಂದ-ಆಶ್ಚರ್ಯವಾಯಿತು. ಮರೆಯಲಾರದಂತಹ ಅನುಭವ. ಮಧುಮೇಹಿಗಳಿಗೆ ಅಗತ್ಯ ಮತ್ತು ಅಮೂಲ್ಯ. ಆಧುನಿಕ ವೈದ್ಯಶಾಸ್ತ್ರ ವೈದ್ಯರಿಗಂತೂ ಅಪರೂಪದ ಅರಿವು ಮೂಡಿಸುವಂಥದ್ದು. ಕೊನೆಯವರೆಗೂ ಆಸಕ್ತಿಯಿಂದ ಕೂಡಿತು, ಆದರೆ ಕಾಲಾವಕಾಶ ಕಡಿಮೆ, ವಿಷಯ ಹೆಚ್ಚು.

ತರಕಾರಿ, ಮೊಳಕೆ ಕಾಳಿನ ಊಟದ ವ್ಯವಸ್ಥೆ ಒಂದು ಹೊಸ ಅನುಭವ. ಇದು 'ಹೊಸತು' ಪತ್ರಿಕೆ ಸಂಸ್ಥೆಯಿಂದ ಅತ್ಯುತ್ತಮ ಸಮಾಜಸೇವೆ, ಸಾರ್ಥಕವಾಗಿತ್ತು.

ಡಾ|| ಬಿ. ಎಸ್. ಕಕ್ಕಿಲ್ಲಾಯ ಮಂಡಿಸಿದ ಕೆಲವು ಸಂಗತಿಗಳು ಕೇಳಿದವರಲ್ಲಿ ತುಂಬ ಗೊಂದಲ ಮೂಡಿಸಿತ್ತು. ಹಾಲು ಮತ್ತು ಹಾಲಿನಿಂದ ತಯಾರಾದ ಪದಾರ್ಥಗಳನ್ನು ಸೇವಿಸಬಾರದು; ಕೋಳಿಮೊಟ್ಟೆ, ಮೀನು ಸೇವಿಸಬೇಕು ಎಂಬುದನ್ನು ಕೇಳಿದಾಗ ಸಸ್ಯಾಹಾರಿಗಳಿಗೆ ಗೊಂದಲವಾಯಿತು.

ಈಗ ಪ್ರಸ್ತುತ ಉಳಿದಿರುವ ಪ್ರಶ್ನೆ ''ಹಾಗಾದರೆ ಬದಲಿ ಉಪಾಯವಿಲ್ಲವೇ?'' ದಯವಿಟ್ಟು ಮುಂದೇನು ಎಂಬುದನ್ನು ಸಮಾಲೋಚಿಸಿ ತಿಳಿಸಿದರೆ ಉತ್ತಮ.

ಬೆಂಗಳೂರು — *ಇ. ವಿ. ವೆಂಕಟರಾಮ ಗುಪ್ತ*

## ಕಾವೇರಿ : ಸಂಕಷ್ಟದ ವಾಸ್ತವ ಅಧ್ಯಯನವಾಗಲಿ

ಕಾವೇರಿ ನದಿ ಕರ್ನಾಟಕ-ತಮಿಳುನಾಡಿನಲ್ಲಿ ಬೆಳೆಗಳನ್ನು ಬೆಳೆಸಿದಷ್ಟೇ ರಾಜಕಾರಣಿಗಳನ್ನೂ ಬೆಳೆಸಿದೆ. ರಾಜಕಾರಣಿಗಳಿಗೆ ರಾಜಕಾರಣ ಮಾಡಲು, ಅರಾಜಕಾರಣವನ್ನು ಮರೆಮಾಚಲು ಕಾವೇರಿ ನದಿ ಬಳಕೆಯಾಗಿದೆ. ಈಗ ಮತ್ತೊಮ್ಮೆ ಈ ಎರಡೂ ರಾಜ್ಯಗಳ ಮಧ್ಯೆ ಕಾವೇರಿ ವಿವಾದ ಎದ್ದುನಿಂತಿದೆ. ಈಬಾರಿ ಎರಡೂ ರಾಜ್ಯಗಳ ರಾಜಕಾರಣಿಗಳಿಗಿಂತ ಈ ದೇಶದ ಪ್ರಧಾನಿ ಮನಮೋಹನ ಸಿಂಗ ವಿವಾದದ ಕೇಂದ್ರಬಿಂದುವಾಗಿದ್ದಾರೆ. ಪ್ರಧಾನಿ ಮನಮೋಹನ ಸಿಂಗ ಯಾವತ್ತೂ ರಾಜಕೀಯ ಮುತ್ಸದ್ದಿಯಾಗಿ ವರ್ತಿಸಿದವರೇ ಅಲ್ಲ. ಅವರೊಬ್ಬ ಬ್ಯೂರೋಕ್ರೇಟ್. ಅಂತೆಯೇ ಈಗ ಪ್ರಧಾನಿಯವರು ತಮಿಳುನಾಡು ಸಂಕಷ್ಟದ ಸಂದರ್ಭದ ನೀರಿನ ಹಂಚಿಕೆಗಾಗಿ ಎತ್ತಿದ ತಗಾದೆಯನ್ನು ಕಾವೇರಿ ನದಿ ಪ್ರಾಧಿಕಾರದ ಅಧ್ಯಕ್ಷರಾಗಿ ತಾಂತ್ರಿಕ ಸಮಿತಿಯಲ್ಲಿರುವ ಅಧಿಕಾರಿಗಳ ಮಾತು ಕೇಳಿ ತಮ್ಮ ತೀರ್ಮಾನ ಹೇಳಿದ್ದಾರೆ. ಸೆಪ್ಟೆಂಬರ್ ೧೯ರಂದು ನಡೆದ ಕಾವೇರಿ ನದಿ ಪ್ರಾಧಿಕಾರದ ಸಭೆಯಲ್ಲಿ ಕರ್ನಾಟಕ, ತಮಿಳುನಾಡು, ಕೇರಳ, ಪಾಂಡಿಚೇರಿ ರಾಜ್ಯಗಳ ಮುಖ್ಯಮಂತ್ರಿಗಳ ಸಭೆಯಲ್ಲಿ ಕರ್ನಾಟಕ ಅಕ್ಟೋಬರ್ ೧೫ರವರೆಗೆ ನಿತ್ಯ ಒಂಭತ್ತು ಸಾವಿರ ಕ್ಯೂಸೆಕ್ಸ್ ನೀರನ್ನು ತಮಿಳುನಾಡಿಗೆ ಬಿಡಬೇಕೆಂದು ಆದೇಶ ಮಾಡಿದ್ದಾರೆ. ಈ ಆದೇಶ ಕರ್ನಾಟಕದಲ್ಲಿ ಬಿರುಗಾಳಿ ಎಬ್ಬಿಸಿದೆ.

ಕಾವೇರಿ ನ್ಯಾಯಮಂಡಲಿ ಅಂತಿಮ ತೀರ್ಪು ನೀಡಿದ ನಂತರ ಕರ್ನಾಟಕ, ತಮಿಳುನಾಡು ಅದನ್ನು ಒಪ್ಪಬೇಕಾದ ಅನಿವಾರ್ಯತೆಗೆ ಒಳಗಾಗಿದ್ದವು. ಆದರೂ ತಮಿಳುನಾಡ ಸರಕಾರ ತನ್ನ ಅಸಮಾಧಾನವನ್ನು ಆಗಾಗ ಹೊರಹಾಕುತ್ತಲೇ ಇದೆ. ಈ ಅಸಮಾಧಾನ ರಾಜಕೀಯ ಕಾರಣಗಳಿಗಾಗಿ ಎನ್ನುವುದು ಎಲ್ಲರಿಗೂ ತಿಳಿದ ವಿಷಯವೇ. ನ್ಯಾಯಮಂಡಲಿ ಸಾಕಷ್ಟು ಮಳೆಯಾದಾಗ ನೀರು ಹಂಚಿಕೊಳ್ಳುವ ಸೂತ್ರಗಳನ್ನು ಸ್ಪಷ್ಟವಾಗಿ ಹೇಳಿತು. ಆದರೆ ಬರಗಾಲ, ಮಳೆಯ ಕೊರತೆಯ ಸಂದರ್ಭದಲ್ಲಿ ಸಂಕಷ್ಟದ ಹಂಚಿಕೆಯ ಕುರಿತು ಸ್ಪಷ್ಟವಾಗಿ ಏನನ್ನೂ ಹೇಳಲಿಲ್ಲ. ನಿರ್ದಿಷ್ಟವಾದ ಸೂತ್ರ ರೂಪಿಸಲಿಲ್ಲ. ಸಂಕಷ್ಟದ ಪರಿಸ್ಥಿತಿಯನ್ನು ಅಂದಾಜು ಮಾಡುವದು, ಎರಡೂ ರಾಜ್ಯಗಳ ಪರಿಸ್ಥಿತಿಯನ್ನು ಮಳೆಯ ಅನುಪಾತಗಳನ್ನು ಆಗ ನಿರ್ಧರಿಸುವುದು ಕಷ್ಟವಾಗಿರಬಹುದು. ಅಂತೆಯೇ ಸಂಕಷ್ಟದ ಸಂದರ್ಭದ ನೀರಿನ ಹಂಚಿಕೆ ಜವಾಬ್ದಾರಿಯನ್ನು ಪ್ರಧಾನಿಗಳು ಅಧ್ಯಕ್ಷರಾಗಿರುವ ಕಾವೇರಿ ನದಿ ಪ್ರಾಧಿಕಾರದ ಮೇಲೆ ಹಾಕಿದೆ. ಈ ಪ್ರಾಧಿಕಾರ ತನ್ನ ಉಸ್ತುವಾರಿ ಸಮಿತಿಯ ಮೂಲಕ ವಿವಾದಗಳನ್ನು ಬಗೆಹರಿಸುತ್ತದೆ. ಈಗ ತಮಿಳುನಾಡು ಸರಕಾರ ಕಾವೇರಿ ನದಿ ಪ್ರಾಧಿಕಾರಕ್ಕೆ ಸಂಕಷ್ಟದ ಸಂದರ್ಭದ ನೀರಿನ ಹಂಚಿಕೆಗಾಗಿ ಕೋರಿಕೆ ಸಲ್ಲಿಸಿದೆ. ಅಧ್ಯಕ್ಷರಾಗಿರುವ ಪ್ರಧಾನಿಗಳು ಪ್ರಾಧಿಕಾರದ ತಾಂತ್ರಿಕ ಸಮಿತಿಯ ಸಲಹೆಯ ಮೇಲೆ ತಮ್ಮ ತೀರ್ಮಾನ ನೀಡದೆ ಒಂದು ಸಮಿತಿ ರಚಿಸಿ ಎರಡೂ ರಾಜ್ಯಗಳ ಸಂಕಷ್ಟದ ಸ್ಥಿತಿಗಳನ್ನು ಅಧ್ಯಯನ ಮಾಡಿ, ಎರಡೂ ರಾಜ್ಯಗಳ ಅಭಿಪ್ರಾಯ ಕೇಳಿ ತಮ್ಮ ಆದೇಶ ಕೊಡಬಹುದಿತ್ತು. ಅದನ್ನು ಮಾಡದೆ, ಕರ್ನಾಟಕ ಬರಕ್ಕೆ ತುತ್ತಾಗಿದೆ, ವಾಡಿಕೆ ಮಳೆಗಿಂತ ಈ ಬಾರಿ ಈ ಪ್ರದೇಶದಲ್ಲಿ ಶೇ. ೩೦-೪೦ರಷ್ಟು ಮಳೆ ಕಡಿಮೆಯಾಗಿದೆ. ಪರಿಣಾಮವಾಗಿ ರಾಜ್ಯಕ್ಕೆ ಅವಶ್ಯವಿರುವ ಅಂದಾಜು ೧೫೫ ಟಿಎಂಸಿ ನೀರಿನ ಬದಲಾಗಿ ಕಾವೇರಿ ಕಣಿವೆ ಜಲಾಶಯಗಳಲ್ಲಿ ಸಂಗ್ರಹವಾಗಿರುವ ನೀರು ೭೫ ಟಿಎಂಸಿ ಮಾತ್ರ. ಇದರಲ್ಲಿ ಈ ಭಾಗದ ನಗರಗಳ ಪ್ರಜೆಗಳ ಕುಡಿವ ನೀರೂ ಸೇರಿದೆ. ಇಂಥ ಸಂದರ್ಭದಲ್ಲಿ ವಾಸ್ತವ ಪರಿಸ್ಥಿತಿಯ ಅಧ್ಯಯನ ಮಾಡದೆ ಪ್ರಧಾನಿ ಮನಮೋಹನ ಸಿಂಗ್ ಅವರು ಬ್ಯೂರೋಕ್ರೇಟ್ ತರಹ ೨೫ ದಿನಗಳಲ್ಲಿ ಸುಮಾರು ೨೦ ಟಿಎಂಸಿ ನೀರು ಬಿಡಬೇಕೆಂದರೆ ಸಹಜವಾಗಿಯೇ ಜನ ದಂಗೆ ಏಳುತ್ತಾರೆ. ಮಾನ್ಯ ಮನಮೋಹನ ಸಿಂಗ್ ಅವರು ಒಬ್ಬ ಮುತ್ಸದ್ದಿಯಾಗಿದ್ದರೆ ಕನಿಷ್ಠ ಎರಡೂ ರಾಜ್ಯಗಳ ಕಾಂಗ್ರೆಸ್ ಮುಖಂಡರ ಅಭಿಪ್ರಾಯಗಳನ್ನಾದರೂ ಕೇಳಬಹುದಿತ್ತು. ಕರ್ನಾಟಕದ ಸರ್ವಪಕ್ಷದ ಸಭೆಯಲ್ಲಿ ರಾಜ್ಯದ ಕಾಂಗ್ರೆಸ್ ನಾಯಕರು ತಮ್ಮದೇ ಪಕ್ಷದ ಪ್ರಧಾನಿಯ ವಿರುದ್ಧ ಹೋರಾಟಕ್ಕೆ ಕರೆಕೊಟ್ಟಿದ್ದಾರೆ.

ಪ್ರಧಾನಿ ಮನಮೋಹನ ಸಿಂಗ್ ಅವರು ಎರಡೂ ರಾಜ್ಯಗಳ ಸಂಕಷ್ಟದ ಪರಿಸ್ಥಿತಿಯನ್ನು ಪರಾಮರ್ಶಿಸದೆ ಕೊಟ್ಟಿರುವ ಈ ಆದೇಶದ ಹಿಂದೆ ಕಾವೇರಿ ನೀರಿನಲ್ಲಿ ಅವರೂ ರಾಜಕೀಯ ಬೇಳೆ ಬೆಳೆಯುವ ಉದ್ದೇಶದ ವಾಸನೆ ಕಾಣುತ್ತದೆ. ಕೇಂದ್ರ ಸರ್ಕಾರ ಸಂಕಷ್ಟದಲ್ಲಿದೆ. ತಮ್ಮ ಅಧಿಕಾರ ಉಳಿಯಲು ಡಿಎಂಕೆಯ ನಾಯಕ ಕರುಣಾನಿಧಿ ಯುಪಿಎ ಜೊತೆ ಸ್ಥಿರವಾಗಿರಬೇಕು. ಅವರೇನಾದರೂ ಕೈಕೊಟ್ಟರೆ ಈಗ ಯಾವ ಬಣದಲ್ಲೂ ಇಲ್ಲದ ಎಐಡಿಎಂಕೆ ನಾಯಕಿ ಜಯಲಲಿತಾ ಸಹಾಯಕ್ಕೆ ಬರಬೇಕು. ಈ ಎಲ್ಲ ಲೆಕ್ಕಾಚಾರಗಳು ಕೇಂದ್ರ ಸರಕಾರದ ರಕ್ಷಣೆಗಾಗಿ ನಡೆದು, ಕರ್ನಾಟಕದ ನೀರಿನ ಅವಶ್ಯಕತೆಗೆ ಧಕ್ಕೆ ತಂದಿವೆಯಾ ಎಂಬ ಸಂಶಯ ಮೂಡಲಾರಂಭಿಸಿದೆ.

ಅಂತಿಮವಾಗಿ ಕಾವೇರಿ ನದಿ ಪ್ರಾಧಿಕಾರದ ಅಧ್ಯಕ್ಷರ ಈಗಿನ ಆದೇಶ ಜಾರಿಯಾದರೆ ಜನರ ಆಕ್ರೋಶ ತೀವ್ರವಾಗುತ್ತದೆ. ಕರ್ನಾಟಕ ಸರಕಾರ ಸಂಕಷ್ಟ ಹಂಚಿಕೆಗೆ ಹಲವು ಸೂತ್ರಗಳನ್ನು ಪ್ರಾಧಿಕಾರದ ಮುಂದಿಟ್ಟಿದೆ. ಅವುಗಳನ್ನು ಪರಿಗಣಿಸಬೇಕು. ಖಂಡಿತ ಪ್ರಧಾನಿಯಾದವರು ಎಲ್ಲ ರಾಜ್ಯಗಳ ಹಿತ ಕಾಯುವ ಜವಾಬ್ದಾರಿ ಹೊರಬೇಕು. ತಮಿಳುನಾಡಿನ ರೈತರೂ ನಮ್ಮ ದೇಶದ ರೈತರೇ. ಇಲ್ಲಿ ಎರಡೂ ರಾಜ್ಯಗಳ ಮಧ್ಯೆ ಸಂಕಷ್ಟ ಹಂಚಿಕೆಯಾಗಬೇಕು. ಯಾವ ರಾಜ್ಯವೂ ಏಕಾಂಗಿಯಾಗಿ ಸಂಕಷ್ಟಕ್ಕೆ ದೂಡಲ್ಪಡಬಾರದು. ಅದಕ್ಕೆ ಎರಡೂ ರಾಜ್ಯಗಳ ಸಂಕಷ್ಟದ ಪರಿಸ್ಥಿತಿಯ ವಾಸ್ತವ ಅಧ್ಯಯನ ಆಗಬೇಕು. ಸೂಕ್ತ ಪರಿಹಾರ ಕಂಡುಹಿಡಿಯಬೇಕು. ಇದು ಗದ್ದಲ ದೊಂಬಿಗಳ ಮೂಲಕ ಬಗೆಹರಿಯುವ ವಿಷಯವಲ್ಲ ಎಂಬುದು ಎರಡೂ ರಾಜ್ಯಗಳ ಪುಢಾರಿಗಳಿಗೆ, ಭಾಷಾಂಧರಿಗೆ ಅರ್ಥವಾಗಬೇಕು.

— ಡಾ|| ಸಿದ್ದನಗೌಡ ಪಾಟೀಲ

# ಕರಿಯ ಹೆಂಗಸು



ನಾನು ಹಾದು ಬಂದ ಸಮುದ್ರದ
ಉಪ್ಪುನೀರಿನ ಎರಚಲು ವಾಸನೆ
ನನಗಿನ್ನೂ ನೆನಪಿದೆ
ಆ ರಾತ್ರಿಯ ನೆನಪು
ಸಮುದ್ರಕ್ಕೆ ಇಲ್ಲದಿರಬಹುದು

ನಾನು ಕಂಡ ಮೊದಲ ಅಲ್ಬೆಟ್ರಾಸ್ ಹಕ್ಕಿ
ಎತ್ತರದ ಆಕಾಶದಲ್ಲಿ ಗರಿಗೆದರಿ ಹಾರುತ್ತಿತ್ತು
ಅದು ಅಲ್ಲಿ ನಡೆಯುತ್ತಿದ್ದ
ಘಟನೆಗಳಿಗೆ ಮೂಕಸಾಕ್ಷಿಯಾಗಿತ್ತು
ಆದರೆ ನಾನು ನನ್ನ ಸಮುದ್ರತೀರದ
ಹಳ್ಳಿಯನ್ನು ಮಾತೃಭಾಷೆಯನ್ನು
ಮರೆಯಬೇಕಾಯಿತು

ನನ್ನನ್ನು ಅವರು ಇಲ್ಲಿಗೆ ಕರೆತಂದರು
ನಾನು ಇಲ್ಲಿಯೇ ಬದುಕುತ್ತಿದ್ದೇನೆ
ಏಕೆಂದರೆ ನಾನು ದನದ ಹಾಗೆ ದುಡಿಯಬಲ್ಲೆ
ನಾನು ಮತ್ತೆ ಮತ್ತೆ ಹುಟ್ಟಿಬಂದಿದ್ದೇನೆ
ಇಲ್ಲಿ ದುಡಿಯುವುದಕ್ಕಾಗಿ
ನಾನು ನನ್ನ ಪೂರ್ವಜರ
ಹಾಡನ್ನು ಮರೆತುಬಿಟ್ಟೆ
ನಾನು ಪ್ರತಿಭಟಿಸಿದೆ

ನನ್ನ ಮಾಲೀಕರು ನನ್ನನ್ನು
ಮಾರುಕಟ್ಟೆಗೆ ತಂದರು, ಮಾರುವುದಕ್ಕಾಗಿ
ನಾನು ನನ್ನ ಯಜಮಾನನಿಗಾಗಿ
ಷರ್ಟುಗಳನ್ನು ಹೊಲಿದುಕೊಟ್ಟಿದ್ದೆ
ಹಾಗೇ ಒಬ್ಬ ಮಗನನ್ನೂ ನೀಡಿದ್ದೆ
ಆದರೆ ನನ್ನ ಮಗನಿಗೆ ಹೆಸರೇ ಇರಲಿಲ್ಲ
ನನ್ನೆಜಮಾನನನ್ನು ಯಾರೋ ಗುರುತರಿಯದವರು
ಗುಂಡಿಟ್ಟುಕೊಂದಿದ್ದರು – ಸಂಪತ್ತಿನಾಸೆಗಾಗಿ
ನಾನು ಅಲೆದಾಡಿದೆ

ಈ ನೆಲದಲ್ಲಿ ನಾನು ಛಡಿ ಏಟು ತಿಂದೆ
ಅವಮಾನಗಳನ್ನು ಅನುಭವಿಸಿದೆ
ಎಲ್ಲ ನದಿಗಳ ಮೇಲೂ ಓಡಾಡಿದೆ
ಸೂರ್ಯನ ಎದುರಲ್ಲಿ ಉತ್ತಿ-ಬಿತ್ತಿ , ಬೆಳೆದೆ
ಆದರೆ ನಾ ಬೆಳೆದದ್ದು ನಾನುಣ್ಣಲಿಲ್ಲ
ನನ್ನ ಮನೆಯೊಂದು ದನದ ಕೊಟ್ಟಿಗೆ
ಅದನ್ನು ಕಟ್ಟಲು ನಾನು ಕಲ್ಲು ಹೊತ್ತಿದ್ದೆ
ನಾನು ಎದ್ದು ನಿಂತೆ

ಈ ನೆಲದಲ್ಲಿ ಕರಿಯ ರಕ್ತ
ಹರಿಯುವುದ ಕಂಡೆ
ಕೊಳೆತ ಕರಿಯ ಹೆಣಗಳು
ಹೆಪ್ಪುಗಟ್ಟಿರುವುದ ಕಂಡೆ
ನಾನು ಮತ್ತೆ ನನ್ನೂರಿಗೆ ಹೋಗುವ
ಕನಸುಗಳ ಬಿಟ್ಟೆ
ನನ್ನೂರಾವುದು ಅದು ಜಿನೀವಾ,
ಬೆನಿನ್, ಮಡಗಾಸ್ಕರ್
ಅಥವಾ ಕೇಪ್ ವರ್ಡ್
ಯಾವುದೂ ನೆನಪಿಲ್ಲ
ನಾನು ಹೆಚ್ಚು ಹೆಚ್ಚು ದುಡಿದೆ

ನನ್ನ ಆಸೆಗಳು ಹೆಚ್ಚಾದವು
ನನ್ನ ವಯಸ್ಸೂ ಹೆಚ್ಚಿತು
ನನ್ನ ಹಳೆಯ ಹಾಡುಗಳು
ನನ್ನೆದೆಯಲ್ಲಿ ಮಡುಗಟ್ಟಿದವು
ನಾನು ನೀಲಿಬೆಟ್ಟಕ್ಕೆ ಹೋದೆ

ನನ್ನ ನಿಜವಾದ ಸ್ವಾತಂತ್ರ್ಯ
ನನ್ನು ಬೆಟ್ಟದ ಮೇಲಿನ ಕೋಟೆ
ಕಡೆಗೆ ಕರೆದೊಯ್ದಿತು
ನಮ್ಮ ಸಂಘಟನೆ
ಬೆಟ್ಟದಂತೆ ಎದ್ದು ನಿಂತಿತು
ಒಂದು ಶತಮಾನದ ನಂತರ
ನೀಲಿ ಬೆಟ್ಟದಿಂದ ನಾವು
ನೀರಿನ ಜಲಪಾತದಂತೆ ಕೆಳಗಿಳಿದೆವು
ಬಂಡವಾಳಶಾಹಿಗಳ, ಸಾಹುಕಾರರ
ಅಧಿಕಾರಿಗಳ, ಮಿಲಿಟರಿ ಜನರಲ್ಲುಗಳ
ಸೊಕ್ಕಡಗಿಸುವುದಕ್ಕೆ

ಅವರಿಗೆ ನಮ್ಮಿಂದ ಏನನ್ನೂ
ಕಸಿಯಲಾಗಲಿಲ್ಲ
ಈ ನೆಲ ನಮ್ಮದು
ಈ ಸಮುದ್ರ ನಮ್ಮದು
ಈ ವ್ಯಕ್ತಿತ್ವ ನಮ್ಮದು

ನನ್ನ ಜನ ನಾವೇ ನೆಟ್ಟ
ಮರದ ಸುತ್ತ
ಹಾಡಿ ಕುಣಿಯುತ್ತಿದ್ದಾರೆ
ಕಳೆದುದು ಸಿಕ್ಕ ಖುಷಿಯಲ್ಲಿ
ಮರ ಸದ್ದು ಮಾಡುತ್ತಿದೆ.

ಆಫ್ರಿಕ ಮೂಲ : **ನಾನ್ಸಿ ಮೊರೆಜೋನ್**
ಕನ್ನಡಕ್ಕೆ : **ಎನ್. ವೆಂಕಟಕೃಷ್ಣ**
ನಂ. ೨೦ಎ, ೩ನೇ 'ಬಿ' ಕ್ರಾಸ್, ಗುರುರಾಜ ಬಡಾವಣೆ, ದೊಡ್ಡನೆಕ್ಕುಂದಿ
ಬೆಂಗಳೂರು - ೫೬೦ ೦೩೭




**ಡಾ|| ಎಮ್. ಎಸ್. ಎಸ್. ಮೂರ್ತಿ**

**ಜು**ಲೈ ೪, ೨೦೧೨ರಂದು ವಿಜ್ಞಾನ ಪ್ರಪಂಚದಲ್ಲಿ ವಿದ್ಯುತ್ ಸಂಚಲನವಾಯಿತು. ಐರೋಪ್ಯ ಪರಮಾಣು ಸಂಶೋಧನಾ ಕೇಂದ್ರದಲ್ಲಿ ವಿಶ್ವದ ನಾನಾ ಭಾಗಗಳಿಂದ ಬಂದಿದ್ದ ಸಾವಿರಾರು ವಿಜ್ಞಾನಿಗಳು ನೆರೆದಿದ್ದರು. ಅವರ ಸಮ್ಮುಖದಲ್ಲಿ ಕೇಂದ್ರದ ನಿರ್ದೇಶಕ ರಾಲ್ಫ್ ಹೋರ್ ಅವರು ''ಯಾವುದು ಕಣಭೌತವಿಜ್ಞಾನದ ಅಡಿಗಲ್ಲು ಎಂದು ಪರಿಗಣಿಸಲಾಗಿದೆಯೋ ಆ ಕಣವನ್ನು ಇಂದು ನಾವು ಪತ್ತೆ ಹಚ್ಚಿದ್ದೇವೆ'' ಎಂದು ಘೋಷಿಸಿದರು. ಅದಕ್ಕೆ ಪೂರಕವಾಗಿ ಹಲವಾರು ವರ್ಷಗಳಿಂದ ನಡೆಯುತ್ತಿದ್ದ ಸಂಶೋಧನೆಗಳ ಪರಿಣಾಮಗಳನ್ನು ವಿಶಾಲ ಪರದೆಯ ಮೇಲೆ ಹರಿಬಿಟ್ಟಾಗ ನೆರೆದಿದ್ದ ವಿಜ್ಞಾನಿಗಳು ಕುತೂಹಲದಿಂದ ನೋಡುತ್ತ ಕರತಾಡನ ಮಾಡಿದರು. ವಿಶ್ವದಲ್ಲಿ ದ್ರವ್ಯಕ್ಕೆ ರಾಶಿ ಹೇಗೆ ಒದಗಿತು ಎಂಬುದನ್ನು ವಿವರಿಸುವ ಆ ಕಣಕ್ಕೆ ಕಣಭೌತವಿಜ್ಞಾನದಲ್ಲಿ ಅದೆಷ್ಟು ಮಹತ್ವದ ಸ್ಥಾನವೆಂದರೆ ಮಾಧ್ಯಮಗಳು ಅದನ್ನು ದೇವಕಣ ಎಂದು ಹೊಗಳಿ ಹಾಡಿವೆ. ಆದರೆ ವಿಜ್ಞಾನಿಗಳು ಅದನ್ನು 'ಹಿಗ್ಸ್ ಬೋಸಾನ್' ಎಂದು ನಿರ್ಭಾವುಕವಾಗಿ ಗುರುತಿಸುತ್ತಾರೆ. ಐವತ್ತು ವರ್ಷಗಳಿಂದಲೂ ವಿಜ್ಞಾನಿಗಳ ಕಣ್ಣು ತಪ್ಪಿಸಿದ್ದು ಈಗ ತನ್ನ ಅಸ್ತಿತ್ವದ ಬಗ್ಗೆ ನಿರ್ಣಾಯದಾಯಕ ಸುಳಿವು ನೀಡಿದೆ. ಈ ಸಾಧನೆ ಹಲವಾರು ರಾಷ್ಟ್ರಗಳ ಸಾವಿರಾರು ವಿಜ್ಞಾನಿಗಳ ಪರಿಶ್ರಮದ ಫಲ. ಹಾಗಾಗಿ ಎಲ್ಲೆಡೆ ಇಷ್ಟೊಂದು ಉತ್ಸಾಹ, ಸಂಭ್ರಮ.



ಪರದೆಯ ಮೇಲೆ ಮೂಡಿದ ಹಿಗ್ಸ್ ಬೋಸಾನ್‌ನ ಕುರುಹುಗಳನ್ನು ಕುತೂಹಲದಿಂದ ವೀಕ್ಷಿಸುತ್ತಿರುವ ವಿಜ್ಞಾನಿಗಳ ಸಮೂಹ

**ಹಿನ್ನೆಲೆ :** ವಿಶ್ವ ಎಂದೊಡನೆಯೇ ನಮ್ಮ ಕಣ್ಣ ಮುಂದೆ ನಿಲ್ಲುವುದು ಅದರ ಎರಡು ಮುಖಗಳು - ದ್ರವ್ಯ ಮತ್ತು ಶಕ್ತಿ. ನಾವೂ ಸೇರಿದಂತೆ ಭೂಮಿಯ ಮೇಲಿನ ವಸ್ತುಗಳು, ಹಾಗೂ ಆಕಾಶಕಾಯಗಳಾದ ಸೂರ್ಯ, ಚಂದ್ರ, ನಕ್ಷತ್ರಗಳು ಹೀಗೆ ಎಲ್ಲವೂ ದ್ರವ್ಯಮಯ. ಹೀಗೆ ವಿವಿಧ ರೂಪದಲ್ಲಿ ಕಂಡುಬರುವ ದ್ರವ್ಯದ ಮೂಲಭೂತ ಸ್ವರೂಪವೇನು ? ಈ ಪ್ರಶ್ನೆ ಅನಾದಿಕಾಲದಿಂದಲೂ ಮಾನವನನ್ನು ಕಾಡುತ್ತಿದೆ. ಹದಿನೇಳನೇ ಶತಮಾನದ ವಿಜ್ಞಾನಿ ಜಾನ್ ಡಾಲ್ಟನ್ ಎಂಬಾತ ದ್ರವ್ಯದ ಅಂತಿಮ ಘಟಕ ಅದರ ಪರಮಾಣು; ಅದನ್ನು ವಿಭಜಿಸಲಾಗದು ಎಂದು ಪ್ರತಿಪಾದಿಸಿದನು. ಆದರೆ, ಇಪ್ಪತ್ತನೇ ಶತಮಾನದ ವಿಜ್ಞಾನಿಗಳು ಪರಮಾಣುವಿನಲ್ಲೂ ಆಂತರಿಕ ರಚನೆಯನ್ನು ಗುರುತಿಸಿದರು. ಅದರ ಪ್ರಕಾರ ಪ್ರತಿ ಪರಮಾಣುವಿನ ಕೇಂದ್ರದಲ್ಲಿ ಅದರ ಬೀಜ ನ್ಯೂಕ್ಲಿಯಸ್ ಇರುತ್ತದೆ. ಸೂರ್ಯನ ಸುತ್ತ ಗ್ರಹಗಳು ಪರಿಭ್ರಮಿಸುವಂತೆ, ಪರಮಾಣುವಿನ ಬೀಜದ ಸುತ್ತ ಎಲೆಕ್ಟ್ರಾನ್ ಎಂಬ ಮತ್ತೊಂದು ಬಗೆಯ ಕಣಗಳು ಪರಿಭ್ರಮಿಸುತ್ತಿರುತ್ತವೆ. ಬೀಜಕ್ಕೂ ಅದರದೇ ಆಂತರಿಕ ರಚನೆ ಇದೆ. ಅದರಲ್ಲಿ ನ್ಯೂಟ್ರಾನ್ ಮತ್ತು ಪ್ರೋಟಾನ್ ಎಂಬ ಎರಡು ರೀತಿಯ ಉಪಕಣಗಳಿವೆ.

ಅಂದರೆ ಪ್ರೋಟಾನ್, ನ್ಯೂಟ್ರಾನ್, ಎಲೆಕ್ಟ್ರಾನ್‌ಗಳೇ ದ್ರವ್ಯದ ಮೂಲಭೂತ ಕಣಗಳೆ ? ಮೂಲಭೂತ ಕಣಗಳೆಂದರೆ ಅವೇ ಅಂತಿಮ ಹಂತ. ಅವುಗಳನ್ನು ಮತ್ತೆ ವಿಭಜಿಸಲು ಸಾಧ್ಯವಿಲ್ಲ. ಆ ದೃಷ್ಟಿಯಲ್ಲಿ ಎಲೆಕ್ಟ್ರಾನ್‌ಗಳು ಮೂಲಭೂತ ಕಣಗಳು. ಆದರೆ, ಪ್ರೋಟಾನ್ ನ್ಯೂಟ್ರಾನ್‌ಗಳಲ್ಲ. ಅವುಗಳು ಕ್ವಾರ್ಕ್ ಎಂಬ ಮತ್ತೊಂದು ಜಾತಿಯ ಮೂಲಭೂತ ಕಣಗಳಿಂದ ಸಂಯೋಜಿತವಾಗಿವೆ. ಈ ರೀತಿ ೧೨ ವಿಧವಾದ ಮೂಲಭೂತ ದ್ರವ್ಯಕಣಗಳನ್ನು ವಿಜ್ಞಾನಿಗಳು ಗುರುತಿಸಿದ್ದಾರೆ. ಅವುಗಳನ್ನು ಹಿಡಿದಿಡಲು ಬಲದ ಅವಶ್ಯಕತೆ ಇದೆಯಲ್ಲವೆ. ಅದಕ್ಕಾಗಿ ನಾಲ್ಕು ವಿಧವಾದ ಬಲ ಕ್ಷೇತ್ರಗಳನ್ನು ಕಲ್ಪಿಸಿಕೊಂಡರು. ಪ್ರತಿ ಬಲ ಕ್ಷೇತ್ರವೂ ತನ್ನದೇ ವಿಶಿಷ್ಟ ರೀತಿಯ ಕಣಗಳ ಮೂಲಕ ತನ್ನ ಪ್ರಭಾವವನ್ನು ಬೀರುತ್ತದೆ. ಇವುಗಳು ಮೂಲಭೂತ ಬಲ ಕಣಗಳು. ವಿವಿಧ ಮೂಲಭೂತ ದ್ರವ್ಯ ಹಾಗೂ ಬಲ ಕಣಗಳ ನಡುವಿನ ಪ್ರಕ್ರಿಯೆಗಳಿಂದಾಗಿ ವಿಶ್ವದಲ್ಲಿ ಕಂಡುಬರುವ ಎಲ್ಲ ರೀತಿಯ ದ್ರವ್ಯಗಳೂ ಉಂಟಾಗುತ್ತವೆ. ಉದಾಹರಣೆಗೆ, ನಿಸರ್ಗದಲ್ಲಿರುವ ಎಲ್ಲ ವಿಧವಾದ ರಾಸಾಯನಿಕ ಧಾತುಗಳೂ (ಅತಿ ಹಗುರವಾದ ಜಲಜನಕದಿಂದ ಆರಂಭವಾಗಿ ಅತಿ ಭಾರವಾದ ಯುರೇನಿಯಮ್‌ವರೆಗೆ) ಎರಡು ಬಗೆಯ ಕ್ವಾರ್ಕ್ ಮತ್ತು ಎಲೆಕ್ಟ್ರಾನ್‌ಗಳು ವಿವಿಧ ಸಂಖ್ಯೆಗಳಲ್ಲಿ ಸಂಯೋಜನೆಗೊಳ್ಳುವುದರಿಂದ ರೂಪಿತವಾಗಿವೆ. ಈ ರಾಸಾಯನಿಕ ಧಾತುಗಳ ಪರಮಾಣುಗಳು ವಿವಿಧ ರೀತಿಗಳಲ್ಲಿ ಪ್ರತಿಕ್ರಿಯಿಸಿ, ಎಲ್ಲ ಜೀವ (ಮನುಷ್ಯನೂ ಸೇರಿದಂತೆ), ನಿರ್ಜೀವ ವಸ್ತುಗಳೂ ಉತ್ಪತ್ತಿಯಾಗಿವೆ.

ಹೀಗೆ ವಿಶ್ವದ ಉಗಮ ಕುರಿತು 'ಸ್ಟ್ಯಾಂಡರ್ಡ್ ಮಾಡೆಲ್ ಆಫ್ ಪಾರ್ಟಿಕಲ್ ಫಿಸಿಕ್ಸ್' (ಎಸ್‌ಎಂಪಿಪಿ) ಎಂಬ ಒಂದು ಸಿದ್ಧಾಂತ ೧೯೭೦ರ ದಶಕದಲ್ಲಿ ಪ್ರತಿಪಾದಿತವಾಗಿತ್ತು. ಮೂಲಭೂತ ದ್ರವ್ಯ ಮತ್ತು ಶಕ್ತಿ ಕಣಗಳ ಗುಣಗಳೇನು ? ಅವು ಒಂದರೊಡನೊಂದು ಅಂತರಕ್ರಿಯಿಸುವುದರಿಂದ ವಿಶ್ವದಲ್ಲಿ ಕಂಡುಬರುವ ಎಲ್ಲ ವಿಧವಾದ ಕಾಯಗಳ ಅಸ್ತಿತ್ವಕ್ಕೂ ಹೇಗೆ ಕಾರಣವಾಗುತ್ತವೆ ಮುಂತಾದ ಅನೇಕ ಪ್ರಶ್ನೆಗಳಿಗೆ ಯಶಸ್ವಿಯಾಗಿ ಉತ್ತರ ದೊರಕಿಸಿದೆ. ಅದರಿಂದ ವಿಶ್ವದ ಅನೇಕ ವಿದ್ಯಮಾನಗಳನ್ನು ವಿವರಿಸಲು ಸಾಧ್ಯವಾಗಿದೆ. ಆದರೆ, ಅದರಲ್ಲಿ ಪ್ರಮುಖ ಸಮಸ್ಯೆ ಇತ್ತು.

ಮೂಲಭೂತ ಕಣಗಳ ಪ್ರಮುಖ ಗುಣಗಳಲ್ಲಿ 'ರಾಶಿ' ಎಂಬುದೂ ಒಂದು. ಯಾವುದೇ ಎರಡು ಕಾಯಗಳ ನಡುವಿನ ಗುರುತ್ವಾಕರ್ಷಣ ಶಕ್ತಿಗೆ ಆ ಎರಡು ಕಾಯಗಳಲ್ಲಿನ ರಾಶಿಯೇ ಕಾರಣ. ನಮ್ಮ ನಿತ್ಯ ಜೀವನದಲ್ಲಿ ತೂಕದ ರೂಪದಲ್ಲಿ ಇದು ಅನುಭವಕ್ಕೆ ಬರುತ್ತದೆ. ಭೂಮಿಯ ಗುರುತ್ವಾಕರ್ಷಣ ಶಕ್ತಿ ನಮ್ಮ ದೇಹದ ದ್ರವ್ಯರಾಶಿಯ ಮೇಲೆ ಬೀರುವ ಪ್ರಭಾವವೇ ನಮ್ಮ ತೂಕ. ಕಾಯಕ್ಕೆ ರಾಶಿ ಗುಣವಿರಬೇಕಾದರೆ ಅದರಲ್ಲಿ ಒಳಗೊಂಡಿರುವ ದ್ರವ್ಯದ ಮೂಲಭೂತ ಕಣಗಳಿಗೂ ರಾಶಿ ಇರಬೇಕಲ್ಲವೆ ? ಆದರೆ ಎಸ್‌ಎಂಪಿಪಿ ಸಿದ್ಧಾಂತದಲ್ಲಿ ಮೂಲಭೂತ ಕಣಗಳ ರಾಶಿಗೆ ಅವಕಾಶವಿಲ್ಲ. ರಾಶಿ ಇಲ್ಲದಿದ್ದರೆ ದ್ರವ್ಯಕಣಗಳು ಒಂದರೊಡನೊಂದು ಪ್ರಕ್ರಿಯಿಸಲಾಗದೇ ಚದುರಿಹೋಗುತ್ತಿದ್ದವು. ಆಗ ವಿಶ್ವದಲ್ಲಿ ಭೂಮಿ, ಸೂರ್ಯ, ಚಂದ್ರ, ನಕ್ಷತ್ರಗಳು, ಜೀವಿಗಳು ಯಾವುದೂ ಇರುತ್ತಿರಲಿಲ್ಲ. ಹಾಗಾಗಿ ಎಸ್‌ಎಂಪಿಪಿ ಸಿದ್ಧಾಂತದಲ್ಲಿ ಇದೊಂದು ಪ್ರಧಾನ ಸಮಸ್ಯೆಯಾಗಿತ್ತು.

ಈ ಬಿಕ್ಕಟ್ಟಿನಿಂದ ಹೊರಬರಲು ಕೆಲವು ವಿಜ್ಞಾನಿಗಳು (ಅವರಲ್ಲಿ ಸ್ಕಾಟ್ಲೆಂಡಿನ ಪೀಟರ್ ಹಿಗ್ಸ್ ಪ್ರಮುಖರು) ಮತ್ತೊಂದು ಮೂಲಭೂತ ಬಲಕ್ಷೇತ್ರ ಇದೆ ಎಂದು ಪ್ರತಿಪಾದಿಸಿದರು. ದ್ರವ್ಯದ ಮೂಲಭೂತ ಕಣಗಳು ಈ ಬಲಕ್ಷೇತ್ರದೊಂದಿಗೆ ಅಂತರಕ್ರಿಯಿಸಿದಾಗ ಅವುಗಳಿಗೆ ರಾಶಿ ಒದಗುತ್ತದೆ; ಅಂತರಕ್ರಿಯೆ ಜಾಸ್ತಿಯಾದಷ್ಟೂ ಕಣದ ರಾಶಿಯೂ ಜಾಸ್ತಿ ಎಂಬುದು ಅವರ ವಾದವಾಗಿತ್ತು. ಈ ಹೊಸ ಬಲಕ್ಷೇತ್ರಕ್ಕೆ 'ಹಿಗ್ಸ್ ಕ್ಷೇತ್ರ' ಎಂದು ಹೆಸರಾಯಿತು. ಈ ಕ್ಷೇತ್ರದ



*ಭೂಮಿಯಲ್ಲಿ೧೦೦ ಮೀಟರ್ ಕೆಳಗೆ ಸುರಂಗದಲ್ಲಿ ಅಡಗಿರುವ ೨೭ ಕಿ.ಮೀ. ಸುತ್ತಳತೆಯ ವೇಗೋತ್ಕರ್ಷಕ ಕೊಳವೆ*

ಕಣಗಳು ಭಾರತೀಯ ವಿಜ್ಞಾನಿ ಸತ್ಯೇಂದ್ರನಾಥ ಬೋಸ್ ನಿರೂಪಿಸಿದ್ದ ಕೆಲವು ನಿಯಮಾವಳಿಗಳನ್ನು ಅನುಸರಿಸುವುದರಿಂದ ಅವುಗಳಿಗೆ 'ಹಿಗ್ಸ್ ಬೋಸಾನ್' ಎಂದು ಹೆಸರಿಡಲಾಯಿತು.

ಇದುವರೆಗೆ ಇವೆಲ್ಲಾ ಕೇವಲ ಊಹಾಪೋಹಗಳು, ತರ್ಕಗಳಾಗಿದ್ದವು. ಸಿದ್ಧಾಂತಕ್ಕೆ ಮಾನ್ಯತೆ ದೊರೆಯಬೇಕಾದರೆ ಅದರಲ್ಲಿ ಉಲ್ಲೇಖಿಸಿರುವ ಮೂಲಭೂತ ದ್ರವ್ಯ ಹಾಗೂ ಕ್ಷೇತ್ರಕಣಗಳಿಗೆ ಪ್ರಾಯೋಗಿಕ ಪುರಾವೆಗಳು ದೊರಕಬೇಕು. ೧೯೬೦ರ ದಶಕದ ನಂತರ ಇಲ್ಲಿಯವರೆಗೆ ನಡೆದ ಸಂಶೋಧನೆಗಳಲ್ಲಿ ಎಸ್‌ಎಂಪಿಯಲ್ಲಿ ಉಲ್ಲೇಖಿಸಿರುವ ದ್ರವ್ಯ ಮತ್ತು ಶಕ್ತಿ ಕಣಗಳಲ್ಲಿ ಹಿಗ್ಸ್ ಬೋಸಾನ್ ಒಂದನ್ನು ಹೊರತುಪಡಿಸಿ ಮಿಕ್ಕ ಎಲ್ಲವುಗಳನ್ನೂ ಪತ್ತೆಹಚ್ಚಿ ಅವುಗಳ ಗುಣ, ಅಂತರಕ್ರಿಯೆಗಳು ಇತ್ಯಾದಿಗಳನ್ನು ದಾಖಿಸಲಾಗಿದೆ. ಉದಾಹರಣೆಗೆ, ದ್ರವ್ಯ ಕಣಗಳಾದ ಪ್ರೋಟಾನ್‌ಗಳನ್ನು ಕಣವೇಗೋತ್ಕರ್ಷಕದಲ್ಲಿ ಒಂದಕ್ಕೊಂದು ಡಿಕ್ಕಿ ಹೊಡೆಸಿದಾಗ ಉಂಟಾಗುವ ಪ್ರಕ್ರಿಯೆಗಳಲ್ಲಿ ಕೆಲವು ಮೂಲಭೂತ ಕಣಗಳ ಕುರುಹುಗಳು ತೋರಿ ಬರುತ್ತಿದ್ದವು. ಆದರೆ, ಯಾವ ಪ್ರಯೋಗದಲ್ಲಿಯೂ ಹಿಗ್ಸ್ ಬೋಸಾನ್ ಬಗ್ಗೆ ಯಾವ ಕುರುಹೂ ದೊರಕಿರಲಿಲ್ಲ, ಅದಕ್ಕೆ ಕಾರಣ ಹಿಗ್ಸ್ ಬೋಸಾನ್ ಕಣದ ರಾಶಿ ಎಷ್ಟು ಎಂಬುದರ ಬಗ್ಗೆ ಸ್ಪಷ್ಟವಾದ ಮಾಹಿತಿ ಇರಲಿಲ್ಲ. ಹಾಗಾಗಿ ಅನೇಕ ವಿಜ್ಞಾನಿಗಳಿಗೆ ಹಿಗ್ಸ್ ಬೋಸಾನ್ ಅಸ್ತಿತ್ವದ ಬಗ್ಗೆಯೇ ಅನುಮಾನ ಉಂಟಾಗಿತ್ತು. ಶ್ರೇಷ್ಠ ಭೌತವಿಜ್ಞಾನಿ ಸ್ಟೀಫನ್ ಹಾಕಿಂಗ್ ಹಿಗ್ಸ್ ಬೋಸಾನ್ ಎಂಬುದು ಎಂದಿಗೂ ನಮಗೆ ಗೋಚರಿಸದು; ಯಾರಾದರೂ ಅದನ್ನು ಪತ್ತೆ ಮಾಡಿದರೆ ಅವರಿಗೆ ೧೦೦ ಡಾಲರ್ ಬಹುಮಾನ ಕೊಡುವೆನೆಂದು ಪಣ ತೊಟ್ಟಿದ್ದರು ! (ಜುಲೈ ೪ ಘೋಷಣೆಯ ನಂತರ ಅವರು ಪಣ ಸೋತರು).

**ಲಾರ್ಜ್ ಹೆಡ್ರಾನ್ ಕೊಲೈಡರ್ ಎಂಬ ದೈತ್ಯ ಕಣವೇಗೋತ್ಕರ್ಷಕ :** ಆ ಹಿಂದಿನ ಪ್ರಯೋಗಗಳಲ್ಲಿ ಅದರ ಕುರುಹು ದೊರಕದೇ ಇದ್ದುದರಿಂದ ಅದರ ರಾಶಿ ಬೇರೆ ಕಣಗಳ ರಾಶಿಗಿಂತಲೂ ಬಹುಪಟ್ಟು ಅಧಿಕವಾಗಿರಬೇಕೆಂಬ ಶಂಕೆ ಕೆಲವರಲ್ಲಿ ಇತ್ತು. ಹಾಗಿದ್ದರೆ, ಅಷ್ಟು ರಾಶಿಯ ಕಣ ಸೃಷ್ಟಿಸಲು ಇನ್ನೂ ಹೆಚ್ಚು ಪ್ರಬಲ ಕಣವೇಗೋತ್ಕರ್ಷಕ ಬೇಕಾಗುತ್ತದೆ. ಐರೋಪ್ಯ ಪರಮಾಣು ಸಂಶೋಧನಾ ಕೇಂದ್ರವು ಅಂತಹ ಕಣವೇಗೋತ್ಕರ್ಷಕದ ನಿರ್ಮಾಣಕ್ಕೆ ೧೯೮೦ರ ದಶಕದಲ್ಲೇ ಆರಂಭಿಸಿ ೨೦೧೦ರ ವೇಳೆಗೆ ಕ್ರಿಯಾಶೀಲಗೊಳಿಸಿದೆ. ಅದೇ ದೈತ್ಯ ಕಣವೇಗೋತ್ಕರ್ಷಕ.

ಹಿಗ್ಸ್ ಬೋಸಾನ್‌ಗಳನ್ನು ಪ್ರಯೋಗಶಾಲೆಯಲ್ಲಿ ಸೃಷ್ಟಿಸುವುದು ಹೇಗೆ ? ಐನ್‌ಸ್ಟೈನ್ ಅವರ ಖ್ಯಾತ ಸಮೀಕರಣ $E=mC^2$ ಗೊತ್ತಲ್ಲವೆ ? (ಇದರಲ್ಲಿ E ಶಕ್ತಿ, m ದ್ರವ್ಯರಾಶಿ, C ಬೆಳಕಿನ ವೇಗ). ಶಕ್ತಿ ಮತ್ತು ದ್ರವ್ಯ ಇವುಗಳನ್ನು ಒಂದರಿಂದ ಒಂದಕ್ಕೆ ಪರಿವರ್ತಿಸಬಹುದು ಎಂದು ಅದು ಪ್ರತಿಪಾದಿಸುತ್ತದೆ. ಬೆಳಕಿನ ವೇಗಕ್ಕೆ ಸರಿಸಾಟಿಯಾದ ವೇಗದಲ್ಲಿ ಚಲಿಸುವ ಎರಡು ಪ್ರೋಟಾನ್‌ಗಳು ಒಂದಕ್ಕೊಂದಕ್ಕೆ ಡಿಕ್ಕಿ ಹೊಡೆದರೆ, ಅವುಗಳಲ್ಲಿ ಅಡಕವಾಗಿರುವ ದ್ರವ್ಯ ಹಾಗೂ ಶಕ್ತಿಯ ಮೂಲಭೂತ ಕಣಗಳು ಬಿಡುಗಡೆಯಾಗಿ, ಅಂತರಕ್ರಿಯಿಸಿ ಇನ್ನೂ ಅನೇಕ ವಿಧವಾದ ಶಕ್ತಿ ಹಾಗೂ ದ್ರವ್ಯಕಣಗಳು ಉತ್ಪತ್ತಿಯಾಗುತ್ತವೆ. ಅವುಗಳ ನಡುವೆ ಹಿಗ್ಸ್ ಬೋಸಾನ್ ಕೂಡ ಇರಬಹುದು. ಆದರೆ ಅಷ್ಟರಿಂದಲೇ ಹಿಗ್ಸ್ ಬೋಸಾನ್ ಸುಳಿವು ದೊರೆಯಲಾರದು. ಏಕೆಂದರೆ, ಎಸ್‌ಎಂಪಿ ಸಿದ್ಧಾಂತದ ಪ್ರಕಾರ ಹಿಗ್ಸ್ ಬೋಸಾನ್ ಕಣ ಅತ್ಯಂತ ಅಸ್ಥಿರ. ಅದರ ಜೀವಾವಧಿ ಕೇವಲ ೦.೦೦೦೦೦೦೦೦೦೦೦೦೧ ಸೆಕೆಂಡ್‌ಗಳು ! ಹಾಗಾಗಿ ಅವುಗಳನ್ನು ನೇರವಾಗಿ ಅಧ್ಯಯನ ಮಾಡಲು ಸಾಧ್ಯವಿಲ್ಲ. ಅವು ಸೃಷ್ಟಿಯಾದೊಡನೆಯೇ ಹಲವಾರು ಹಂತಗಳಲ್ಲಿ ಅನೇಕ ವಿಧವಾದ ದ್ರವ್ಯ ಹಾಗೂ ಶಕ್ತಿ ಉಪಕಣಗಳಾಗಿ ಪರಿವರ್ತನೆಯಾಗುತ್ತವೆ. ಈ ರೀತಿಯ ಉಪಕಣಗಳ ಜಾಡನ್ನು ಹಿಡಿದು ಹಿಗ್ಸ್ ಬೋಸಾನ್ ಕಣದ ಅಸ್ತಿತ್ವವನ್ನು ಪರೋಕ್ಷವಾಗಿ ಮಾತ್ರ ನಿರ್ಧರಿಸಲು ಸಾಧ್ಯ - ಬಾಂಬ್ ಸ್ಫೋಟವಾದ ಸ್ಥಳದಲ್ಲಿ ದೊರಕುವ ಭಗ್ನಾವಶೇಷಗಳನ್ನು ವಿಶ್ಲೇಷಿಸಿ ಬಾಂಬಿನ ಬಗ್ಗೆ ಮಾಹಿತಿ ಸಂಗ್ರಹಿಸುವಂತೆ.

ಈ ಪ್ರಯೋಗ ನಡೆಸಲು ಹತ್ತು ಬಿಲಿಯನ್ ಡಾಲರ್ ಖರ್ಚಿನಲ್ಲಿ ದೈತ್ಯ ಕಣವೇಗೋತ್ಕರ್ಷಕ ೨೦೧೦ರ ವೇಳೆಗೆ ಸಿದ್ಧವಾಯಿತು. ಅದೆಷ್ಟು ಬೃಹತ್ ಸಾಧನವೆಂದರೆ, ಅದರ ವೇಗೋತ್ಕರ್ಷಕ ಕೊಳವೆ ೨೭ ಕಿಲೋಮೀಟರ್ ಸುತ್ತಳತೆಯದಾಗಿದ್ದು, ಫ್ರಾನ್ಸ್ ಮತ್ತು ಸ್ವಿಟ್ಜರ್‌ಲೆಂಡ್ ದೇಶಗಳ ನಡುವೆ, ಭೂಮಿಯ ಒಳಗೆ ೧೦೦ ಮೀಟರ್ ಆಳದಲ್ಲಿ ಹರಡಿಕೊಂಡಿದೆ. ಇದರಲ್ಲಿ ಪ್ರೋಟಾನ್‌ಗಳ ಎರಡು ಗುಂಪು ಎರಡು ವಿರುದ್ಧ ದಿಕ್ಕಿನಲ್ಲಿ ಸುತ್ತುತ್ತಾ ಬೆಳಕಿನ ವೇಗದ ೯೯.೯೯೯ರಷ್ಟು ತಲಪಿದಾಗ ನಾಲ್ಕು ನಿರ್ಧಾರಿತ ಸ್ಥಳಗಳಲ್ಲಿ ಒಂದಕ್ಕೊಂದು ಡಿಕ್ಕಿ ಹೊಡೆದು, ಒಡೆದು ವಿವಿಧ ರೀತಿಯ ಮೂಲಭೂತ ಕಣಗಳೂ ಹಾಗೂ ಅವುಗಳ ಕ್ಷಯದಿಂದ ಉತ್ಪತ್ತಿಯಾಗುವ ಉಪಕಣಗಳ ಮಹಾಪೂರವೇ ಹರಿಯುತ್ತದೆ. ಈ ನಾಲ್ಕೂ ಸ್ಥಳಗಳಲ್ಲಿರುವ ದೈತ್ಯಾಕಾರದ ಉಪಕರಣಗಳು ಕಣ-ಉಪಕಣಗಳ ಮಹಾಪೂರವನ್ನು ಹಿಡಿದು ವಿಶ್ಲೇಷಿಸಿ ಅವುಗಳನ್ನು ಉತ್ಪತ್ತಿ ಮಾಡಿದ ಮೂಲಭೂತ ಕಣಗಳನ್ನು ಗುರುತಿಸುತ್ತವೆ.

ಆದರೆ ಇಲ್ಲಿ ಮತ್ತೊಂದು ಸಮಸ್ಯೆ ತೋರಿ ಬರುತ್ತದೆ. ಸಿದ್ಧಾಂತದ ಪ್ರಕಾರ ಈ ರೀತಿಯ ಡಿಕ್ಕಿಯಲ್ಲಿ ಹಿಗ್ಸ್ ಬೋಸಾನ್ ಗಿಂತಲೂ ಇತರ ಕಣಗಳ ಉತ್ಪಾದನೆಯ ಸಾಧ್ಯತೆ ವಿಪರೀತವಾಗಿ ಇರುತ್ತದೆ. ಅಂದರೆ, ಒಂದು ಬಿಲಿಯನ್ ಡಿಕ್ಕಿಗಳಲ್ಲಿ ಒಂದು ಡಿಕ್ಕಿಯಲ್ಲಿ ಮಾತ್ರ ಹಿಗ್ಸ್ ಬೋಸಾನ್ ಸೃಷ್ಟಿಯಾಗುವ ಸಾಧ್ಯತೆ ಇರುತ್ತದೆ ಎಂದು ವಿಜ್ಞಾನಿಗಳು ಲೆಕ್ಕ ಹಾಕಿದ್ದಾರೆ. ಹಾಗಾಗಿ ಸಾವಿರಾರು ಬಿಲಿಯನ್ ಡಿಕ್ಕಿಗಳ ಪರಿಣಾಮಗಳನ್ನು ವಿಶ್ಲೇಷಿಸಬೇಕಾಗುತ್ತದೆ. ಕಳೆದ ವರ್ಷ ನವೆಂಬರ್ ವೇಳೆಗೆ ವಿಜ್ಞಾನಿಗಳು ೪೦೦ ಟ್ರಿಲಿಯನ್ ಪ್ರೋಟಾನ್-ಪ್ರೋಟಾನ್ ಡಿಕ್ಕಿಗಳನ್ನು ವಿಶ್ಲೇಷಿಸಿ ಹಿಗ್ಸ್ ಬೋಸಾನ್ ಕ್ಷಯಿಸುವ ಕೆಲವು ವಿಶಿಷ್ಟ ಹಂತಗಳನ್ನು ಗುರುತಿಸಿದರು. ಈ ವರ್ಷ ಏಪ್ರಿಲ್‌ನಿಂದ ಜೂನ್ ತಿಂಗಳ ಅವಧಿಯಲ್ಲಿ ಮತ್ತೆ ೫೦೦ ಟ್ರಿಲಿಯನ್ ಡಿಕ್ಕಿಗಳನ್ನು ವಿಶ್ಲೇಷಿಸಿ ಹಿಗ್ಸ್ ಬೋಸಾನ್ ಕಣದ ಅಸ್ತಿತ್ವಕ್ಕೆ ಮತ್ತಷ್ಟು ನಿರ್ದಿಷ್ಟವಾದ ಪುರಾವೆಗಳನ್ನು ದಾಖಲಿಸಿದ್ದಾರೆ. ಎರಡು ವಿಧವಾದ ಪ್ರಯೋಗಗಳಿಂದ ಒಂದೇ ರೀತಿಯ ಮಾಹಿತಿ ದೊರಕಿರುವುದರಿಂದ ನಿರ್ಧಾರ ಮತ್ತಷ್ಟು ಖಚಿತವಾಗಿದ್ದು ಎಸ್‌ಎಂಪಿ ಸಿದ್ಧಾಂತಕ್ಕೆ ಸುಭದ್ರ ಅಡಿಪಾಯ ದೊರೆತಂತಾಗಿದೆ. ವಿಶ್ವದ ಉಗಮದ ಬಗ್ಗೆ ಅರಿಯಲು ಮಾನವನ ಪ್ರಯತ್ನದಲ್ಲಿ ಇದೊಂದು ಇತಿಹಾಸಿಕ ಘಟಕ ಎಂದು ವಿಜ್ಞಾನಿಗಳ ಅಭಿಪ್ರಾಯ. ಅದರಿಂದಾಗಿಯೇ ಇಷ್ಟೆಲ್ಲ ಸಂಭ್ರಮ. ಈ ಎಲ್ಲ ಪ್ರಯತ್ನಗಳಲ್ಲಿ ವಿಶ್ವದಾದ್ಯಂತ ೩,೦೦೦ಕ್ಕೂ ಅಧಿಕವಾಗಿ ವಿಜ್ಞಾನಿಗಳು ಕೈಜೋಡಿಸಿದ್ದಾರೆ. ಅದರಲ್ಲಿ ಅನೇಕ ಭಾರತೀಯ ವಿಜ್ಞಾನಿಗಳೂ ಪಾಲುಗೊಂಡಿದ್ದಾರೆ. ಅಲ್ಲದೆ ಇದರಲ್ಲಿ ಬಳಸಿರುವ ಅನೇಕ ಬೃಹತ್ ಉಪಕರಣಗಳ ವಿನ್ಯಾಸ, ರಚನೆ ಕಾರ್ಯಗಳಲ್ಲಿಯೂ ಭಾರತೀಯ ವಿಜ್ಞಾನ ಸಂಸ್ಥೆಗಳು ಭಾಗವಹಿಸಿವೆ ಎಂಬುದು ಹೆಮ್ಮೆಯ ವಿಷಯ.



*ಕಣ ವೇಗೋತ್ಕರ್ಷಕದಲ್ಲಿ ಪ್ರೋಟಾನ್-ಪ್ರೋಟಾನ್‌ಗಳು ಡಿಕ್ಕಿ ಹೊಡೆದಾಗ ಉತ್ಪತ್ತಿಯಾಗುವ ಉಪಕಣಗಳ ಮಹಾಪೂರದಲ್ಲಿ ತೋರಿಬಂದ ಹಿಗ್ಸ್ ಬೋಸಾನ್‌ನ ಒಂದು ರೀತಿಯ ಕುರುಹು (ಎರಡು ಕೆಂಪು ರೇಖೆಗಳು)*

ವಿಜ್ಞಾನಿಗಳ ಪ್ರಕಾರ ಈ ಬೆಳವಣಿಗೆಗಳೆಲ್ಲಾ ಕೇವಲ ಆರಂಭ ಮಾತ್ರ. ಬರುವ ವರ್ಷಗಳಲ್ಲಿ ಪ್ರೋಟಾನ್ ವೇಗವನ್ನು ಮತ್ತಷ್ಟು ವರ್ಧಿಸಿ ಹಿಗ್ಸ್ ಬೋಸಾನ್ ಬಗ್ಗೆ ಮತ್ತಷ್ಟು ನಿಖರ ಮಾಹಿತಿ ದೊರಕಿಸಿಕೊಳ್ಳುವುದಲ್ಲದೆ ಆಗ ಉತ್ಪತ್ತಿಯಾಗುವ ಭಗ್ನಾವಶೇಷಗಳನ್ನು ವಿಶ್ಲೇಷಿಸಿ ವಿಶ್ವದ ಉಗಮದ ಬಗ್ಗೆ ಇರುವ ಇನ್ನೂ ಅನೇಕಾನೇಕ ಪ್ರಶ್ನೆಗಳಿಗೆ- ಉದಾಹರಣೆಗೆ, ಪ್ರತಿದ್ರವ್ಯ, ಕಪ್ಪು ದ್ರವ್ಯ ಹಾಗೂ ಕಪ್ಪು ಶಕ್ತಿ - ಉತ್ತರ ಹುಡುಕುವ ಪ್ರಯತ್ನ ನಡೆಯುತ್ತದೆ.

**ಡಾ॥ ಎಮ್. ಎಸ್. ಎಸ್. ಮೂರ್ತಿ**
ಬಿ-೧೦೪, ಟೆರೇಸ್ ಗಾರ್ಡನ್ ಅಪಾರ್ಟ್‌ಮೆಂಟ್ಸ್, ೨ನೇ ಮುಖ್ಯರಸ್ತೆ
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

# ಮಾರ್ಕ್ಸ್ ಕನಸಿನ ಲೋಕದ ವಿಹಾರಿಯೆ?



೧೯೪೩ರಲ್ಲಿ ಜನಿಸಿದ ಟೆರಿ ಈಗಲ್‌ಟನ್ ಮೂಲತಃ ಐರ್ಲೆಂಡಿನ ಒಂದು ಕುಟುಂಬದವನು. ಆದರೆ ಹುಟ್ಟಿದ್ದು, ವಿದ್ಯಾಭ್ಯಾಸ ಪಡೆದಿದ್ದು ಮತ್ತು ಕೆಲಸ ಮಾಡಿದ್ದು ಇಂಗ್ಲೆಂಡಿನಲ್ಲಿ. ಕೇಂಬ್ರಿಜ್, ಆಕ್ಸ್‌ಫರ್ಡ್, ಮ್ಯಾಂಚೆಸ್ಟರ್ ಮತ್ತು ಲೆಸ್ಟರ್ ವಿಶ್ವವಿದ್ಯಾನಿಲಯಗಳೊಡನೆ ಅವನದು ಐವತ್ತಕ್ಕೂ ಹೆಚ್ಚು ವರ್ಷಗಳ ಸಂಬಂಧ. ವ್ಯಾಸಂಗ ಕೇಂಬ್ರಿಜ್‌ನಲ್ಲಿ, ಆದರೆ ಪ್ರಾಧ್ಯಾಪಕನಾಗಿದ್ದುದು ಲೆಸ್ಟರ್‌ನಲ್ಲೇ ಹೆಚ್ಚು. ಬೇರೆ ಎರಡು ವಿಶ್ವವಿದ್ಯಾನಿಲಯಗಳಲ್ಲೂ ಬೋಧನೆ ಮತ್ತು ಸಂಶೋಧನೆ ನಡೆಸಿದ್ದಾನೆ. ಸಾಹಿತ್ಯ, ಇತಿಹಾಸ ಮತ್ತು ತತ್ತ್ವಶಾಸ್ತ್ರ ಅವನ ಆಸಕ್ತಿಯ ಕ್ಷೇತ್ರಗಳು. ಸಾಹಿತ್ಯ ಮೀಮಾಂಸೆ ಮತ್ತು ವಿಮರ್ಶೆಯಲ್ಲಿ ಆತನ ಕೃಷಿ ಅತ್ಯಂತ ಮೌಲಿಕವಾದ್ದು. ಅದಕ್ಕೆ ವಿಶೇಷ ಮಾನ್ಯತೆ ಲಭ್ಯವಾಗಿದೆ. ಮಾರ್ಕ್ಸ್‌ವಾದಿ ಸಿದ್ಧಾಂತದ ಬಗೆಗಿನ ಅವನ ತಿಳಿವು ಕೇವಲ ಅಧ್ಯಯನದಿಂದ ಬಂದಿದ್ದಲ್ಲ, ಅವನೊಬ್ಬ ಖ್ಯಾತ ಸಂಘಟಕ ಮತ್ತು ಹೋರಾಟಗಾರ ಕೂಡ. ಅಮೆರಿಕಾದಲ್ಲಿ ಇರುವ ಯೇಲ್ ವಿಶ್ವವಿದ್ಯಾನಿಲಯ ೨೦೧೧ರಲ್ಲಿ ''ಮಾರ್ಕ್ಸ್ ಹೇಳಿದ್ದು ಏಕೆ ಸರಿ ?'' ಎಂಬ ಅವನ ೨೯೦ ಪುಟಗಳ ಪುಸ್ತಕವನ್ನು ಪ್ರಕಟಿಸಿತು. ಮಾರ್ಕ್ಸ್‌ವಾದವನ್ನು ಖಂಡಿಸುವವರು ಸಾಮಾನ್ಯವಾಗಿ ಎತ್ತುತ್ತಲೇ ಬಂದಿರುವ ಆಕ್ಷೇಪಗಳನ್ನು ಪರೀಕ್ಷಿಸಿ ಸತ್ವಯುತವಾದ ವಿಮರ್ಶೆ ಮಾಡುವುದು ಅವನ ಉದ್ದೇಶ. ಈ ಪುಸ್ತಕವನ್ನು ಅನುಸರಿಸಿ ಡಾ॥ ಜಿ. ರಾಮಕೃಷ್ಣ ಅವರು ಸಂಗ್ರಹ ರೂಪದಲ್ಲಿ ಈಗಲ್‌ಟನ್‌ನ ಪ್ರತಿಪಾದನೆಯನ್ನು ಪರಿಚಯಿಸಿದ್ದಾರೆ. ಅದನ್ನು 'ಹೊಸತು' ಪ್ರಕಟಿಸಲು ಹರ್ಷಿಸುತ್ತದೆ. ಇದು ನಾಲ್ಕನೆಯ ಕಂತು.



''ಓಹೋ, ಏನು ಸ್ವಾಮಿ, ನಿಮ್ಮ ಮಾರ್ಕ್ಸ್‌ವಾದದ ಕಲ್ಪನಾಲೋಕದಲ್ಲಿ ರಸ್ತೆ ಅಪಘಾತಗಳು ಇರುತ್ತವೆಯೆ ?'' ಹೀಗೆ ಛೇಡಿಸುವವರಿದ್ದಾರೆ, ಮಾರ್ಕ್ಸ್‌ವಾದಿಗಳಿಗೆ ಅದು ಅಭ್ಯಾಸವಾಗಿಹೋಗಿದೆ. ಹಾಗೆ ಕೇಳುವವರ ಅಜ್ಞಾನದ ಬಗ್ಗೆ ಸಹನೆ ಇರಬೇಕಲ್ಲ! ಕನಸಿನ ಲೋಕವು ಪರಿಪೂರ್ಣ ಸಮಾಜ ಎನ್ನುವುದಾದರೆ ''ಮಾರ್ಕ್ಸ್‌ವಾದಿ ಕನಸಿನ ಲೋಕ'' ಎಂಬುದು ಪರಸ್ಪರ ವಿರೋಧಿ ಅಂಶಗಳ ಮಾತಾಗುತ್ತದೆ. ಏಕೆಂದರೆ ಮಾರ್ಕ್ಸ್‌ವಾದವು ಕಲ್ಪನಾಲೋಕದಲ್ಲಿ ವಿಹರಿಸುವ ಜಾಯಮಾನ ಹೊಂದಿಲ್ಲ. ಮಾರ್ಕ್ಸ್‌ವಾದದಡಿ ಬೇರೆ ತೆರನ ಕಲ್ಪನಾಲೋಕಗಳ ಪ್ರಸ್ತಾಪವಿದೆ. ಉದಾಹರಣೆಗೆ, ವಿಲಿಯಂ ಮಾರಿಸ್ ರಾಜಕೀಯ ಬದಲಾವಣೆಗಳ ಪ್ರಕ್ರಿಯೆಯನ್ನು ಸೊಗಸಾಗಿ ನಿರೂಪಿಸುವಾಗ ''ಯುಟೋಪಿಯ'' ಎಂಬ ಶಬ್ದ ಬಳಸಿದ್ದಾನೆ. ಆದರೆ ಆ ಶಬ್ದದ ಸಾಮಾನ್ಯಾರ್ಥ ಬೇರೆ. ನೋವು, ಸಾವು, ಸೋಲು, ಸಂಘರ್ಷ, ದುರಂತ, ಯಾವುದೂ ಇಲ್ಲದ್ದು ಆ ಕಲ್ಪನಾ ಲೋಕ. ಅಂಥದ್ದರಲ್ಲಿ ಮಾರ್ಕ್ಸ್‌ಗೆ ಎಳ್ಳಷ್ಟೂ ಶ್ರದ್ಧೆಯಿಲ್ಲ. ಹಾಗೆ ನೋಡಿದರೆ, ಅವನು ಭವಿಷ್ಯದ ಬಗ್ಗೆ ಹೇಳುವುದು ವಿರಳ. ಸಮಾಜವಾದಿ ಮತ್ತು ಸಾಮ್ಯವಾದಿ ಸಮಾಜಗಳು ಹೇಗಿರುತ್ತವೆಂಬುದನ್ನು ವಿವರವಾಗಿ ಹೇಳಲೇ ಇಲ್ಲ ಅವನು. ಇದೆಂತಹ ಅಸ್ಪಷ್ಟತೆಯೆಂದು ಅವನ ಟೀಕಾಕಾರರು ಮೂದಲಿಸಬಹುದು! ಹಾಗೆ ಮಾಡಿ ಅವನನ್ನು ಕನಸಿನ ಲೋಕದ ವಿಹಾರಿಯೆಂದು ತೆಗಳಲು ಬಾರದಲ್ಲವೆ ? ಭವಿಷ್ಯದ ಬಗ್ಗೆ ಭಾರಿ ಬೊಗಳೆ ಬಿಡುವುದು ಬಂಡವಾಳಶಾಹಿಯೇ ವಿನಾ ಮಾರ್ಕ್ಸ್‌ವಾದವಲ್ಲ. ಅವನು **ದಿ ಜರ್ಮನ್ ಐಡಿಯಾಲಜಿ** ಎಂಬ ಗ್ರಂಥದಲ್ಲಿ ಹೇಳುವುದಿಷ್ಟೆ: ''ವರ್ತಮಾನದ ವಿದ್ಯಮಾನಗಳನ್ನು ನಿಜವಾಗಿಯೂ ತೊಡೆದುಹಾಕುವ ಚಳುವಳಿ ಸಾಮ್ಯವಾದ,'' ಎಂದು. ಅಷ್ಟಕ್ಕೂ ಮಾರ್ಕ್ಸ್ ಯಹೂದಿಯಲ್ಲವೆ ? ಸಂಪ್ರದಾಯದ ಪ್ರಕಾರ ಯಹೂದಿಗಳು ಭವಿಷ್ಯವನ್ನು ನುಡಿಯಬಾರದೆಂಬ ನಿಷೇಧವಿದೆ. ಅವನು ಧರ್ಮನಿರಪೇಕ್ಷ ಯಹೂದಿ, ಅಷ್ಟೆ.

ಯೋಚನೆ ಮಾಡೋಣ : ಭವಿಷ್ಯವು ಇಂದು ಇಲ್ಲ, ನಿನ್ನೆ ಇರಲಿಲ್ಲ, ಮತ್ತೆ ಅದರ ಚಿತ್ರ ನೀಡುವುದೆಂತು ? ಅದು ಸುಳ್ಳಾಗಿಬಿಡುವ ಸಾಧ್ಯತೆಯೂ ಉಂಟು. ಭವಿಷ್ಯ ನುಡಿದರೆ ನಡೆಯುವುದೆಲ್ಲಾ ಪೂರ್ವನಿರ್ಧಾರಿತ ಎಂದಾಗಿಬಿಡುತ್ತದೆ. ಜ್ಯೋತಿಷ್ಯಕ್ಕೆ ಮಾಡಿಟ್ಟ ಲಕ್ಷಣ ಇದು. ಭವಿಷ್ಯವೊಂದು ಅನಿವಾರ್ಯವೆನ್ನುತ್ತಾನೆ ಮಾರ್ಕ್ಸ್. ಅಲ್ಲಿ ಎಲ್ಲ ಅಪೇಕ್ಷಣೀಯವೇ ಆಗಿರುತ್ತದೆಂದು ಹೇಳುವುದು ಹೇಗೆ ? ಸಾವು ಅನಿವಾರ್ಯ, ಆದರೆ ಕೆಲವರ ಪ್ರಕಾರ ಅದು ಅನಪೇಕ್ಷಣೀಯ. ಭವಿಷ್ಯವು ಪೂರ್ವನಿರ್ಧಾರಿತವೇ ಆಗಿದ್ದರೂ ಅದು ಈಗಿನದರ ಸುಧಾರಣೆಯೇ ಆಗಿರುತ್ತದೆಂಬ ಖಾತ್ರಿ ಏನೂ ಇಲ್ಲ.

ಮಾರ್ಕ್ಸ್‌ನ ಸಮಕಾಲೀನರಲ್ಲಿ ಭವಿಷ್ಯ ಸಮಾಜದ ಸ್ವರೂಪವನ್ನು ಕುರಿತು ಪ್ರತಿಪಾದನೆಗಳನ್ನು ಮಂಡಿಸುತ್ತಿದ್ದವರು ಹಲವರಿದ್ದರು. ಅವರೆಲ್ಲಾ ಎಡಪಂಥದ ಚಿಂತಕರೇನಲ್ಲ. ೧೮ನೆಯ ಶತಮಾನದ ನಂತರ ಯೂರೋಪಿನ ಬೆಳವಣಿಗೆಗಳನ್ನು ಕಂಡಿದ್ದ ಅವರಿಗೆ ಹೊಸದೊಂದು ಪ್ರಪಂಚದ ಕಲ್ಪನೆ ಮೂಡಿತ್ತು. ಅವರು ಕ್ರಾಂತಿಕಾರಿ ಭಾವನೆಯವರಲ್ಲ, ಆದರೆ ಅಭಿವೃದ್ಧಿಯ ಗುಂಗಿನಲ್ಲಿ ಎಲ್ಲವನ್ನೂ ಗೆಲ್ಲುತ್ತೇವೆಂಬ ವಿಶ್ವಾಸ ಬೆಳೆಸಿಕೊಂಡಿದ್ದರು. ನಿರಂಕುಶ ಪ್ರಭುತ್ವದ ಅಂತ್ಯ, ವಿಜ್ಞಾನವು ಮೌಢ್ಯವನ್ನು ತೊಲಗಿಸುತ್ತದೆಂಬ ಭರವಸೆ, ಯುದ್ಧ ಅನಗತ್ಯವಾಗುತ್ತದೆಂಬ ಹುಮ್ಮಸ್ಸು, ಇವೆಲ್ಲಾ ಇತಿಹಾಸವು ಸೊಗಸಾಗಿ ರೂಪುಗೊಳ್ಳುತ್ತಿದೆ ಎಂಬ ಭಾವನೆಯನ್ನು ಗಟ್ಟಿಗೊಳಿಸಿತ್ತು. ಅವರಿಗೆ ಮನುಕುಲವೆಂದರೆ ಯೂರೋಪು ಮಾತ್ರ ಎಂಬ ಭ್ರಮೆ ಆವರಿಸಿದ್ದಿರಬೇಕು. ಸಾಮರಸ್ಯ, ಸ್ವಾತಂತ್ರ್ಯ, ವಾಣಿಜ್ಯದ ಏಳಿಗೆ, ಎಲ್ಲಾ ಕೈಗೆ ಎಟುಕಿತೆಂಬ ಸಂತಸ ಅವರದು. ಪ್ರಗತಿ ಮತ್ತು ನಾಗರಿಕತೆ, ಇವು ಮಾರ್ಕ್ಸ್‌ಗೆ ಮೂಲಮಂತ್ರ; ಆದರೆ ಇತಿಹಾಸದಲ್ಲಿ ಮೃಗೀಯ ವರ್ತನೆ ಮುಗಿದುಹೋಗಿತ್ತೆಂಬ ಯೂರೋಪಿನ ಮಧ್ಯಮ ವರ್ಗದ ಭ್ರಾಂತಿ ಅವನನ್ನು ಆವರಿಸಿರಲಿಲ್ಲ. ಕಾಲ್ಪನಿಕ ಸಾಮ್ರಾಜ್ಯಗಳನ್ನು ಕಟ್ಟಿಕೊಂಡು ಅದರಲ್ಲೇ ಮುಳುಗೇಳುತ್ತಿದ್ದವರಲ್ಲಿ ಕೆಲವರನ್ನು ಮಾರ್ಕ್ಸ್ ಗುರುತಿಸಿದ, ಟೀಕಿಸಿದ; ಆದರೆ ಅವರ ಪ್ರಗತಿಪರತೆಯನ್ನು ಮೆಚ್ಚಿಕೊಂಡ ಕೂಡ. ಉದಾಹರಣೆಗೆ, ಫ್ಯೂರ್ಯೆ, ಸೆಂಟ್ ಸಿಮೋನ್, ರಾಬರ್ಟ್ ಓವೆನ್, ಇತ್ಯಾದಿ. 'ಸ್ತ್ರೀವಾದ' ಎಂಬ

ಪದವನ್ನು ಬಳಸಿದ ಫೂರ್ಯೆ ಸಮಾಜದ ಒಂದು ಘಟಕದಲ್ಲಿ ಸರಿಯಾಗಿ ೧೬೨೦ ಮಂದಿ ಇರಬೇಕೆಂಬ ಕನಸು ಇರಿಸಿಕೊಂಡಿದ್ದ! ಸಮುದ್ರವೆಲ್ಲಾ ನಿಂಬೆಹಣ್ಣಿನ ಪಾನಕವಾಗಿ ಬಿಡುತ್ತದೆಂಬ ಹುಂಬತನ ಸಹ ಅವನದು. ಇವರನ್ನು ಮಾರ್ಕ್ಸ್ ಛೇಡಿಸಲಿಲ್ಲ, ಬದಲಾಗಿ ಇಷ್ಟೇ ಹೇಳಿದ : ನಿಮ್ಮ ವಿರೋಧಿಗಳಿದ್ದಾರಲ್ಲ, ಅವರನ್ನು ಕೇವಲ ತರ್ಕದಿಂದ ಸೋಲಿಸಿ ನಿಮ್ಮತ್ತ ಸೆಳೆದುಕೊಳ್ಳಲು ಸಾಧ್ಯವಿಲ್ಲ, ಎಂದು. ಅವರೆಲ್ಲರ ಪ್ರಕಾರ ಸಮಾಜವು ವಿಚಾರಗಳ ಘರ್ಷಣೆಯಿಂದ ಮಾರ್ಪಾಟಾಗುವಂಥದು. ಮಾರ್ಕ್ಸ್ ಹೇಳಿದ, ಅಲ್ಲ, ಅದು ಕೇವಲ ಬೌದ್ಧಿಕ ಕಸರತ್ತಿನಿಂದ ಬದಲಾಗುವುದಿಲ್ಲ, ಏಕೆಂದರೆ ಅಲ್ಲಿ ಭೌತಿಕ ಹಿತಾಸಕ್ತಿಗಳಿವೆ, ಎಂದು. ಚರ್ಚೆ ಅಗತ್ಯ ಮತ್ತು ಸರಿ, ಆದರೆ ಮಾನವನ ವಿಚಾರಧಾರೆಗೆ ಅವರ ದಿನನಿತ್ಯದ ವ್ಯವಹಾರಗಳು ಸಹ ಒಂದು ಕಾರಣ. ಅದು ಚರ್ಚಾಕೂಟದಲ್ಲಿ ಮತ್ತು ತತ್ತ್ವಶಾಸ್ತ್ರ ಗ್ರಂಥಗಳಲ್ಲಿ ಪರಿಹಾರವಾಗುವುದಿಲ್ಲ. ಮಾನವ ಏನು ಹೇಳುತ್ತಾನೆ ಎಂಬುದಕ್ಕಿಂತ ಏನು ಮಾಡುತ್ತಾನೆ ಎಂಬುದು ಅವನ (ಳ) ನಂಬಿಕೆಗೆ ಆಧಾರವಾಗುತ್ತದೆ.

ಒಬ್ಬ ಭೌತವಾದಿಯಾಗಿ ಮಾರ್ಕ್ಸ್‌ಗೆ ಇತಿಹಾಸದ ಸತ್ಯವು ಆದ್ಯತೆಯ ಅಂಶ. ನಮ್ಮ ಆಶಯಗಳು ಪೂರೈಸದಿರುವುದಕ್ಕೆ ಅದರಲ್ಲಿ ಉತ್ತರಗಳಿವೆ. ಸದ್ಭಾವನೆಯನ್ನು ಮೂಲ ಸಾಮಗ್ರಿಯನ್ನಾಗಿ ಇಟ್ಟುಕೊಂಡು ಭವ್ಯ ಭವಿಷ್ಯವನ್ನು ನಿರೂಪಿಸಬಹುದು, ಆದರೆ ಅದು ಭಾವನೆಯ ಹಂತದಿಂದ ವಾಸ್ತವದ ಹಂತವನ್ನು ಮುಟ್ಟಲಾರದೆ ಹೋದೀತು. ನನ್ನ ಮನಸ್ಸಿನಲ್ಲಿ ಒಂದು ಸುಂದರ ಕಾವ್ಯವಿದೆ, ಆದರೆ ಅದನ್ನು ಬರೆದು ಪ್ರಕಟಿಸುವ ಸಾಧ್ಯತೆ ಇಲ್ಲ! ಆದ್ದರಿಂದ ಮಾರ್ಕ್ಸ್ ಹೇಳಿದ, ಸುಂದರ ಭವಿಷ್ಯದ ಕಲ್ಪನೆ ಸಾಲದು, ಎಂದು. 'ಎಲ್ಲರೂ ಸುಖವಾಗಿರಲಿ' ಎಂದು ಮೂರು ಸಾವಿರ ವರ್ಷದಿಂದ ನಾವು ಹೇಳುತ್ತಾ ಬಂದೆವು, ಆದರೆ ಅವರೆಲ್ಲಾ ಏಕೆ ಸುಖಿಗಳಾಗಲಿಲ್ಲ? ಅಂದಂದಿನ ಸಾಮಾಜಿಕ ವೈರುಧ್ಯಗಳನ್ನು ಬಗೆಹರಿಸಿಕೊಳ್ಳದೆ ಸುಂದರ ಭವಿಷ್ಯವನ್ನು ನಿರ್ಮಿಸಿಕೊಳ್ಳಲಾರೆವು. ಹಾಗೆ ಇಂದಿನ ವೈರುಧ್ಯಗಳನ್ನು ಎದುರಿಸಿ ವಿಜಯಿಗಳಾದರೆ ನಾಳೆ ಮಾರ್ಕ್ಸ್ ಬೇಕಾಗುವುದಿಲ್ಲವೇನೊ!

'ಫ್ರಾನ್ಸಿನಲ್ಲಿ ಅಂತರ್ಯುದ್ಧ' ಎಂಬ ಕೃತಿಯಲ್ಲಿ ಕ್ರಾಂತಿಕಾರಿ ದುಡಿಮೆಗಾರರ ಬಗ್ಗೆ ಮಾರ್ಕ್ಸ್ ಹೀಗೆಂದ : ''ಇವರ ಆದರ್ಶವೆಂದರೆ ಹೊಸ ಸಮಾಜದ ಅಂಶಗಳನ್ನು ಸಾಕಾರಗೊಳಿಸುವುದು. ಈಗಾಗಲೆ ಕುಸಿಯುತ್ತಿರುವ ಬಂಡವಾಳಶಾಹಿ ಸಮಾಜದ ಗರ್ಭದಲ್ಲೇ ಇದೆ ಅದು.'' ಉತ್ತಮ ಭವಿಷ್ಯ ಎಂದರೆ ಕೂತು 'ಹಾ, ಹಾಗಿದ್ದರೆ ಎಷ್ಟು ಸೊಗಸು' ಎಂದು ಕನವರಿಸುವುದಲ್ಲ, ನಾವೇನು ಆಶಿಸುತ್ತೇವೋ ಅದು ಇಂದಿನ ವಾಸ್ತವತೆಯಲ್ಲಿ ಮೂಡಲು ಶಕ್ಯವೋ ಎಂಬುದನ್ನೂ ತಿಳಿಯಬೇಕು. ಅದೇಲ್ಲೋ ಆಕಾಶದಿಂದ ಉದುರುವುದಿಲ್ಲ, ವರ್ತಮಾನವನ್ನು ಚೆನ್ನಾಗಿ ತಿಳಿದು, ವಿಶ್ಲೇಷಿಸಿ, ಅದರ ಗರ್ಭದಲ್ಲಿರುವ ನಾಳೆಯನ್ನು ಹೊರ ತೆಗೆಯಬೇಕು. ಹಾಗೆ ಮಾಡದೆ ಸುಮ್ಮನೆ ಕನವರಿಸುತ್ತಿದ್ದರೆ ಫ್ರಾಯ್ಡ್ ಹೇಳಿದ್ದು ನಿಜವಾಗುತ್ತದೆ : ''ಯಾವುದನ್ನು ಪಡೆಯಲು ಸಾಧ್ಯವಿಲ್ಲವೋ ಅದಕ್ಕೆ ಹಾತೊರೆಯುತ್ತಿದ್ದರೆ ರೋಗಪೀಡಿತರಾಗಿಬಿಡುತ್ತೇವೆ.'' ಸಾರಾಂಶ ಇದು : ನಾಳೆಗೆ ನಮ್ಮನ್ನೊಯ್ಯುವ ಶಕ್ತಿ ವರ್ತಮಾನದಲ್ಲಿದೆ. ಇಂದಿನ ಕ್ರಿಯೆಯು 'ಇಂದು' ಎನ್ನುವುದನ್ನು ಮೀರಿ ಮುಂದೆ ಹೋಗಲು ಒಂದು ಸಾಧನ. ಇಂದು ಮತ್ತು ನಾಳೆಗೆ ಕೊಂಡಿ ದುಡಿಯುವ ವರ್ಗ ಎಂದವನು ಮಾರ್ಕ್ಸ್. ವರ್ತಮಾನ ಮತ್ತು ಭವಿಷ್ಯಗಳೆರಡಕ್ಕೂ ಭೂತಕಾಲದಲ್ಲಿ ಸಂಪನ್ಮೂಲಗಳಿವೆ. ರಾಜಕೀಯ ಪರಂಪರೆಗಳು ಆ ಸಂಪನ್ಮೂಲ. ಅದನ್ನು ಜೀವಂತವಾಗಿರಿಸಬೇಕು.

ನಮ್ಮ ಸಂಪ್ರದಾಯವಾದಿಗಳನ್ನು ನೋಡಿ, ಅವರ ಕನಸಿನ ಲೋಕಗಳು ಭೂತ ಕಾಲದವು. ಅದೆಂದೋ ಹಿಂದೆ ಇದ್ದದ್ದು ಸುವರ್ಣ ಯುಗ, ರಾಮರಾಜ್ಯ, ಕೃತಯುಗ. ಇತಿಹಾಸದುದ್ದಕ್ಕೂ ನಮ್ಮ ಸಮಾಜದ ಪತನವಾಗುತ್ತಲೇ ಬಂದಿದೆ, ಅವರ ಪ್ರಕಾರ. ವ್ಯಾಸ-ವಾಲ್ಮೀಕಿಗಳು, ಕಾಲಿದಾಸ, ಪಂಪ ಎಲ್ಲಾ ಆಗಿಹೋದವರು. ಕೌಟಿಲ್ಯನಿಂದ ಹಿಡಿದು ಸಮುದ್ರಗುಪ್ತ, ಶ್ರೀಹರ್ಷ, ನೃಪತುಂಗ, ಎಲ್ಲಾ ಸುವರ್ಣ ಯುಗಗಳವರೇ. ಇಂದಿನ ಕೆಲವು ಅರ್ಥಶಾಸ್ತ್ರಜ್ಞರ ಪ್ರಕಾರ ಪಿ. ವಿ. ನರಸಿಂಹ ರಾವ್ ಸಹ ಸುವರ್ಣ ಯುಗದ ನಿರ್ಮಾತರೇ! ಭೂತವೆಂಬುದು ಇವರನ್ನು ಭೂತವಾಗಿ ಕಾಡುವುದಿಲ್ಲ, ಅದೊಂದು ಅಂಧಾರಾಧನೆಯ ವಸ್ತು. ಇವರಿಗಿಂತಲೂ ಭವಿಷ್ಯದಲ್ಲಿ ಸುವರ್ಣ ಯುಗ ಕಾಣುವವರು ಮೇಲು. ಸತ್ಯಸಂಗತಿ ಇಬ್ಬರಿಗೂ ದೊರಕಿಲ್ಲ. ಭವಿಷ್ಯವು ಹೇಗೆ ನಮಗೆ ಅಸ್ತಿತ್ವದಲ್ಲಿರದ ಅಂಶವೋ, ಭೂತವೂ ಅಷ್ಟೇ. ಇನ್ನು ಕೆಲವು ಅಸಾಧ್ಯ ಚಿಂತಕರಿದ್ದಾರೆ : ಅವರನ್ನು ನಂಬುವುದಾದರೆ ಇನ್ನು ಮುಂದೆ ಅಧಃಪತನ ಸಾಧ್ಯವಿಲ್ಲ, ಏಕೆಂದರೆ ಪ್ರಪಾತದಲ್ಲಿ ಎಷ್ಟು ಆಳಕ್ಕೆ ಬೀಳಲು ಸಾಧ್ಯವೋ ಅಷ್ಟಕ್ಕೆ ಮಾನವ ಸಮಾಜ ಈಗಾಗಲೆ ಬಿದ್ದುಹೋಗಿದೆ! ಮಾನವನ ಸಹಜ ಪ್ರವೃತ್ತಿ ಹತಾಶೆ ಮತ್ತು ಅದನ್ನು ಬದಲಿಸಲು ಬರುವುದಿಲ್ಲ ಎಂದು ಹಲುಬುವವರಿಗೆ ಇನ್ನೆಂತಹ ಭವಿಷ್ಯವನ್ನು ಬೊಟ್ಟುಮಾಡಿ ತೋರಿಸಿ ಹುರಿದುಂಬಿಸಲು ಸಾಧ್ಯ? ಯಾರೋ ದಾರಿಹೋಕ ಒಂದು ಹಳ್ಳಿಗೆ ದಾರಿ ಯಾವುದೆಂದು ಕೇಳಿದಾಗ ಉತ್ತರ ಬಂತಂತೆ : ''ನಾನೇನಾದರೂ ಅಲ್ಲಿಗೆ ಹೋಗಬೇಕಿದ್ದರೆ ಇಲ್ಲಿಂದ ಹೊರಡುತ್ತಿರಲಿಲ್ಲ, ಆ ಇನ್ನೊಂದು ಒಳ್ಳೆಯ ತಾಣವಿದೆಯಲ್ಲ, ಅಲ್ಲಿಂದ ಹೊರಟರೆ ನೇರವಾಗಿ ಬೇಗ ಅಲ್ಲಿಗೆ ತಲುಪಬಹುದು,'' ಎಂದು. ರಷ್ಯದಲ್ಲಿ ಬಾಲ್ಶೆವಿಕ್ ಕ್ರಾಂತಿ ಸಫಲಗೊಳಿಸಿದವರಿಗೆ ನಮ್ಮ ಘಾಟಿ ವಿಮರ್ಶಕರು ಹೇಳುವುದು ಅದನ್ನೇ : ''ನಾನಿಲ್ಲಿಂದ ಆರಂಭಿಸುತ್ತಿರಲಿಲ್ಲ'', ಎಂದು. ಇರುವ ಸಮಯ ಬಿಟ್ಟು ಬೇರೊಂದು ಶುದ್ಧ (ಅಥವಾ, ಶುಭ) ಸಮಯವನ್ನು ಎಲ್ಲಿಂದ ತರೋಣ? ಎಲ್ಲ ಭವಿಷ್ಯಗಳೂ ಆಯಾ ಸಮಯದ ಭವಿಷ್ಯಗಳೇ ತಾನೆ! ಇತಿಹಾಸದಲ್ಲಿ ನಮಗೇನು ಪರಿಕರಗಳು ಲಭ್ಯವಾಗಿವೆಯೋ ಅವನ್ನೆಲ್ಲಾ ಇಟ್ಟುಕೊಂಡೇ ನಾವು ನಾಳೆಗೆ ಹೋಗಬೇಕು : ಅಸ್ಪೃಶ್ಯತೆ, ವರ್ಣ ವಿಂಗಡಣೆ, ಜಡ್ಡು ಮತಾಂಧತೆ, ವಸಾಹತುಶಾಹಿ ದೌರ್ಜನ್ಯ, ಹತ್ತಾರು ಜನಾಂಗೀಯ ವಿಭಾಗಗಳು, ವಿದೇಶಿ ಬಂಡವಾಳದ ಹೂಡಿಕೆ, ಮನಮೋಹನ ಸಿಂಗ್ ಆರ್ಥಿಕ ನೀತಿ, ಇವೆಲ್ಲಾ ಇಂದಿನ ವಾಸ್ತವ. ಅವನ್ನು ಹೊತ್ತುಕೊಂಡೇ ಭವಿಷ್ಯದತ್ತ ಹೆಜ್ಜೆ ಹಾಕಬೇಕಾದ್ದು ಅನಿವಾರ್ಯ. ಅವೆಲ್ಲಾ ಇಲ್ಲದ ಪ್ರಶಸ್ತ ಕಾಲ ಬಂದಮೇಲೆ ಭವಿಷ್ಯದತ್ತ ಹೊರಡೋಣ ಎಂದರೆ ಇಲ್ಲೇ ನಿಂತಿರುತ್ತೇವೆ, ಅಷ್ಟೆ. ಏನು ಮಾಡಲಾದೀತು, ನಮಗೆ ದಕ್ಕಿರುವ ವರ್ತಮಾನ ಇಂಥದು, ಅದರಲ್ಲಿ ಶೋಷಣೆಯ ಮಹಾಪೂರವು ನಮ್ಮನ್ನು ಮುಳುಗಿಸಿದೆ. ಹೊಸ ಸಮಾಜವು ಇದರ ಗರ್ಭದಿಂದಲೇ ಬರಬೇಕು, ಅಷ್ಟೆ. ಇದರ ಛಾಯೆ ಅದರಲ್ಲೂ ಸ್ವಲ್ಪ ಉಳಿದಿದ್ದೀತು. ಆದರೆ ಕೆಲವು ಕ್ರಾಂತಿಕಾರಿಗಳಿಗೆ ಇಂದಿನ ಸನ್ನಿವೇಶದ ಯಾವುದೂ ಪಥ್ಯವಲ್ಲ, ಇವರು ಇನ್ನೊಂದು ರೀತಿಯ ಕಾಲ್ಪನಿಕ ಲೋಕ ಸೃಷ್ಟಿಸಿಕೊಂಡು ಕ್ರಾಂತಿಗಾಗಿ ಒಳ್ಳೆ ಮುಹೂರ್ತ ಕಾದು ಕುಳಿತಿರುತ್ತಾರೆ, ಇಲ್ಲ ಕಾಡಿಗೆ ಹೋಗಿ ಶಸ್ತ್ರಧಾರಿಗಳಾಗುತ್ತಾರೆ. ಇಂದಿನ ಸತ್ಯ ಅವರಿಗೆ ಅಪಥ್ಯ; ರಾಜಕೀಯ ಪಕ್ಷಗಳು, ಕಾರ್ಮಿಕ ಸಂಘಗಳು, ರೈತ ಚಳುವಳಿ, ಸಮಾಜ ಸುಧಾರಣೆ, ಪಾರ್ಲಿಮೆಂಟ್, ಯಾವುದೂ ಬೇಡ; ಅವು ಇರದಿದ್ದ ಘಟ್ಟದಿಂದ ಭವಿಷ್ಯಕ್ಕೆ ತೆರಳೋಣವೆಂದರೆ ಇಂದು ಮತ್ತು ನಾಳೆ ನಮ್ಮ ಸಮಾಜ ಅಲ್ಲೇ ಕುಳಿತಿರಬೇಕಾಗುತ್ತದಲ್ಲವೆ? ಮಗುವನ್ನು ನಿರಾಕರಿಸಿ ಯುವಕ ಚೇತನವನ್ನು ಎಲ್ಲಿ ಅರಸೋಣ? ಹಾಗಿದ್ದರೆ, ಸಹಜವಾಗಿ ಯುವಚೇತನ ತಾನೇ ಮೂಡುವುದು ಅನಿವಾರ್ಯವೆಂದು ತೆಪ್ಪಗಿರಬಹುದೆ? ಆಗದು, ಏಕೆಂದರೆ ಮಗುವಿಗೆ ಭವಿಷ್ಯ ತೆರೆದುಕೊಳ್ಳುವ ಮುನ್ನವೇ ಅದು ಗತಿಸಲೂಬಹುದು. ಇದರರ್ಥವೇನು? ಇಂದು ಏನಿದೆಯೋ ಅದರಿಂದ ಭೂತಕಾಲದ ಸ್ವರೂಪದ ಭವಿಷ್ಯ ಉದ್ಭವಿಸುವುದಿಲ್ಲ. ಮೊಟ್ಟೆಯಿಂದ ಕೋಳಿಮರಿ ಬಂದೇ ಬರುತ್ತದೆಂಬ ಭರವಸೆ ಕೈಗೂಡುವುದು ನಾನು ಇಂದೇ ಅದರಿಂದ ಆಮ್ಲೆಟ್ ಮಾಡಿಕೊಂಡು ತಿಂದುಹಾಕಿ ಬಿಡದಿದ್ದರೆ ಮಾತ್ರ ಸಾಧ್ಯ. ಪ್ರಕೃತಿಸಹಜವಾಗಿ ಬಂಡವಾಳಶಾಹಿಯಿಂದ ಸಮಾಜವಾದಿ ವ್ಯವಸ್ಥೆ ಬಂದೇ ತೀರಬೇಕೆಂಬುದು ಇಂಥದೇ ನಿಯಮಕ್ಕೆ ಬದ್ಧವಾಗಬೇಕು, ಅದಕ್ಕೆ ಗತ್ಯಂತರವಿಲ್ಲ. ''ಇಂದು'' ಎಂಬುದೇನಿದೆಯೋ ಅದರಿಂದ ಬಗೆಬಗೆಯ ಭವಿಷ್ಯ ಹೊರಬರಲು ಸಾಧ್ಯ. ಉದಾಹರಣೆಗೆ, ನಮ್ಮಲ್ಲಿರುವ ಅಸ್ಪೃಶ್ಯತೆ ನೀಗಬಹುದು, ಫ್ಯಾಸಿಸ್ಟ್ ದೌರ್ಜನ್ಯಗಳೂ ಹೊಮ್ಮಬಹುದು. ಇಂದೇನು ಮಾಡುತ್ತೇವೋ ಅದಕ್ಕೆ ತಕ್ಕಂತೆ ನಾಳೆ ಉದಯಿಸುತ್ತದೆ. ಬೇರೆಯವರ ತೀರ್ಮಾನಗಳು ಸ್ವಲ್ಪ ಭಿನ್ನವಾಗಿರಲು ಸಾಧ್ಯ. ಅವರ ಪ್ರಕಾರ ''ಇಂದು'' ಎಂಬುದು ನಾಳೆ ಇನ್ನೂ ಪ್ರಖರವಾದ, ವಿಸ್ತರಿಸಲ್ಪಟ್ಟ ''ಇಂದು'' ಆಗಿರುತ್ತದೆ. ಬಂಡವಾಳಶಾಹಿ ಇದೆ, ವಿದೇಶಿ ಬಂಡವಾಳದ ಹರಿವಿದೆ ಎನ್ನಿ. ಅವರ ಪ್ರಕಾರ ಇವು ಲುಪ್ತವಾಗುವುದಿಲ್ಲ, ಅದೇ ಚರ್ಯೆ ಮುಂದುವರಿಯುತ್ತದೆ, ಆದರೆ ಪ್ರಮಾಣ

## ರಾಜಕೀಯದ ಕುಟುಂಬೀಕರಣ?

ಅಧಿಕಾರವಶಾತ್

ತಾನು ಸಂಪಾದಿಸಿದ

ಆಸ್ತಿ – ಆದಾಯ ಮೂಲಗಳ

ರಹಸ್ಯವನು ಕಾಪಾಡಲು

ಸೆಕ್ಯೂರಿಟಿ ಗಾರ್ಡ್ ಬೇಕು

ತನ್ನ ಮಗ ಆ ಜಾಗಕೆ ಬಂದರೆ ಸಾಕು!

ಎಲ್ಲೆನ್
ತೊಂಡೋಟಿ, ತುಮಕೂರು

ಹೆಚ್ಚಿರುತ್ತದೆ. ಅಂದರೆ, ಬಂಡವಾಳಶಾಹಿ ವ್ಯವಸ್ಥೆಯು ಚಿರವಾದ್ದು, ಸ್ಥಿರವಾದ್ದು. ಮಾರುಕಟ್ಟೆಯ ಸ್ಥಗಿತತೆ, ತಲ್ಲಣ, ಹಿಂಜರಿಕೆ, ಇವೆಲ್ಲಾ ಆಗಾಗ್ಗೆ ತಲೆದೋರಿದರೂ ಮೂಲತಃ ಬಂಡವಾಳಶಾಹಿಗೆ ಧಕ್ಕೆ ಇಲ್ಲವೆಂಬುದು ಅವರ ನಿಲುವು. ಅವರೇ ''ಇತಿಹಾಸದ ಅಂತ್ಯ'' ಎಂಬ ಸೂತ್ರದ ಜನಕರು. ಅವರ ಪ್ರಕಾರ ಅಮೇರಿಕಾ, ಒಬಾಮ, ವಾಲ್‌ಸ್ಟ್ರೀಟ್, ಎಲ್ಲಾ ಸ್ಥಿರ. ಆದರೇನು ಮಾಡುವುದು, ದಕ್ಷಿಣ ಅಮೇರಿಕಾದ ಜನತೆ ಇದ್ದಕ್ಕಿದ್ದಂತೆ ಎದ್ದುನಿಂತು ''ನೀವು ಸ್ಥಿರವಲ್ಲ, ನಿಮ್ಮನ್ನು ನಾವು ಅಲುಗಾಡಿಸಿಬಿಡುತ್ತೇವೆ'' ಎನ್ನುತ್ತಾರಲ್ಲ? ಭಾರತದ ಜನತೆಯೂ ಆ ಮಾತನ್ನು ಹೇಳದೆಯೇ ಕಾಲ ನೂಕಬಹುದೆಂಬ ನಿರೀಕ್ಷೆ ಹುಸಿಯಾಗದಿದ್ದೀತೆ! ಅಂದರೆ, ಭವಿಷ್ಯವು ವರ್ತಮಾನದಂತೆಯೇ ಇರುತ್ತದೆಂಬ ಭಾವನೆಗೆ ಎಡೆಯಿಲ್ಲ.

ಹಾಗಿದ್ದರೆ, ಇತಿಹಾಸದ ಗುಟ್ಟೇನು? ಅದು ಮುರಿಯುತ್ತಿರುತ್ತದೆ ಮತ್ತು ಕಟ್ಟಲ್ಪಡುತ್ತಿರುತ್ತದೆ. ಯಾರದೋ ತೆವಲಿನಿಂದ ಜರುಗುವ ಕ್ರಿಯೆಯಲ್ಲ ಅದು, ವರ್ತಮಾನದಲ್ಲಿ ಹುದುಗಿರುವ ಕಾಯಿಲೆಯ ಪರಿಣಾಮ ಅದು. ಈ ಕಾಯಿಲೆಯ ಪರಿಸ್ಥಿತಿ ಇರುವಾಗ ಅದನ್ನು 'ಇತಿಹಾಸ'ವೆಂದು ಹೇಳಿ ಅದಕ್ಕೆ ಗೌರವ ನೀಡುವುದು ಯೋಗ್ಯವಲ್ಲವೆಂದು ತಿಳಿದು ಮಾರ್ಕ್ಸ್ ಈ ಕಾಯಿಲೆಯ ಅವಸ್ಥೆಯ ಮಾನವ ಸಮಾಜದ ಗತಿಯನ್ನು ''ಪೂರ್ವಚರಿತ್ರೆ'' ಎಂದು ಕರೆದಿದ್ದಾನೆ. ಅದರ ಇಂಗಿತ ಸ್ಪಷ್ಟ: ಒಂದು ರೀತಿಯ ತುಳಿತದಿಂದ ಇನ್ನೊಂದು ರೀತಿಯ ತುಳಿತಕ್ಕೆ ಕ್ರಮಿಸುವುದು ಎಂತಹ ಭವಿಷ್ಯ! ಅದೇ ದೌರ್ಜನ್ಯ, ಶೋಷಣೆ, ಏರುಪೇರು, ಶ್ರೇಷ್ಠ-ಕನಿಷ್ಠ ಎಂಬ ವಿಂಗಡಣೆ, ಇತ್ಯಾದಿ. ಅಥವಾ, ಮನಮೋಹನ ಸಿಂಗ್ ಜಾಗದಲ್ಲಿ ಸುಷ್ಮಾ ಸ್ವರಾಜ್! ಅಂಥದೇ ಮತ್ತೆ ಮತ್ತೆ ವಿವಿಧ ರೂಪಗಳಲ್ಲಿ ಘಟಿಸದಂತಿರದೆ ಗುಣಾತ್ಮಕವಾಗಿ ಭಿನ್ನವಾಗಿರುವಂತಹ ಸನ್ನಿವೇಶವಿದೆಯಲ್ಲ, ಅದು ನಿಜವಾದ ಭವಿಷ್ಯ, ನಿಜವಾದ ಮಾನವ ಇತಿಹಾಸ. ಸಮಾಜವಾದಿಯು ಅಂತಹ ಭವಿಷ್ಯದ ರೂಪುರೇಖೆಗಳನ್ನು ನೀಡುತ್ತಾನೆ, ಅದರ ನಿರ್ಮಿತಿಯ ಹಾದಿ ಸೂಚಿಸುತ್ತಾನೆ, ಅಲ್ಲಿಯ ಸಾಂಸ್ಕೃತಿಕ ರೂಪದ ಚಿತ್ರವನ್ನು ಕೊಡುತ್ತಾನೆ. ಅದೆಲ್ಲಾ ''ಇಂದು'' ಎಂಬುದರಿಂದಲೇ ಹೊಮ್ಮುವುದು ಅತಿಸಹಜ. ಆದ್ದರಿಂದ ಅದರ ವಿವರಣೆಯನ್ನು ಭೂತ ಮತ್ತು ವರ್ತಮಾನಗಳ ನಿಟ್ಟಿನಿಂದ ಕೊಡುತ್ತೇವೆ. ಆದರೆ ಭವಿಷ್ಯವು ವರ್ತಮಾನದಿಂದ ತೀವ್ರವಾಗಿ ಭಿನ್ನವಾದರೆ ಅದನ್ನು ನಮ್ಮ ಇಂದಿನ ಭಾಷೆಯಲ್ಲಿ ಹೇಗೆ ಹೇಳುವುದು? ಮಾರ್ಕ್ಸ್ ಅದನ್ನು ಹೇಳುವುದು ಹೀಗೆ: ''ಸಮಾಜವಾದಿ ಭವಿಷ್ಯದಲ್ಲಿ ಹೂರಣವು ಹೊರಮೈ ಸ್ವರೂಪವನ್ನು ಮೀರಿ ನಿಲ್ಲುತ್ತದೆ.'' ತನ್ನ ''ಸಂಸ್ಕೃತಿ ಮತ್ತು ಸಮಾಜ'' ಎಂಬ ಗ್ರಂಥದಲ್ಲಿ ರೇಮಂಡ್ ವಿಲಿಯಂಸ್ ಇದನ್ನು ವ್ಯಾಖ್ಯಾನಿಸಿದ್ದಾನೆ: ''ಏನನ್ನಾದರೂ ಆಯೋಜಿಸಬೇಕೆಂದರೆ ಅದು ಯೋಜನೆಗೆ ತಗುವಂತಿರಬೇಕು; ಆಗ ಸಾಮೂಹಿಕ ತೀರ್ಮಾನದಿಂದ ಮುಂದುವರಿಯಬಹುದು. ಆದರೆ ಸಂಸ್ಕೃತಿ ಎಂಬುದರ ಸಂಗತಿಯನ್ನು ನಿಖರವಾಗಿ ಹೇಳುವುದು ಯಾವಾಗ ಸರಿಯಾದುದೆಂದರೆ ಅದು ಯೋಜನೆಗೆ ದಕ್ಕುವಂಥದಲ್ಲ ಎಂಬುದನ್ನು ತಿಳಿದಾಗ.'' ಇದರ ಗಂಧವೇ ಇಲ್ಲದ ಜನ ನಮ್ಮಲ್ಲಿ ''ಭಾರತೀಯ ಸಂಸ್ಕೃತಿ''ಯ ಹೆಸರಿನಲ್ಲಿ ಏನೆಲ್ಲ ಅವಾಂತರ ಮಾಡುತ್ತಿರುತ್ತಾರೆ! ಸಂಸ್ಕೃತಿ ಎಂದರೆ ಅವರಲ್ಲಿ ಕೆಲವು ಮೂಢ ಅಹಂಕಾರಿಗಳಿಗೆ ನೂರು ರೂಪಾಯಿ ನೋಟಿನ ಮೇಲೆ ಗಾಂಧೀಜಿಯ ಚಿತ್ರ ತೆಗೆದು ಎಲ್ಲೋ ಇರುವವಳೆನ್ನಲಾದ ಮಹಾಲಕ್ಷ್ಮಿಯ ಚಿತ್ರ ಅಚ್ಚುಮಾಡಿಬಿಡುವುದು ಮತ್ತು ಅದರಿಂದಲೇ ಭಾರತದ ಅಭಿವೃದ್ಧಿ ಆಗಿಬಿಡುತ್ತದೆಂದು ಬೊಗಳೆ ಬಿಡುವುದು. ರೇಮಂಡ್ ಮುಂದುವರಿದು ಹೇಳುತ್ತಾನೆ, ''ಜೀವನ ಮತ್ತು ಸಮುದಾಯದ ಗಟ್ಟಿತನಕ್ಕೆ ಸಾಧನಗಳನ್ನು ಪೂರೈಸಬೇಕು. ಹಾಗೆ ಪೂರೈಕೆಯಾದನಂತರ ಜನತೆ ಹೇಗೆ ಜೀವಿಸುತ್ತಾರೆಂದು ಈಗಲೇ ಹೇಗೆ ತಿಳಿಯಲು ಸಾಧ್ಯ'' ಎಂದು.

ಈವರೆಗೆ ಮಾನವ ಜನಾಂಗವು ನಡೆದಿರುವ ದಾರಿಯನ್ನು ''ಪ್ರಾಗಿತಿಹಾಸ'' ಎಂದು ಕರೆದರೆ ಮಾರ್ಕ್ಸ್ ಯಾವುದನ್ನು ''ಇತಿಹಾಸ''ವೆಂದು ಕರೆಯುತ್ತಾನೆಂಬುದನ್ನು ಅರಿಯಬಹುದು. ಹಿಂದಿನ ಯಾವುದಾದರೊಂದು ಯುಗದ ಜೀವನವನ್ನು ಒಳಹೊಕ್ಕು ನೋಡಿದರೆ ತಿಳಿಯುವುದೇನು? ಸಮಾಜದ ಬಹುಸಂಖ್ಯಾತ ಜನ ನಿರರ್ಥಕ ದುಡಿಮೆಯಲ್ಲಿ ಆಳುವ ಕೆಲವೇ ಪ್ರತಿಷ್ಠಿತರಿಗಾಗಿ ಜೀವನ ಸವೆಸುತ್ತಿದ್ದಾರೆ, ಎಂದು. ಅಂದಿನ ರಾಜಕೀಯ ಪ್ರಭುತ್ವ ಯಾವ ಸ್ವರೂಪದ್ದೇ ಇರಲಿ, ಸನ್ನಿವೇಶವನ್ನು ಹಾಗೆಯೇ ಉಳಿಸಿಕೊಳ್ಳಲು ಅತಿ ಹಿಂಸಾತ್ಮಕವಾದ ಕೃತ್ಯವನ್ನು ಬಳಸಲು ಹೇಸುವುದಿಲ್ಲ, ಹೇಸಲಿಲ್ಲ, ಎಂಬುದು ಸ್ಪಷ್ಟ. ಅದೇ ಸಮಯದಲ್ಲಿ ಅದಕ್ಕೆ ಪ್ರತಿಭಟನೆಯೂ ವ್ಯಕ್ತವಾಗಿದೆ, ಅನ್ಯಾಯವನ್ನು ಸಹಿಸಲಾಗದೆಂಬ ಭಾವನೆ ಇದೆ. ಅದನ್ನು ಪುರಾಣ, ಸಂಸ್ಕೃತಿ ಮತ್ತು ಚಿಂತನಗಳಲ್ಲಿ ನಾವು ಕಾಣುತ್ತೇವೆ. ಸಂಸ್ಕೃತಿಯೆಂದರೆ ಮನೆಯ ಮುಂದೆ ನೀರು ಸುರಿದು ರಂಗೋಲಿ ಹಾಕುವುದು, ಒಳಗೆ ಪೂಜೆ ಮಾಡಿ ಕಡುಬು ತಿನ್ನುವುದು, ಎಂದಲ್ಲ. ಅದು ಜೀವನಕ್ರಮ, ಪರಸ್ಪರ ಸಂಬಂಧ, ಆಳವಾದ ಅಭಿವ್ಯಕ್ತಿ, ಸಾಮೂಹಿಕ ಆಚರಣೆ, ಮೌಲ್ಯಗಳ ಅನುಸಂಧಾನ, ಎಲ್ಲವನ್ನೂ ಒಳಗೊಳ್ಳುತ್ತದೆ. ಮಾನವ ಜನಾಂಗವು ತನ್ನ ಬೇಡಿಗಳನ್ನು ಕಳಚಿಕೊಂಡಾಗ ಅವರು ಹೇಗೆ ಜೀವನ ರೂಪಿಸಿಕೊಳ್ಳುತ್ತಾರೆಂಬುದನ್ನು ವ್ಯವಧಾನದಿಂದ ಕಾದುನೋಡೋಣ, ಈಗಲೇ ತೀರ್ಮಾನಿಸುವುದೇಕೆ? ಅಪೂರ್ವ ಸ್ವಾತಂತ್ರ್ಯದ ನೆರಳಲ್ಲಿ ಅವರು ಪಾರಸ್ಪರಿಕ ಜವಾಬ್ದಾರಿ ಹೊತ್ತು ವರ್ತಿಸಲು ಸಾಧ್ಯವಿರುತ್ತದೆ. ಈಗಿನಂತೆ ಹೆಣಭಾರದ ದುಡಿಮೆಗೆ ತುತ್ತಾಗಿ ವಿರಾಮದ ಜೀವನ ಅಲಭ್ಯವಾಗಿರದೆ, ದುಡಿಮೆಗಿಂತ ವಿರಾಮ ಹೆಚ್ಚು ಅನುಭವಕ್ಕೆ ಬರುವಂತಿದ್ದರೆ ಅವರ ವರ್ತನೆ ಹೇಗಿರುತ್ತದೆ ಎಂದು ಊಹೆಗಳು ಅನವಶ್ಯಕ, ಅಬದ್ಧ. ಇಷ್ಟಕ್ಕೂ ''ವಿರಾಮ'' ಎಂದರೇನು? ಇಂದಿನ ಬಂಡವಾಳಶಾಹಿ ಸಂದರ್ಭದ ದುಡಿಮೆಯ ನಡುವಿನ ಸಮಯವನ್ನು ಕರೆಯುವ ರೀತಿಯಲ್ಲಿ ಮುಂದೆಯೂ ಅದನ್ನು ಹಾಗೆಯೇ ಕರೆಯಬೇಕೆ? ತಂತ್ರಜ್ಞಾನವು ಬಂಡವಾಳಶಾಹಿಯಡಿ ಬೆಳೆದು, ಉತ್ಪಾದನೆಯನ್ನು ಗರಿಷ್ಠ ಮಟ್ಟಕ್ಕೆ ಮುಟ್ಟಿಸಿದ ಸಂದರ್ಭದಲ್ಲಿ, ''ವಿರಾಮ'' ಎಂಬುದು ಇಂದಿನಂತೆಯೇ ಏಕಿರಬೇಕು? ವಿರಾಮ ಎಂಬುದು ದುಡಿಮೆ ಎಂಬುದರ ಜೊತೆಯಲ್ಲಿ ತಾನೆ ಇರುತ್ತದೆ! 'ಶಾಂತಿ' ಎನ್ನುವುದನ್ನು 'ಯುದ್ಧ' ಇರುವ ಸಂದರ್ಭದಲ್ಲಿ ವ್ಯಾಖ್ಯಾನಿಸಿದಂತೆ ಅದಿಲ್ಲದ ಸಂದರ್ಭದಲ್ಲೂ ಅಂತೆಯೇ ವ್ಯಾಖ್ಯಾನಿಸುವುದಿಲ್ಲವಲ್ಲವೆ? ಈಗಿನ ಸಂದರ್ಭದಲ್ಲೂ 'ವಿರಾಮ' ಎನ್ನುವುದು ಅಷ್ಟೊಂದು ವಿರಾಮದ್ದೆ? ವಿರಾಮದ ಚಟುವಟಿಕೆಗಳು ಗಣಿಯಿಂದ ಕಲ್ಲಿದ್ದಲು ಹೊರತೆಗೆಯುವಷ್ಟು ಶ್ರಮದ್ದೂ ಆಗಿರುವುದಿಲ್ಲವೇನು? ಒಂದು ಚೆಂಡಾಟದಲ್ಲಿ ಎಷ್ಟೊಂದು ಶ್ರಮವಿರುತ್ತದೆ, ಆದರೆ ಅದನ್ನು ವಿರಾಮದ ಚಟುವಟಿಕೆಯೆಂದು ಪರಿಗಣಿಸುತ್ತೇವೆ. ವಿರಾಮವೆಂದರೆ ಎಲ್ಲೋ ಮೈಮರೆತು ವಿಸ್ಕಿ ಕುಡಿದುಕೊಂಡಿರುವುದು ಎಂದಲ್ಲವಲ್ಲ!

ಒಂದು ಉದಾಹರಣೆ ಬೇಕಾದರೆ ಕಾರಾಗೃಹವನ್ನು ಕುರಿತು ಯೋಚಿಸಿ: ಅಲ್ಲಿಯ ಬಂದಿಗಳ ಜೀವನ ಪೂರ್ತಿಯಾಗಿ ನಿಯತವಾಗಿದೆ. ''ಇಂದು ಗುರುವಾರ, ಅದರಂತೆ ಬೆಳಿಗ್ಗೆ ಒಂಬತ್ತು ಗಂಟೆಗೆ ಶರ್ಮ ಎಂಬ ಬಂದಿಯು ಸಾಹೇಬರ ಪಾದರಕ್ಷೆಗಳನ್ನು ಶುಭ್ರಗೊಳಿಸುತ್ತಿರುತ್ತಾನೆ'' ಎಂದು ಎಲ್ಲೋ ಕುಳಿತು ಹೇಳಬಹುದು. ಬಂದಿ ಹಾಗೆ ಮಾಡುತ್ತಿರಲಿಲ್ಲದಿದ್ದರೆ ಅವನ ಮೇಲ್ವಿಚಾರಕನನ್ನು ಅವನ ಮೇಲ್ವಿಚಾರಕ ತರಾಟೆಗೆ ತೆಗೆದುಕೊಳ್ಳಬಹುದು! ಅದೇ ಬಂದಿಯು ಬಿಡುಗಡೆಯಾಗಿ ಬಂದನಂತರ ಯಾವುದೋ ಗುರುವಾರದ ಬೆಳಿಗ್ಗೆ ಒಂಬತ್ತಕ್ಕೆ ಏನು ಮಾಡುತ್ತಿರಬಹುದೆಂದು ಖಚಿತವಾಗಿ ಹೇಳಬಲ್ಲಿರಾ? ಸಿ.ಐ.ಎ.ಯಂತಹ ಸಂಸ್ಥೆ ಅವನಿಗೆ ಕಾಣದ ಕಾಲರ್ ತೊಡಿಸಿ ಅವನ ಪ್ರತಿಯೊಂದು ಚಲನವಲನವನ್ನೂ ಅರಿತುಕೊಳ್ಳುತ್ತದೆಂಬುದು ಬೇರೆ ವಿಷಯ. ನಮ್ಮ ಗಣಕ ತಂತ್ರಜ್ಞಾನದಿಂದ ಭಾರತದಲ್ಲೂ ಅದನ್ನು ಮಾಡಲು ಸಾಧ್ಯ, ಬಿಡಿ. ಈ ಹೊರ ಬಂದಿರುವ ಬಂದಿಗಳು ಪೂರ್ವೇತಿಹಾಸದಿಂದ ಇತಿಹಾಸದ ಹಂತಕ್ಕೆ ಕಾಲಿಟ್ಟಿರುವಂಥವರು, ಹಿಂದಿನ ಅಪಾರ ದುಡಿಮೆಯ ಬಂಧನದಿಂದ ಮುಕ್ತರಾಗಿ ವಿರಾಮವನ್ನು ಅನುಭವಿಸುತ್ತಿರುವಂಥವರು. ಅವರ ಅಸ್ತಿತ್ವದ ನಿರ್ಧಾರಕ ಸೂತ್ರ ಅವರ ಕೈಯ್ಯಲ್ಲಿದೆ, ಹೊರಗಿನ ಯಾವುದೋ ಶಕ್ತಿ ಅದನ್ನು ನಿರ್ಧರಿಸುತ್ತಿಲ್ಲ. ಮಾರ್ಕ್ಸ್ ಹೇಳುವುದಿಷ್ಟೆ: ''ಸಮಾಜವಾದವೆಂದರೆ ನಮ್ಮ ಗುರಿಯನ್ನು ಸಾಮೂಹಿಕವಾಗಿ ನಾವೇ ನಿರ್ಧರಿಸಿಕೊಳ್ಳುವ ಹಂತ'' ಎಂದು. ಇದು ಪ್ರಜಾಪ್ರಭುತ್ವದ ಗಂಭೀರ ಸ್ವರೂಪ ಉಳ್ಳದ್ದು, ಬಂಡವಾಳಶಾಹಿ ಪ್ರಜಾಪ್ರಭುತ್ವದ ಅಣಕ ಮೋಜಿನ ಸ್ವರೂಪದ್ದಲ್ಲ. ಅದಕ್ಕೇ ಗುರುವಾರ ಬೆಳಿಗ್ಗೆ ಒಂಬತ್ತು ಗಂಟೆಗೆ ನಾನೇನು ಮಾಡುತ್ತಿರುತ್ತೇನೆಂದು ನಿಮಗೆ ತಿಳಿಯುವ ಸಂಭವವಿಲ್ಲ!

ಇಂದಿಗಿಂತಲೂ ನೈಜವಾಗಿ ಭಿನ್ನವಾದ ನಾಳೆಯು ಇಂದಿನದರ ವಿಸ್ತರಣೆಯಲ್ಲ, ಅದರಿಂದ ಪೂರ್ತಿ ಭಿನ್ನವೂ ಅಲ್ಲ. ಪೂರ್ತಿ ಭಿನ್ನವಾದರೆ ನಾವದನ್ನು ಗುರುತಿಸಲಾರೆವು. ಹಾಗಾದರೆ ಅದನ್ನು ವಿವರಿಸುವುದು ಹೇಗೆ? ಮಾರ್ಕ್ಸ್ ಅದನ್ನು ಮಾಡಲು ಒಂದು ಕ್ರಮ ಅನುಸರಿಸಿದ್ದಾನೆ: (ಅ) ನಾಳಿನ ಬಗ್ಗೆ ಭ್ರಮಾತ್ಮಕ ಕಲ್ಪನೆ ಬೇಡ, ಇಂದಿನ ರೀತಿರಿವಾಜುಗಳನ್ನು ಗಮನಿಸಿ, ಮತ್ತು (ಆ) ಭೂತಕಾಲದ ಗ್ಲಾನಿಗಿಂತಲೂ ನಾಳಿನ ಬೆಳಕಿಗೆ ಹೆಚ್ಚು ಒತ್ತು ಕೊಡಿ. ಇಂದಿನದು ಏನಿದೆಯೋ ಅದರಲ್ಲಿ ಪರಿವರ್ತನೆಗೆ ಸಾಧ್ಯತೆಗಳಿವೆ, ಮಗುವಿನಲ್ಲಿ ಯೌವನದ ಸಾಧ್ಯತೆ ಇರುವಂತೆ. ಬಂಡವಾಳಶಾಹಿಯು ಅಸಾಧಾರಣ ಶಕ್ತಿಯನ್ನು ಸೃಷ್ಟಿಸಿದೆ, ಆದರೆ ಸೀಮಿತ ಎಲ್ಲೆಯನ್ನು ನಿರ್ಮಿಸಿಕೊಂಡಿದೆ; ಅದೇ ಅದರ ದುರಂತ. ಬಹುಸಂಖ್ಯಾತ ದುಡಿಮೆಗಾರ ವರ್ಗದ ಆಶಯಗಳ ಪೂರೈಕೆಗೆ ಅದರ ಉತ್ಪಾದನಾ ಶಕ್ತಿ ವಿಸ್ತರಿಸಿಕೊಂಡಿಲ್ಲ, ಆದರೆ ವಿಸ್ತರಿಸಿಕೊಳ್ಳಬಲ್ಲದು ಮತ್ತು ಹಾಗೆ ಮಾಡಬೇಕು. ಇದು ಉನ್ನತ ನೈತಿಕತೆ ಅಥವಾ ಆದರ್ಶದ ಮಾತು ಎಂದು ತಳ್ಳಿಹಾಕುವುದು ಮಾರ್ಕ್ಸ್‌ವಾದವಲ್ಲ, ಏಕೆಂದರೆ ಮಾರ್ಕ್ಸ್‌ವಾದವು ಕೇವಲ ಭೌತಿಕ

ಹಿತಾಸಕ್ತಿಗಳಿಗೆ ಕಟ್ಟುಬಿದ್ದಿಲ್ಲ. ವಾಸ್ತವದಲ್ಲಿ ನಿಂತೇ ಅಸಾಧ್ಯವಾದುದನ್ನು ಹಕ್ಕಿನ ಒತ್ತಾಯದಂತೆ ಮಂಡಿಸುವುದು ಮಾರ್ಕ್ಸ್‌ವಾದ. ಆ 'ಅಸಾಧ್ಯವಾದ್ದು' ಇಂದಿನ ಸಮಾಜದ ಪರಿಧಿಯಲ್ಲಿಲ್ಲ, ಆದರೆ ಸಮಾಜವು ಅತ್ತಕಡೆಗೆ ವಿಸ್ತರಿಸಿಕೊಳ್ಳಬಲ್ಲ ಪ್ರೌಢತೆ ಹೊಂದಿದೆ. ಹಿಂದಿನ ವ್ಯವಸ್ಥೆಗಳು ಹಾಗೆ ಬೆಳೆದು ಮಾರ್ಪಟ್ಟಿವೆ. ಊಳಿಗಮಾನ್ಯ ವ್ಯವಸ್ಥೆಯು ಬಂಡವಾಳಶಾಹಿಯಾಗಿ ಬೆಳೆದದ್ದು ಒಂದು ಉದಾಹರಣೆ, ಅಷ್ಟೆ. ಅಂದು ಅಸಹಜವೆಂದು ಭಾವಿಸಲಾಗಿದ್ದುದು ಸಹಜವಾಗಿಯೇ ಮೂಡಿಬಂದಿದ್ದು ಇತಿಹಾಸ. ಬಂಡವಾಳಶಾಹಿಯಡಿಯೇ ಎಲ್ಲರ ಆಶಯಗಳನ್ನೂ ಪೂರೈಸಬಹುದೆಂದು ಭಾವಿಸುವವರ ಆಶಯ ತಿಪ್ಪೆಯ ಕಸವಾಗಿಹೋಗಿದೆ.

ಇದನ್ನು ಮಾರ್ಕ್ಸ್ ವರ್ತಮಾನದ ಸಾವು-ಬದುಕಿನ ಸಂಘರ್ಷವೆಂದು ಕಂಡಿದ್ದಾನೆ. ಪ್ರೀತಿ-ಸೌಹಾರ್ದತೆಗಳಿಂದ ಇಡೀ ಸಮುದಾಯದ ಅಗತ್ಯಗಳ ಪೂರೈಕೆಯನ್ನು ಸಂಘರ್ಷವಿಲ್ಲದೆ ಸಾಧಿಸಬಹುದೆಂಬ ಕಾಲ್ಪನಿಕರ ನಿಲುವಿಗೆ ಭಿನ್ನವಾಗಿ ಅವುಗಳಲ್ಲಿ ಸಂಪೂರ್ಣ ನಿಷ್ಠೆಯುಳ್ಳ ಮಾರ್ಕ್ಸ್ ಬೇರೊಂದು ಹಾದಿಯನ್ನು ಗುರುತಿಸಿದ್ದಾನೆ: ಶೋಷಿತರು ತಮ್ಮ ಹಿತವನ್ನು ಬಿಟ್ಟುಕೊಡದೆ ಅದರ ಪೂರೈಕೆಗೆ ಮುನ್ನುಗ್ಗುವುದು, ಅದೇ ಸ್ವಾರ್ಥವು ತುಂಬಿರುವ ವ್ಯವಸ್ಥೆಯನ್ನು ಕೊನೆಗಾಣಿಸುವ ಹಾದಿ. ಸರಪಳಿಯ ಬಂಧನದಲ್ಲಿರುವುದು ಯಾರಿಗೂ ಆಪ್ಯಾಯಮಾನವಲ್ಲದಿದ್ದಾಗ ಸ್ವಹಿತ ಸಾಧನೆಯಲ್ಲಿ ತಪ್ಪೇನಿದೆ?

ಮಾರ್ಕ್ಸ್‌ನನ್ನು ಟೀಕಿಸುವ ಕೆಲವರಿಗೆ ವರ್ಗ ಹಿತಾಸಕ್ತಿಗಳಿಗೆ ಒತ್ತು ನೀಡುವುದು ಹಿಡಿಸುವುದಿಲ್ಲ. ಮಾನವ ಸ್ವಭಾವದ ಬಗ್ಗೆ ಅವನಿಗೆ ಕೇವಲ ರೋಚಕ ಅಭಿಪ್ರಾಯಗಳಿವೆಯೆಂದೇನೂ ಅವರು ಹೇಳುವುದಿಲ್ಲ. ವರ್ತಮಾನದ ಅಸಹ್ಯ ತರ್ಕಕ್ಕೆ ಬಾಗಿಯೇ ಮುನ್ನಡೆ ಸಾಧಿಸಬೇಕು; ಪರಂಪರೆಯಲ್ಲಿ ಬಂದಿರುವ ದುರಂತ ಕತೆಗಳ ಲಕ್ಷಣ ಇದೇ. ವರ್ಗ ಸಮಾಜದಲ್ಲಿ ವೈರುಧ್ಯಗಳಿವೆ ಎಂಬುದನ್ನು ಗುರುತಿಸಿ ಸಮಾಜದ ಸಂಪತ್ತನ್ನು ತಿಜೋರಿಯಿಂದ ಹೊರತೆಗೆಯಬಹುದೇ ವಿನಾ ಶಾಂತ ಅನಾಸಕ್ತಿ ಭಾವದಿಂದಲ್ಲ. ಭವಿಷ್ಯದ ನಿಜ ಚಿತ್ರಣವಿರುವುದು ವರ್ತಮಾನದ ಲೋಪದಲ್ಲಿ, ಸೋಲಿನಲ್ಲಿ. ಭವಿಷ್ಯದ ಸಮಾಜವಾದಿ ವ್ಯವಸ್ಥೆಯಲ್ಲಿ ಜನರೆಲ್ಲಾ ಸಹಕಾರಿ ಭಾವದಿಂದ ಸಂಗಾತಿಗಳಾಗಿರುತ್ತಾರೆ ಎಂಬ ಭರವಸೆ ಏನು? ದ್ವೇಷಾಸೂಯೆಗಳು, ಅಸಮಾನತೆ, ಆಕ್ರಮಣ, ಹಿಂಸೆ, ಸ್ಪರ್ಧೆ, ಯಾವುದೂ ಇರುವುದಿಲ್ಲವೇನು? ಇದು ಟೀಕಾಕಾರರ ಒಂದು ಅಸ್ತ್ರ. ಮಾರ್ಕ್ಸ್ ಅವೆಲ್ಲಾ ನಶಿಸಿಹೋಗಿರುತ್ತವೆಂಬ ರೀತಿಯ ಲೋಕವನ್ನೇನೂ ಸೂಚಿಸಿಲ್ಲ. ಮಾನವ ಸ್ವಭಾವವೆಂಬುದನ್ನು ರಾಜಕೀಯ ಸ್ಥಗಿತತೆಗೆ ಅಸ್ತ್ರವನ್ನಾಗಿ ಮಾಡಿಕೊಳ್ಳಲು ಬಳಸಲಾಗುತ್ತಿದೆಯೆಂದು ಕೆಲವು ಮಾರ್ಕ್ಸ್‌ವಾದಿಗಳು ವಿವರಣೆ ನೀಡುವುದುಂಟು. ಅವರ ಪ್ರಕಾರ ಮಾನವನಲ್ಲಿ ಬದಲಾಗದೆಯೇ ಇರುವಂತಹ ಸ್ವಭಾವವೇನೂ ಇಲ್ಲ, ನಾವು ಏನಾಗಿದ್ದೇವೋ ಅದು ಇತಿಹಾಸದ ನಿರ್ಮಾಣ, ಅಷ್ಟೆ. ಸ್ವತಃ ಮಾರ್ಕ್ಸ್ ಇಂತಹ ''ಇತಿಹಾಸ ಮೂಲದ'' ವಿವರಣೆಯನ್ನು ಪುಷ್ಟೀಕರಿಸಿಲ್ಲ. ಮಾನವ ಸ್ವಭಾವ ಎಂಬುದು ಇದ್ದೇ ಇದೆ, ಆದರೆ ಅದು ವ್ಯಕ್ತಿಯ ಪ್ರಾಮುಖ್ಯತೆಗಿಂತಲೂ ದೊಡ್ಡದಲ್ಲ. ವಿಶ್ವದ ವಿಸ್ಮಯಗಳಲ್ಲಿ




ಅಗಾಧ ವೈಯಕ್ತಿಕ ಪ್ರತ್ಯೇಕತೆಯೂ ಒಂದು. ನಮ್ಮ ಭೌತಿಕ ಶರೀರವು ಏನೆಲ್ಲಾ ಬಯಸುತ್ತದೆ! ಆಹಾರ, ದುಡಿಮೆ, ಸಾಮಾಜಿಕತೆ, ಲೈಂಗಿಕತೆ, ಸಂವಹನ, ಇತ್ಯಾದಿ. ಸ್ವಯಂ-ಅಭಿವ್ಯಕ್ತಿಯುಳ್ಳ ನಾವು ಇತರರೊಡನೆಯೇ ಬಾಳಬೇಕು, ನಿಜ. ಅದರಲ್ಲಿ ಸಾಮಾಜಿಕ ಉಪಯುಕ್ತತೆ ಮತ್ತು ಸ್ನೇಹದ ಬಂಧನ, ಎರಡನ್ನೂ ಪಡೆದುಕೊಳ್ಳುತ್ತೇವೆ. ಕಲೆಯಲ್ಲಿ ಇವೆಲ್ಲಾ ಇವೆ. ಅದರಂತೆ ನಿಜ ಜೀವನದಲ್ಲಿಯೂ ಅಷ್ಟೇ ಸಾಂದ್ರತೆಯಿಂದ ಸಾಧ್ಯವಾದರೆ ಎಷ್ಟೊಂದು ನೈತಿಕ ಮತ್ತು ರಾಜಕೀಯ ಪರಿಣಾಮಗಳನ್ನು ಕಾಣಬಹುದು, ಅಲ್ಲವೆ? ಇದನ್ನು ದಾರ್ಶನಿಕ ಮಾನವಶಾಸ್ತ್ರ ಎನ್ನುತ್ತೇವೆ. ಮಾರ್ಕ್ಸ್ ಪ್ರತಿಪಾದಿಸಿದ್ದು ಅದನ್ನೇ. ನಾವು ದುಡಿಯುವವರು, ಆಸೆಗಳನ್ನುಳ್ಳವರು, ಮಾತನಾಡಬಲ್ಲವರು; ಅಂತೆಯೇ ಇತಿಹಾಸವೆಂಬ ಪ್ರಕ್ರಿಯೆಯಲ್ಲಿ ನಮ್ಮ ಸನ್ನಿವೇಶಗಳನ್ನು ಬದಲಾಯಿಸಿಕೊಳ್ಳಬಲ್ಲೆವು. ಅದರಲ್ಲಿ ನಮ್ಮ ಸ್ವಂತದ ಬದಲಾವಣೆಯೂ ಅಡಗಿದೆ. ಬದಲಾವಣೆಯು ಮಾನವ ಸ್ವಭಾವಕ್ಕೆ ಹೊರತಾದುದಲ್ಲ. ನಾವು ಪರಿಪೂರ್ಣರಾಗಿದ್ದಿದ್ದರೆ ಬದಲಾವಣೆ ಸಾಧ್ಯವಿರುತ್ತಿರಲಿಲ್ಲವೇನೊ! ನಾವು ಹಿಮಕರಡಿಗಳಾಗಿದ್ದಿದ್ದರೆ ನಮಗೆ ಚರಿತ್ರೆ ಇರುತ್ತಿರಲಿಲ್ಲ, ಏಕೆಂದರೆ ಅವುಗಳ ಭೌತಿಕ ಶರೀರವು ಬದಲಾವಣೆಗೆ ಆಸ್ಪದ ನೀಡುವುದಿಲ್ಲ. ಅವಕ್ಕೆ ರಾಜಕೀಯವೂ ಇಲ್ಲ. ಅಥವಾ ಗುಟ್ಟಾಗಿ ಅವೂ ರಾಜಕೀಯ ಹೊಂದಿವೆಯೊ! ಬಹುಶಃ ಎಂದಾದರೂ ಅವು ನಮ್ಮನ್ನಾಳಲು ಬಂದರೆ ಇಂದಿನ ಆಳುವ ವರ್ಗಕ್ಕಿಂತಲೂ ಹೀನಾಯವಾದುದನ್ನೇನೂ ಅವು ಮಾಡಲಾರವು, ಬಿಡಿ. ಒಂದಂತೂ ನಿಜ, ಅವು ಉಗ್ರ-ರಾಷ್ಟ್ರೀಯವಾದಿಗಳಾಗುವುದಿಲ್ಲ, ಸಾಮಾಜಿಕ- ಪ್ರಜಾಪ್ರಭುತ್ವವಾದಿಗಳೂ ಆಗುವುದಿಲ್ಲ. ಹಿಟ್ಲರ್ ಮತ್ತವನ ಬೆಂಬಲಿಗರ ಸಂಪ್ರದಾಯಗಳು ಇವು ಎಂಬುದು ೧೯೩೦ರ ದಶಕದ ಜರ್ಮನಿಯ ಚರಿತ್ರೆಯಲ್ಲಿ ದಾಖಲಾಗಿದೆ. ಅವರೆಲ್ಲರ ಪ್ರತಿಕೃತಿಗಳು ಇಂದು ಭಾರತದಲ್ಲಿ ಲಭ್ಯವಿವೆ. ಮಾನವನು ರಾಜಕೀಯ ಪ್ರಾಣಿಯಾದ್ದರಿಂದ ಇದು ಸಾಧ್ಯವಾಗಿದೆ. ಮಾನವ ತನ್ನ ಭೌತಿಕ ಜೀವನವನ್ನು ನಿಯಮಿಸಿಕೊಳ್ಳಲು ವ್ಯವಸ್ಥೆಗಳನ್ನು ಮಾಡಿಕೊಳ್ಳುತ್ತಾನೆ. ಅದರಲ್ಲಿ ಈವರೆಗೆ ಶೋಷಣೆ, ಅಸಮಾನತೆ, ಎಲ್ಲಾ ಇವೆ: ದುಡಿಮೆ, ಸಾಮಾಜಿಕತೆ, ಲೈಂಗಿಕತೆ, ಮುಂತಾದವುಗಳಲ್ಲಿ. ಅಲ್ಲಿ ಉದ್ಭವಿಸುವ ಘರ್ಷಣೆಗಳನ್ನು ನಿಯಂತ್ರಿಸಲು ರಾಜಕೀಯ ವ್ಯವಸ್ಥೆ ಅಗತ್ಯವಾಗಿದೆ. ತಮಗೆ ತಾವೇ ಇದನ್ನು ಸೂಕ್ಷ್ಮವಾಗಿ ಹೇಳಿಕೊಳ್ಳಲು ಮಾನವ ಜನಾಂಗ ಕಲೆ, ಪುರಾಣ, ಸಿದ್ಧಾಂತ, ಎಲ್ಲವನ್ನೂ ಬೆಳೆಸಿಕೊಂಡಿದೆ.

ಮನುಷ್ಯನ ಭೌತಿಕ ಲಕ್ಷಣಗಳು ಕೆಲವು ಶಕ್ತಿ ಮತ್ತು ಸಾಧ್ಯತೆಗಳನ್ನೊಳಗೊಂಡಿವೆ. ಅದು ಮಾರ್ಕ್ಸ್‌ಗೆ ಪ್ರಧಾನ ಅಂಶ. ಒಬ್ಬ ಸಂಗೀತಗಾರನಿಗೆ ತನ್ನ ಕಲಾಶಕ್ತಿಯು ಸಂಪೂರ್ಣವಾಗಿ ಅಭಿವ್ಯಕ್ತವಾಗುವಂತಹ ಸನ್ನಿವೇಶವು ಸ್ವಾತಂತ್ರ್ಯದ ಮಜಲನ್ನು ಸೂಚಿಸುತ್ತದೆ. ಅದರಿಂದ ಎಂಥದೋ ಪ್ರಯೋಜನವಿದೆ. ಅದು ಗೌಣವಲ್ಲದಿದ್ದರೂ ಅದೇ ಸರ್ವಸ್ವವಲ್ಲ. ಈ ಶಕ್ತಿ-ಸಾಧ್ಯತೆಗಳು ಚರಿತ್ರೆಯಲ್ಲಿ ಬಿಚ್ಚಿಕೊಳ್ಳುವಾಗ ಏಕಪ್ರಕಾರವಾಗಿರುವುದಿಲ್ಲ. ವೈಯ್ಯಕ್ತಿಕ ಮತ್ತು ಸಾಮಾಜಿಕ ಚರಿತ್ರೆಗಳೆರಡಕ್ಕೂ ಇದು ಅನ್ವಯಿಸುತ್ತದೆ. ಆದಾಗ್ಯೂ, ಆ ಶಕ್ತಿ-ಸಾಧ್ಯತೆಗಳು ಹುದುಗಿರುವುದು ವ್ಯಕ್ತಿಯಲ್ಲೇ. ಎರಡು ಭಿನ್ನ ಸಂಸ್ಕೃತಿಗಳ ಹಿನ್ನೆಲೆಯುಳ್ಳವರು ಪ್ರಾಯೋಗಿಕವಾಗಿ ಕೆಲಸಗಳಲ್ಲಿ ಜೊತೆಯಾಗಿ ಕೆಲಸ ಮಾಡಬಲ್ಲರು. ಪರಸ್ಪರರ ಭಾಷೆ ತಿಳಿದಿರಲೇಬೇಕೆಂಬ ನಿರ್ಬಂಧವೇನೂ ಇಲ್ಲ. ಇಬ್ಬರ ಶರೀರಗಳೂ ತಿಳಿವು, ಆಶಯ ಮತ್ತು ಭಾವನೆಗಳನ್ನು ಹೊಂದಿವೆ ಮತ್ತು ಪ್ರಕಟಿಸುತ್ತವೆ. ದುಃಖ, ಉನ್ಮಾದ, ದುಡಿಮೆ, ಲೈಂಗಿಕತೆ, ಸ್ನೇಹ, ದ್ವೇಷ, ದಮನ, ಅನ್ಯಾಯ, ಸಾವು-ನೋವು, ಕೌಟುಂಬಿಕ ಸಂಬಂಧ, ಕಲೆ, ಇವೆಲ್ಲಾ ಎಲ್ಲ ಮಾನವ ಸಂಸ್ಕೃತಿಗಳಲ್ಲೂ ಇರುವಂಥವು. ಅವನ್ನು ಬೇರೆ ಬೇರೆ ರೀತಿಗಳಲ್ಲಿ ವಿವಿಧ ಸಂಸ್ಕೃತಿಗಳು ಅನುಭವಿಸಿರಬಹುದು, ಅಭಿವ್ಯಕ್ತಿಸಿರಬಹುದು. ಕೆಂಪಸಾಗರದಲ್ಲಿ ಸಾಯುವುದಕ್ಕೂ ಬೆಂಗಳೂರಿನಲ್ಲಿ ಸಾಯುವುದಕ್ಕೂ ವ್ಯತ್ಯಾಸವಿದೆ, ಆದರೆ ಸಾಯುವ ಲಕ್ಷಣ ಮಾತ್ರ ಸಾಮಾನ್ಯ. ಮಾರ್ಕ್ಸ್ ಒಂದೆಡೆ ಬರೆಯುತ್ತಾನೆ: ''ವಸ್ತುನಿಷ್ಠ ಸಂವೇದನಾಪೂರಿತ ಮಾನವ ಒಬ್ಬ ದುಃಖಿ; ಅವನಿಗೆ ದುಃಖದ ಸಂವೇದನೆ ಇರುವುದರಿಂದ ಅವನೊಬ್ಬ ತುಡಿತ ಉಳ್ಳ ವ್ಯಕ್ತಿ.'' ಸಾವು ಮನುಕುಲದಲ್ಲಿ ಅನಿವಾರ್ಯ, ಆದರೆ ಅಕಾಲಿಕವಾಗಿ ಚಿಕ್ಕ ವಯಸ್ಸಿನಲ್ಲೇ ಸತ್ತರೆ, ಜೀವನ ಮೊಟಕುಗೊಳಿಸಲ್ಪಟ್ಟರೆ ಹೇಗೆ! ಅದಕ್ಕೆ ಜೀವ ತೇಯುವಷ್ಟು ದುಡಿಮೆ, ಅಪಘಾತ, ಗಾಯ, ರೋಗ, ಹೀಗೆ ಯಾವುದೇ ಕಾರಣವಿರಲಿ, ಅದು ಅಕಾಲಿಕವೇ. ಕಮ್ಯುನಿಸ್ಟ್ ಸಮಾಜ ವ್ಯವಸ್ಥೆಯಲ್ಲಿ ಜೀವ ತೇಯುವಷ್ಟು ದುಡಿಮೆ ಬೇಕಾಗದು, ಆದರೆ ಅಕಾಲಿಕ ಸಾವು ಇಲ್ಲವಾಗುವುದಿಲ್ಲ. ತನ್ನ ''ಬಂಡವಾಳ'' ಎಂಬ ಕೃತಿಯಲ್ಲಿ ಮಾರ್ಕ್ಸ್ ಇದನ್ನು ಬರೆದಿದ್ದಾನೆ. ಕಮ್ಯುನಿಸ್ಟ್ ಸಮಾಜದಲ್ಲಿ ಮಾನವನು ಜರಾಮರಣಗಳಿಂದ ಮುಕ್ತನಲ್ಲ. ''ಹೌದು ಯಜಮಾನರೆ, ಕಮ್ಯುನಿಸ್ಟ್ ಸಮಾಜದಲ್ಲಿ ರಸ್ತೆ ಅಪಘಾತಗಳನ್ನು ತಪ್ಪಿಸಲಾಗುವುದಿಲ್ಲ.''

**ಡಾ|| ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ, ಅಪಾರ್ಟ್‌ಮೆಂಟ್ಸ್, ೨೨/೧
೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ
ಬೆಂಗಳೂರು - ೫೬೦ ೦೮೫

# ಅಸ್ಪೃಶ್ಯತೆ – ಶರಣರ ವಚನಗಳಲ್ಲಿ

ಸ್ಪೃಶ್ಯ ಮುಟ್ಟಿಸಿಕೊಳ್ಳುವವನಾದರೆ ಅಸ್ಪೃಶ್ಯ ಮುಟ್ಟಬಾರದವನು. ಇವನನ್ನು ಶ್ವಪಚ, ಚಂಡಾಲ, ಹೊಲೆಯ, ಮಾದಿಗ ಇತ್ಯಾದಿ ಶಬ್ದಗಳಲ್ಲಿ ಗುರುತಿಸಿ ಅವಮಾನಿಸಲಾಗಿದೆ. ಮುಟ್ಟುವುದು ಆಪ್ತತೆಯ, ಆರ್ದ್ರತೆಯ ಭಾವಸಂಪನ್ನ ಕ್ರಿಯೆ. ಹಿಂದೂ ಸಂಸ್ಕೃತಿ ಎಂದೂ ಒಳಗೊಳ್ಳುವ ಸಂಸ್ಕೃತಿಯಲ್ಲ; ಮುಟ್ಟಬೇಡ ಎನ್ನುವ ನಡೆಯದು. ಹೊರಗಿನವರು ಒಳಗಿನವರು ಮುಟ್ಟಬಹುದಾದವರು, ಮುಟ್ಟಬಾರದವರು ಎಂಬ ನೆಲೆಗಳಲ್ಲಿ ಮನುಷ್ಯರ ಬಗೆಗಿನ ತನ್ನ ಸಣ್ಣತನವನ್ನು ಭಿನ್ನಭೇದವನ್ನು ಉದ್ದಕ್ಕೂ ಉಳಿಸಿಕೊಂಡೇ ಬಂದಿದೆ. ಈ ಮುಟ್ಟುವ, ಮುಟ್ಟಿಸಿಕೊಳ್ಳುವ ಮನುಷ್ಯ ಸಹಜ ಮನೋಧರ್ಮಕ್ಕೆ ಎರವಾದ ಪರಿಯಲ್ಲಿ ಬದುಕನ್ನು ಹೊರೆಯಬೇಕಾದ ಬಂಧನಕ್ಕೆ ಸಿಕ್ಕಿ ಅವಮಾನ, ಬೇಗುದಿಗಳನ್ನು ಅನುಭವಿಸಿದವರ ಒಳಸಂಕಟಗಳು ಹೇಳಲಾಸಲ್ಲ. ಡೋಹರ ಕಕ್ಕಯ್ಯನ ವಚನಗಳಲ್ಲಿ ಈ ಮುಟ್ಟುವ ಸಂಗತಿ ಮುಟ್ಟುವ – ಮುಟ್ಟದಿರುವ ಎರಡೂ ನೆಲಗಳಲ್ಲೂ ಅನುಭವದ್ರವ್ಯವಾಗಿ ಮಾತಾಡಿದೆ. ಕಕ್ಕಯ್ಯನವೆಂದು ಸಿಕ್ಕಿರುವ ವಚನಗಳೇ ಆರು. ಆ ಆರೂ ವಚನಗಳಲ್ಲಿ ಹರಿದಿರುವ ವಿಚಾರ ಮುಟ್ಟುವ ಸಂಗತಿಗೆ ಸಂಬಂಧಿಸಿದ ಸಂಗತಿಯೇ ಆಗಿದೆ. ಅಸ್ಪೃಶ್ಯತೆಯ ಅವಮಾನದಲ್ಲಿ ನರಳಿದ ಮನಸ್ಸು ಹೀಗೆ ಅದನ್ನೇ ಮತ್ತೆ ಮತ್ತೆ ಧೇನಿಸಿ ಬರೆಯುವುದು ಅವಮಾನದ ತೀವ್ರತೆಯನ್ನು ಕಾಣಿಸುತ್ತದೆ. ಆದರಿಂದ ಹೊರಬರಲು ಸಾಧ್ಯವಾದ ಸ್ಥಿತಿಯ ಬಗೆಗೂ ಇಲ್ಲಿ ಸೂಚನೆಗಳಿವೆ.

**ಎಸ್. ಜಿ. ಸಿದ್ದರಾಮಯ್ಯ**

**ಜಾತಿ ವೃತ್ತಿಯಲ್ಲ ಹುಟ್ಟು**

ಜಾತಿ ವ್ಯವಸ್ಥೆ ಈ ದೇಶಕ್ಕಂಟಿದ ಶಾಪ. ಮನುಷ್ಯನನ್ನು ಮನುಷ್ಯನೆಂದು ಗೌರವಿಸದೆ ಮೇಲುಕೀಳಿನ ಅವಮಾನಗಳಲ್ಲಿ ಮನುಷ್ಯತ್ವದ ಘನತೆಯನ್ನು ಕೀಳ್ಗಳೆದು ಅಸಮಾನತೆಯನ್ನು ಬೆಳೆಸಿದ್ದು ಈ ದೇಶದ ವರ್ಣ ನೀತಿ. ಬ್ರಹ್ಮನೆಂಬ ದೇವಕಲ್ಪನೆಯಲ್ಲಿ ಅವನ ದೇಹ ರಚನೆಯನ್ನು ಒಡೆದು ಒಂದೊಂದು ಭಾಗದಿಂದ ಒಂದೊಂದು ವರ್ಣದ ಹುಟ್ಟನ್ನು ಗುರುತಿಸಿ ಅಂಗಾಂಗ ಭಿನ್ನತೆಯಲ್ಲಿ ಶ್ರೇಷ್ಠ ಕನಿಷ್ಠ ಎಂಬ ತಾರತಮ್ಯ ನೀತಿಯನ್ನು ಹುಟ್ಟುಹಾಕಿದ್ದು ಈ ವರ್ಣನೀತಿ. ಈ ಕಲ್ಪನೆಯನ್ನು ರೂಪಕ ಸಾಮಗ್ರಿಯಾಗಿ ಅರ್ಥೈಸುತ್ತಾ ಎಷ್ಟೇ ವೈಭವೀಕರಿಸಹೋದರೂ ಅದು ಪ್ರತೀತಗೊಳಿಸುವ ಅರ್ಥ ಮಾತ್ರ ಮೇಲುಕೀಳಿನ ಅಸಮಾನ ಗುಣವನ್ನೇ ಎಂಬುದು ಕಡೆಗಣಿಸಲಾಗದ ಸತ್ಯ. ಏಕೆಂದರೆ ಅದು ಹೇಳುವ ರೂಪಕದ ಅರ್ಥ ಈ ನೆಲದಲ್ಲಿ ಎಂದೂ ವಾಸ್ತವವಾದದ್ದಿಲ್ಲ, ವಾಸ್ತವವಾಗುವುದೂ ಇಲ್ಲ. ಅದೇನಿದ್ದರೂ ತನ್ನ ಹೆಣ ವಾಸನೆಯನ್ನು ಮರೆಸಲಿಕ್ಕೆ ಹಚ್ಚಿಕೊಂಡ ಮಾತಿನ ಪರಿಮಳ.

ಜಾತಿಗಳು ಮನುವಿಗಿಂತಲೂ ಮೊದಲೇ ಇದ್ದವು ಎಂದು ಅಂಬೇಡ್ಕರ್ ಅಭಿಪ್ರಾಯಪಡುತ್ತಾರೆ. ಮೊದಲು ಇದ್ದ ಜಾತಿಗಳೆಂದರೆ :

೧. ಬ್ರಾಹ್ಮಣರು ಅಥವಾ ಪುರೋಹಿತ ವರ್ಗ
೨. ಕ್ಷತ್ರಿಯರು ಅಥವಾ ಆಳುವ ವರ್ಗ
೩. ವೈಶ್ಯರು ಅಥವಾ ವರ್ತಕ ವರ್ಗ
೪. ಶೂದ್ರರು ಅಥವಾ ಕಸುಬುದಾರ ವರ್ಗ

ಮುಂದೆ ಈ ವರ್ಗಗಳ ನಡುವೆ ಸಂಕರಗೊಂಡ ಜನ ಮತ್ತು ಯುದ್ಧದಲ್ಲಿ ಸೆರೆಸಿಕ್ಕವರು ಪಂಚಮರಾದರು, ಅರ್ಥಾತ್ ಅಸ್ಪೃಶ್ಯ ವರ್ಗದವರಾದರು ಎಂದು ಅಂಬೇಡ್ಕರ್ ಹೇಳುತ್ತಾರೆ.

ಜಾತಿ ವ್ಯವಸ್ಥೆಯನ್ನು ಸಿದ್ಧಾಂತಗೊಳಿಸಿ ಅದನ್ನೊಂದು ಧರ್ಮ ಸಂಧಾನವಾಗಿ ರೂಪಿಸಿದವನು ಮನು. ಇವನು ಬರೆದ ಶಾಸ್ತ್ರಗ್ರಂಥವೇ ಮನುಸ್ಮೃತಿ. ಮನುಸ್ಮೃತಿಯು ಅಸಮಾನತೆ ಹಾಗೂ ಅಮಾನವೀಯ ವಿಚಾರಗಳನ್ನು ಪ್ರತಿಪಾದಿಸುತ್ತದೆ ಎಂದು ೨೫.೧೨.೧೯೨೭ರಂದು ಅಂಬೇಡ್ಕರ್ ಅವರು ಅದನ್ನು ಸಾರ್ವಜನಿಕವಾಗಿ ಸುಟ್ಟು ಪ್ರತಿಭಟನೆ ತೋರಿದರು. ವರ್ಣವ್ಯವಸ್ಥೆಯ ವಿರುದ್ಧವಾಗಿ ಈ ನೆಲದಲ್ಲಿ ಸಾಕಷ್ಟು ಹೋರಾಟಗಳು ನಡೆದಿವೆ. ಮಾನವತಾವಾದಿ ಮಹಾಮನಸ್ಸುಗಳು ಇಂಥ ಹೋರಾಟಗಳನ್ನು ನಡೆಸಿದ್ದಾರೆ. ಅದು ಬುದ್ಧದೇವನನ್ನು ಮೊದಲ್ಗೊಂಡು ಅಂಬೇಡ್ಕರ್‌ವರೆಗೆ ನಡೆದ ಹೋರಾಟದ ಮಹಾಗಾಥೆ. ಇದು ಆಯಾ ಹೋರಾಟಗಳ ಮಿತಿಸಾಂದ್ರತೆಗಳನ್ನು ಹೇಳುತ್ತಲೇ ಅವುಗಳ ಸಾಫಲ್ಯ-ವೈಫಲ್ಯಗಳ ಸ್ವರೂಪದಲ್ಲಿ ಈ ವರ್ಣ ವ್ಯವಸ್ಥೆಯ ಹುನ್ನಾರಗಳನ್ನು ಬಯಲುಗೊಳಿಸಿದ ಜೀವನಗಾಥೆಯೇ ಆಗಿದೆ.

**ವಚನ ಚಳುವಳಿ**

ವರ್ಣ ವ್ಯವಸ್ಥೆಯ ವಿರುದ್ಧವಾಗಿ ಎಲ್ಲಾ ಜಾತಿ ಮೂಲದವರು ಒಂದಾಗಿ ತಿರುಗಿಬಿದ್ದು ನಡೆಸಿದ ಹೋರಾಟವೇ ಶರಣ ಚಳುವಳಿ. ಇದು ಕನ್ನಡ ನೆಲದಲ್ಲಿ ಸಂಘಟಿತಗೊಂಡ ಚಳುವಳಿ. ಎಲ್ಲಾ ಶ್ರಮಿಕ ಮೂಲದ ಕಾಯಕ ಜೀವಿಗಳು, ಸಂಘಟಿತರಾಗಿ ನಡೆಸಿದ ಈ ಹೋರಾಟ ವರ್ಣನೀತಿಯ ಎಲ್ಲಾ ಕ್ಷುದ್ರತೆಗಳನ್ನು ವಿರೋಧಿಸಿತು. ಸಮಸಮಾಜದ ಆಶಯವನ್ನು ತನ್ನ ಹೋರಾಟದ ಗರ್ಭದಲ್ಲಿ ಕಾಣಿಸಿತು. ಆದರೆ ಈ ಹೋರಾಟವು ಜಾತಿ ವ್ಯವಸ್ಥೆಯ ಒಳ ಹುನ್ನಾರಗಳಿಗೆ ಬಲಿ ಹೋದದ್ದು ಚಾರಿತ್ರಿಕ ಸತ್ಯ. ಈ ಹೋರಾಟದ ಸಂದರ್ಭದಲ್ಲಿ ವರ್ಣ ವ್ಯವಸ್ಥೆಯ ಎರಡೂ ತುದಿಗಳನ್ನು ಪ್ರತಿನಿಧಿಸುವ ಜಾತಿ ಮೂಲಗಳಿಂದ ಬಂದ ಶರಣರು ಹೇಗೆ ಪ್ರತಿಕ್ರಿಯಿಸಿದ್ದಾರೆ ಎಂಬುದು ಈ ಚಳುವಳಿಯ ಸ್ವರೂಪವನ್ನು ಅರ್ಥಮಾಡಿಕೊಳ್ಳಲು ಬಹುಮುಖ್ಯ ಕ್ರಮವಾಗಿದೆ. ಈ ಪ್ರತಿಕ್ರಿಯೆಯನ್ನು ಬೇರೆ ಆಕರಗಳಿಂದ ಪಡೆಯುವುದಕ್ಕಿಂತ ಶರಣರ ಹೋರಾಟದ ಜೀವಜೀವಾಳಗಳಂತಿರುವ ವಚನಗಳ ಪ್ರಮಾಣುವಿನಲ್ಲೇ ಪರಿಶೀಲಿಸುವುದು ಸೂಕ್ತ ಹಾಗೂ ಸರಿಯಾದ ದಾರಿ.

**ಬಸವಣ್ಣ ಮತ್ತು ಅಸ್ಪೃಶ್ಯತೆ: ಪಾಪಪ್ರಜ್ಞೆ – ಪವಿತ್ರೀಕರಣ**

ವರ್ಣ ವ್ಯವಸ್ಥೆಯಲ್ಲಿ ಶ್ರೇಷ್ಠವೆಂದು ಭ್ರಮಿಸಲ್ಪಟ್ಟಿರುವ ಬ್ರಾಹ್ಮಣ ಮೂಲದಿಂದ ಬಂದ ಬಸವಣ್ಣನಿಗೆ ತನ್ನ ಹುಟ್ಟಿನ ಮೂಲ ಕಷ್ಟದ ಹೊರೆಯಾಗಿ ಕಂಡಿದೆ. 'ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟದ ಹೊರೆಯ ಹೊರಿಸದಿರಯ್ಯಾ' ಎನ್ನುತ್ತಾರೆ ಬಸವಣ್ಣ. ಸಹಸ್ರಾರು ವರ್ಷಗಳಿಂದಲೂ ಶೋಷಣೆಯನ್ನು ದಾರಿಯಾಗಿಸಿಕೊಂಡು ಉದರಂಭರಣ ಮಾಡಿಕೊಂಡು ಬಂದ ಪುರೋಹಿತ ಮೂಲದಿಂದ ಬಂದವರು ಬಸವಣ್ಣ. ತಾನು ಈ ಪಾಪಕಲುಷಿತ ಮೂಲದವನು ಎಂಬ ಅರಿವು ಬಸವಣ್ಣನಿಗೆ ಭರಿಸಲಾಗದ

ಪಾಪಪ್ರಜ್ಞೆಯಾಗಿ ಕಾಡಿದೆ. ವರ್ಣಮೂಲದ ಸಾಮೂಹಿಕ ಪಾಪವನ್ನು ವೈಯಕ್ತಿಕ ನೆಲೆಯಲ್ಲಿ ಭರಿಸಿದಂತೆ ಪಾಪಪ್ರಜ್ಞೆಯಲ್ಲಿ ನರಳಿ ತನ್ನನ್ನು ಅದರಿಂದ ಬಿಡುಗಡೆಗೊಳಿಸಿಕೊಳ್ಳಲು ಬಸವಣ್ಣ ತುಳಿದ ದಾರಿ ಅಪವರ್ಣೀಕರಣ. ಇದುವರೆಗೂ ಯಾವುದನ್ನು ನೀಚವೆಂದು ಕನಿಷ್ಠವೆಂದು ಕರೆಯಲ್ಪಟ್ಟಿತ್ತೋ ಅಂಥ ಮೂಲವನ್ನು ಪವಿತ್ರವೆಂದು ಪರಿಗಣಿಸಿದ್ದು, ಆ ಮೂಲದಲ್ಲಿ ತನ್ನ ಹುಟ್ಟನ್ನು ಗುರುತಿಸಿಕೊಂಡದ್ದು ಬಸವಣ್ಣನ ಬಹುದೊಡ್ಡ ನಡೆಯಾಗಿದೆ. ಶರಣ ಚಳುವಳಿಯ ಚಲನೆಯನ್ನು ನಿರ್ದೇಶಿಸುವ ದಾರಿದೀಪವಾಗಿದೆ.

ಚನ್ನಯ್ಯನ ಮನೆಯ ದಾಸನ ಮಗನು
ಕಕ್ಕಯ್ಯನ ಮನೆಯ ದಾಸಿಯ ಮಗಳು
ಇವರಿಬ್ಬರೂ ಹೊಲದಲು ಬೆರಣಿಗೆ ಹೋಗಿ
ಸಂಗವ ಮಾಡಿದರು
ಇವರಿಬ್ಬರಿಗೆ ಹುಟ್ಟಿದ ಮಗ ನಾನು
ಕೂಡಲಸಂಗಮದೇವ ಸಾಕ್ಷಿಯಾಗಿ.

– ಈ ವಚನದಲ್ಲಿ ಪ್ರತೀತಗೊಳ್ಳುವ ಪ್ರತಿಯೊಂದು ಕ್ರಿಯೆಯೂ ವರ್ಣ ನೀತಿಯ ಪ್ರಕಾರ ಅಕ್ರಮದಿಂದ ಕೂಡಿದ್ದು, ಅನೀತಿಯ ಮಾರ್ಗ ತುಳಿದದ್ದು. ಆದರೆ ಮಾನವೀಯ ನೆಲೆಗಟ್ಟಿನಲ್ಲಿ ನಿಂತು ಪರಾಮರ್ಶಿಸಿದಾಗ ಇಲ್ಲಿನ ಪ್ರತಿಯೊಂದು ನಡೆಯೂ ನಿಸರ್ಗ ಧರ್ಮಕ್ಕೆ ಹೊಂದಿಕೊಂಡದ್ದು. ಮನುಷ್ಯಸಹಜ ಪ್ರೀತಿಯಲ್ಲಿ ಅರಳಿದ್ದು. ವಿಶ್ವಾತ್ಮಕ ಪ್ರೇಮದಲ್ಲಿ ದೇಹವಾಂಛೆಯನ್ನು ಗೌರವಿಸಿದ್ದು. ಕಾಯ, ಕಾಯಕ, ಕಾಮಸಂಗ, ಇವುಗಳು ಸಂಲಗ್ನಗೊಂಡ ಪರಿಕ್ರಮದಲ್ಲಿ ಹುಟ್ಟನ್ನೇ ಪವಿತ್ರೀಕರಿಸುತ್ತಿರುವುದು. ಗಂಡು ಹೆಣ್ಣುಗಳ ಸಂಬಂಧವನ್ನು ಜಡ ವರ್ಣ ವ್ಯವಸ್ಥೆ ಅರ್ಥೈಸುವ ಕ್ರಮವನ್ನು ತಿರಸ್ಕರಿಸಿದ, ಸಮಾಜದ ರೂಢಿಗತ ಕಟ್ಟುಪಾಡುಗಳನ್ನು ಧಿಕ್ಕರಿಸಿದ ಈ ನಡೆ ವಿಶ್ವಮಾನ್ಯ ಗೌರವಕ್ಕೆ ಭಾಜನವಾದ ಪರಿಕ್ರಮವಾಗಿದೆ. ವಿಶೇಷವೆಂದರೆ, ಕೀಳರಿಮೆಯಲ್ಲಿ ಬಳಲುವ ವರ್ಣಮೂಲದವರ ಆತ್ಮಗೌರವವನ್ನು ಮನ್ನಿಸಿದ ನಡೆಯಾಗಿದೆ. ನೈತಿಕತೆ, ಚಾರಿತ್ರ್ಯ ಇಂಥ ಪರಿಕಲ್ಪನೆಗಳಿಗೆ ಪುರೋಹಿತಶಾಹಿಯು ಕೊಟ್ಟಿದ್ದ ತಿರೋಗಾಮಿ ಅರ್ಥವನ್ನು ಧಿಕ್ಕರಿಸಿ ಹೊಸ ಬಗೆಯ ಅರ್ಥತೇಜಸ್ಸನ್ನು ನೀಡಿದ ಪುರೋಗಾಮಿ ಬೆಳವಣಿಗೆಯಾಗಿದೆ. ಇಲ್ಲಿ ಪಾಪಪ್ರಜ್ಞೆಯನ್ನು ನೀಗಿಕೊಳ್ಳುವ ಹಾಗೂ ಪಶ್ಚಾತ್ತಾಪದಲ್ಲಿ ಪವಿತ್ರೀಕರಿಸಿಕೊಳ್ಳುವ ಪರಸ್ಪರಾವಲಂಬಿ ಗುಣವಿದೆ. ಇದು ಆತ್ಮವಿಮರ್ಶೆಯ ಮಾರ್ಗ. ಆತ್ಮವಿಮರ್ಶೆಯೆಂಬುದು ವ್ಯಕ್ತಿನಿಷ್ಠ ನೆಲೆಯಲ್ಲಿ ಮೂಡಿದ್ದಾದರೂ ಸಮುದಾಯ ವ್ಯಾಪ್ತಿಯ ಪಾಪಪ್ರಜ್ಞೆಯಲ್ಲಿ ನರಳಿದ್ದು. ಜಾತಿಯ ಶ್ರೇಣೀಕರಣದಲ್ಲಿ ಶ್ರೇಷ್ಠತೆಯ ಭ್ರಾಮಕತೆಯಲ್ಲಿ ಬೀಗುತ್ತಿರುವ ಎಲ್ಲ ಮೇಲುಜಾತಿಯ ಮನಸ್ಸುಗಳೂ ಈ ಬಗೆಯ ಬಸವಪ್ರಜ್ಞೆಯಲ್ಲಿ ನಡೆದುಕೊಳ್ಳಬೇಕಾದ ಅಗತ್ಯವಿದೆ. ಬಸವಣ್ಣನವರು ಮುಂದುವರಿದು ಈ ಅಪವರ್ಣೀಕರಣವನ್ನು ಬಳಗ ಪ್ರಜ್ಞೆಯ ಭಾವದಲ್ಲಿ ವಿಸ್ತರಿಸುತ್ತಾರೆ :

ಹರನು ಮೂಲಿಗನಾಗಿ, ಪುರಾತರೊಳಗಾಗಿ
ಬಳಿಬಳಿಯಲು ಬಂದ ಮಾದಾರನ ಮಗ ನಾನಯ್ಯ
ಕಳೆದ ಹೊಲೆಯನೆಮ್ಮಯ್ಯ, ಜಾತಿಸೂತಕ
ಮಾದಾರನ ಮಗ ನಾನಯ್ಯ
ಪನ್ನಗಭೂಷಣ ಕೂಡಲಸಂಗಯ್ಯ
ಚೆನ್ನಯ್ಯನೆನ್ನ ಮುತ್ತಯ್ಯ ನಜ್ಜನಪ್ಪಯ್ಯ.

ಅಪ್ಪನು ನಮ್ಮ ಮಾದಾರ ಚೆನ್ನಯ್ಯ
ಬೊಪ್ಪನು ನಮ್ಮ ಡೋಹರ ಕಕ್ಕಯ್ಯ
ಚಿಕ್ಕಯ್ಯನೆಮ್ಮಯ್ಯ ಕಾಣಯ್ಯ
ಅಣ್ಣನು ನಮ್ಮ ಕಿನ್ನರಿ ಬೊಮ್ಮಯ್ಯ
ಎನ್ನನೇತಕ್ಕರಿಯಿರಿ ಕೂಡಲ ಸಂಗಯ್ಯ.

ಹಿರಿಯಯ್ಯ ಶ್ವಪಚಯ್ಯ
ಕಿರಿಯಯ್ಯ ಡೋಹರ ಕಕ್ಕಯ್ಯ
ಅಯ್ಯಗಳಯ್ಯ ನಮ್ಮ ಮಾದಾರ ಚೆನ್ನಯ್ಯ
ಕೂಡಲಸಂಗಮದೇವಾ ನಿಮ್ಮ ಶರಣರು
ಎನ್ನ ಸಲಹುವರಾಗಿ

– ಹೀಗೆ ಅಸ್ಪೃಶ್ಯ ಮೂಲದ ಶರಣರ ಬಳಗ ಸಾಲಿನಲ್ಲಿ ತನ್ನ ಬಂಧುತ್ವವನ್ನು ಗುರುತಿಸಿಕೊಳ್ಳುವ ಮೂಲಕ ಪವಿತ್ರೀಕರಿಸಿಕೊಳ್ಳುವ ಬಸವಣ್ಣನವರ ಈ ನಡೆ ಜಾತಿ ವ್ಯವಸ್ಥೆಯ ಶಾಪಗ್ರಸ್ತ ಸಮಾಜದಲ್ಲಿ ಶ್ರೇಷ್ಠತೆಯ ಮೂಲದ ಎಲ್ಲಾ ಮನಸ್ಸುಗಳೂ ಅನುಸರಿಸಬೇಕಾದ ಮಾದರಿ ನಡೆ. ಬಸವಣ್ಣನವರ ನೈತಿಕಪ್ರಜ್ಞೆ ಎಷ್ಟು ಸೂಕ್ಷ್ಮವಾಗಿ ಹರಿದಿದೆ ಎಂದರೆ ತನ್ನನ್ನು ನಿಷ್ಠುರ ಆತ್ಮವಿಮರ್ಶೆಗೆ ಗುರಿಪಡಿಸಿಕೊಳ್ಳುತ್ತಲೇ ತನ್ನ ಒಳಗೊಳ್ಳುವಿಕೆಯಲ್ಲಿನ ನೈತಿಕ ಅಧಿಕಾರವನ್ನು ಮರುವಿಮರ್ಶೆಗೆ ಒಳಗುಮಾಡಿಕೊಳ್ಳುತ್ತಿದೆ. ಅಸ್ಪೃಶ್ಯಲೋಕದಿಂದ ಬಂದು ಲಿಂಗವಂತರಾದವರೆಲ್ಲರ ಶರಣತ್ವದ ನೈತಿಕತೆ ಪ್ರಶ್ನಾತೀತವಾದದ್ದು. ಅವಮಾನ ಮೂಲದಲ್ಲಿ ತುಳಿತಕ್ಕೊಳಗಾದ ಆ ಕಾಯಕಜೀವಿಗಳ ಸಮಷ್ಟಿ ಮತ್ತು ವ್ಯಷ್ಟಿ ಎರಡೂ ನೈತಿಕ ಅಧಿಕಾರದಲ್ಲಿ ಒಂದಾಗಿರುವಂಥದ್ದು. ಆದರೆ ಹುಟ್ಟಿನಿಂದಲೇ ಪಾಪಪ್ರಜ್ಞೆಯ ಹೊರೆಯನ್ನು ಹೊತ್ತುಬಂದಿರುವ ತನ್ನ, ತನ್ನಂಥವರ ಪಾಪ ಸುಲಭದಲ್ಲಿ ತೊಳೆದು ಕಳೆಯುವ

## ಬೆಳಕಾಗು ಸೂರ್ಯ

ನಾವು ಕತ್ತಲೆಯಲ್ಲಿದ್ದೇವೆ
ನಮಗೆ ಬೆಳಕಾಗು ಸೂರ್ಯ

ನಾವು ಕತ್ತಲಲ್ಲಿ ಇರಲಿಕ್ಕೆ
ಗುಡ್ಡಗಾಡಿನ ಗುಹೆಗಳಲ್ಲಿಲ್ಲ
ದಟ್ಟ ಕಾಡಿನ ಅರಣ್ಯದಲ್ಲಿಲ್ಲ
ಪಿಸುಮಾತು ಹೊರಡಿಸದ
ಪಾಳು ಅರಮನೆಯಲ್ಲಿಲ್ಲ

ತುತ್ತು ಕೂಳಿಗೆ, ತುಂಡು ಬಟ್ಟೆಯ ಸಲುವಾಗಿ
ಭದ್ರತೆ ಇಲ್ಲದೆ ಬಟ್ಟ ಬಯಲಿನಲಿ
ಕುತ್ತಿಗೆ ಕೊಯ್ಯುವವರಿಗೆ ಕೊರಳನು
ಕೊಟ್ಟು ಕುರಿಗಳಾಗಿ ನಿಂತಿದ್ದೇವೆ.

ಗಗನ ಚುಂಬಿ ಕಟ್ಟಡಗಳನ್ನು
ಹೊತ್ತುಕೊಂಡು ನಿಂತವರು ನಾವೆ ?
ಗಣಿಗಳು ಹೊರಸೂಸುವ ಧೂಳಿನಲ್ಲಿ
ಧೂಳಾದವರು ನಾವೆ ?
ಕಾರ್ಖಾನೆಗಳು ಹೊರಚೆಲ್ಲುವ ವಿಷವನ್ನು
ಕುಡಿಯುತ ಹೊಗೆಯಲಿ ಬೆಂದವರು ನಾವೆ ?
ಹಳ್ಳ, ಕೊಳ್ಳ, ನದಿ, ಸಮುದ್ರಗಳಿಗೆ
ಸೇತುವೆಗಳನ್ನು ಕಟ್ಟಿದವರು ನಾವೆ ?

ಶತಶತಮಾನಗಳಿಂದ
ಕಗ್ಗತ್ತಲೆಯಲ್ಲಿದ್ದ ನಮ್ಮನ್ನು
ಗುರುತಿಸು ಸೂರ್ಯ
ಉಳಿದವರಂತೆ ಬೆಂಕಿಯಾಗಬೇಡ
ಇನ್ನಾದರು ನಮ್ಮ ಪಾಲಿಗೆ
ಬೆಳಕಾಗು ಸೂರ್ಯ

**ಈಶ್ವರಪ್ಪ ಕಟ್ಟಿಮನಿ**
ಮನೆ ನಂ. ೪೮, ಸಾಯಿರಾಮನಗರ
ರಾಘವೇಂದ್ರ ಲೇಔಟ
ಹಳೇ ಆಕಾಶವಾಣಿ ವಿತರಣಾ ಕೇಂದ್ರ ಹಿಂದುಗಡೆ
ಜೇವರ್ಗಿ ರಸ್ತೆ, ಕಲಬುರ್ಗಿ



ಪಾಪವಲ್ಲ, ಅದು ಶತಮಾನಗಳಿಂದ ಸಂಚಯಿತಗೊಂಡು ಜಡವಾಗಿರುವುದು. ಅದು ವಂಚಿತ ಸಮುದಾಯಗಳ ನಿಟ್ಟುಸಿರಲ್ಲಿ ಬದುಕು ಕಟ್ಟಿಕೊಂಡದ್ದು. ಅಂಥ ವರ್ಣ ಮೂಲದವನಾದ ತಾನು ಈ ಲಿಂಗವಂತರ ನಡುವೆ ಹೊರಗಿನವನು ಎಂಬ ಭಾವ ಬಸವಣ್ಣನವರನ್ನು ಕಾಡಿದೆ.

*ಲಿಂಗಾರ್ಚನೆ ಮಾಡುವ ಮಹಿಮರೆಲ್ಲರೂ*
*ಸಲಿಗೆವಂತರಾಗಿ ಒಳಗೈದಾರೆ*
*ಆನುದೇವಾ ಹೊರಗಣವನು*
*ಸಂಬೋಳಿ ಸಂಬೋಳಿ ಎನ್ನುತ್ತಾ ಇಂಬಿನಲ್ಲಿ ಇದ್ದೇನೆ*
*ಕೂಡಲಸಂಗಮದೇವಾ*
*ನಿಮ್ಮ ನಾಮವಿಡಿದ ಅನಾಮಿಕ ನಾನು.*

– ಇಲ್ಲಿ ಬಳಕೆಯಾಗಿರುವ ಸಂಬೋಳಿ ಮತ್ತು ಅನಾಮಿಕ ಶಬ್ದಗಳು ವರ್ಣ ವ್ಯವಸ್ಥೆಯಲ್ಲಿ ಅಸ್ಪೃಶ್ಯರನ್ನು ನಡೆಸಿಕೊಳ್ಳುತ್ತಿದ್ದ ಹೀನ ದೀನ ಗತಿಯನ್ನು ಸೂಚಿಸುತ್ತಿರುವ ಶಬ್ದಗಳು. ಬೀದಿಗಳಲ್ಲಿ ಸಂಚರಿಸುವಾಗ ಅಸ್ಪೃಶ್ಯನ ನೆರಳು ಸವರ್ಣೀಯರಿಗೆ ತಾಕದಿರಲಿ ಎಂಬ ಎಚ್ಚರಿಕೆಗೆ ಹೆಜ್ಜೆ ಹೆಜ್ಜೆಗೂ ಸಂಬೋಳಿ ಶಬ್ದವನ್ನು ಅಸ್ಪೃಶ್ಯನಾದವನು ಕೂಗಿ ಕೂಗಿ ಹೇಳಬೇಕಾಗಿದ್ದ ಸ್ಥಿತಿ ಅದು. ಅವನು ನಾಮಮಾತ್ರದಲ್ಲಿಯೂ ಗುರುತಿಸಿಕೊಳ್ಳಲು ಅರ್ಹನಲ್ಲದ ಅನಾಮಿಕ. ಇಂಥ ಈ ಶಬ್ದಗಳನ್ನು ಬಸವಣ್ಣ ತನ್ನ ಹೊರಗಣ ಸ್ಥಿತಿಗೆ ಅನ್ವಯಿಸಿಕೊಳ್ಳುವಾಗ ಮೌಲ್ಯ ಪಲ್ಲಟಗೊಂಡು ಪವಿತ್ರೀಕರಿಸಿದ ಭಾವದಲ್ಲಿ ಬಳಸುತ್ತಿದ್ದಾರೆ. ಸಮಸಮಾಜ ನಿರ್ಮಾಣ ಸಂದರ್ಭದಲ್ಲಿ ಬಳಕೆಯಾಗುವ ಸಾಂಸ್ಕೃತಿಕ ಪರಿಭಾಷೆಗಳ ನಿರ್ಮಾಣಕಾರ್ಯವು ಎಚ್ಚರದ ಗತಿಯಲ್ಲಿ ಆಗಬೇಕಾಗಿರುವ ಜವಾಬ್ದಾರಿ ಆಗಿರುತ್ತದೆ. ಬಸವಣ್ಣನವರು ಈ ಜವಾಬ್ದಾರಿಯನ್ನು ಎರಡು ನೆಲೆಗಳಿಗೆ ವಿಸ್ತರಿಸಿಕೊಂಡಂತೆ ನಿರ್ವಹಿಸಿದ್ದಾರೆ. ಒಂದು : ತಾವು ರೂಪಿಸುತ್ತಿರುವ ಧರ್ಮವನ್ನು ನಿರ್ವಚಿಸಲು ಅದರದೇ ಆದ ಅರ್ಥ ವಿಶೇಷತೆಗಳನ್ನು ಒಳಗೊಂಡ ಹೊಸ ಪರಿಭಾಷೆಗಳ ನಿರ್ಮಾಣ. ಎರಡು : ಈಗಾಗಲೇ ಇರುವ ರೂಢಿಗೆ ಬಿದ್ದ ಧಾರ್ಮಿಕ ಪರಿಭಾಷೆಗಳಲ್ಲಿರುವ ಹಳೆಯ ಅರ್ಥವನ್ನು ತಿರಸ್ಕರಿಸಿ ಅವುಗಳಿಗೆ ಹೊಸ ಅರ್ಥವನ್ನು ನೀಡಿ ಮೌಲ್ಯ ಪಲ್ಲಟಗೊಳಿಸುವುದು. ಅರ್ಥಾತ್ ಮಾಲಿನ್ಯದ ಸಂಕೇತಗಳಾಗಿ ಬಳಕೆಯಾಗುತ್ತಿದ್ದ ಶಬ್ದಗಳನ್ನು ನೈತಿಕ ಮೌಲ್ಯದಲ್ಲಿ ಮೇಲೆತ್ತಿ ಪವಿತ್ರೀಕರಿಸುವುದು. ಬಸವಣ್ಣನವರ ವಚನಗಳಲ್ಲಿ ಈ ಬಗೆಯ ಪ್ರಯೋಗಗಳು ತಾತ್ವಿಕ ಬದ್ಧತೆಯಾಗಿ ನಡೆದಿವೆ. ಈ ಕ್ರಿಯೆ ಕೇವಲ ಭಾಷಿಕ ನೆಲೆಯಲ್ಲಿ ಆದ ಬದಲಾವಣೆ ಅಲ್ಲ, ಅದು ಬದುಕಿನ ಅಂತರಂಗವನ್ನು ಶೋಧಿಸಿಕೊಂಡಂತೆ ಆದ ಪ್ರಕ್ರಿಯೆ. ಹೀಗಾಗಿಯೇ ಬಸವಣ್ಣನವರ ವಚನಗಳನ್ನು ಓದುತ್ತಿದ್ದರೆ ಅವರ ಹೋರಾಟ ಸಮಾಜಮುಖಿಯಾಗಿರುವಷ್ಟೇ ತೀವ್ರಗತಿಯಲ್ಲಿ ಸ್ವಾನುಮುಖಿಯಾಗಿಯೂ ನಡೆದಿದೆ. ಗಾಂಧೀಜಿಯವರು ಸತ್ಯಾಗ್ರಹ, ಅಹಿಂಸೆ, ಉಪವಾಸಗಳಿಗೆ ನೀಡಿದ ಅರ್ಥ ಗಾಂಭೀರ್ಯ ಕೇವಲ ಶಬ್ದಕ್ಕಿರುವ ಸಾಂಕೇತಿಕ ಅರ್ಥದಲ್ಲಿ ಪ್ರತೀತಗೊಳ್ಳುವ ಕ್ರಿಯೆಯಾಗಿ ಬಂದಿದ್ದಲ್ಲ, ಗಾಂಧೀಜಿಯವರ ಬದುಕಿನ ಗರ್ಭದಿಂದ ರಕ್ತಮಾಂಸದ ಜೀವ ಚೇತನವಾಗಿ ಧಾರಣೆಗೊಂಡವು. ಹಾಗಾಗಿಯೇ ಗಾಂಧೀಜಿಯವರಿಗೂ ಈ ಶಬ್ದಗಳಿಗೂ ಇರುವ ಸಂಬಂಧ ಅವಿನಾಭಾವಿಯಾದುದು. ಬಸವಣ್ಣನವರ ಸಂದರ್ಭಕ್ಕೂ ಇದು ಅನ್ವಯಿಸುವ ಮಾತೇ ಆಗಿದೆ. ಗಾಂಧೀಜಿಯವರಿಗಿಂತ ಒಂದು ಹೆಜ್ಜೆ ಮುಂದೆ ನಡೆದ ಅಪವರ್ಣೀಕರಣದ ನಡೆ ಬಸವಣ್ಣನವರ ನಡೆ. ಪುನರ್ಜನ್ಮವೆಂಬುದಿದ್ದು ನಾನು ಮುಂದೆ ಜನ್ಮತಳೆಯುವುದಾದರೆ ಒಬ್ಬ ಅಸ್ಪೃಶ್ಯನಾಗಿ ಹುಟ್ಟಬಯಸುತ್ತೇನೆ ಎಂದು ಗಾಂಧೀಜಿ ಹೇಳಿದರೆ ಇದೇ ಜನ್ಮದಲ್ಲಿಯೇ ತನ್ನ ಹುಟ್ಟನ್ನು ಅಸ್ಪೃಶ್ಯ ಮೂಲದಲ್ಲಿ ಗುರುತಿಸಿಕೊಂಡದ್ದು ಹಾಗೂ ಆ ಭಾವದಲ್ಲಿ ಪವಿತ್ರೀಕರಿಸಿಕೊಂಡದ್ದು ಬಸವಣ್ಣನವರ ವಿಶೇಷ. ಮುಂದಿನ ಜನ್ಮಕ್ಕೂ ಕಾಯದ ಈ ನಡೆಯಲ್ಲಿ ಒಂದು ಸಮುದಾಯವನ್ನು ಅದರ ನೈತಿಕ ಶುದ್ಧತೆಯ ಭಾವಮೂಲದಲ್ಲಿ ಗುರುತಿಸಿ ಗೌರವಿಸಿದ ಸತ್ಯಶುದ್ಧ ದೃಷ್ಟಿಯಿದೆ. ಮನುಷ್ಯನ ಘನತೆಯನ್ನು ಎತ್ತಿ ಹಿಡಿದ ಹಿರಿತನವಿದೆ. ಆದರೆ ಜಾತಿಸೂಚಕ ಶಬ್ದಗಳನ್ನು ಬಳಕೆ ಮಾಡುವಾಗ ರೂಢಿಗತವಾದ ಅರ್ಥಮಾಲಿನ್ಯವನ್ನು ತಿರಸ್ಕರಿಸುವುದಿಲ್ಲ. ಬದಲಾಗಿ ಆ ಹೀನಾರ್ಥವನ್ನು ಮನುಷ್ಯನ ಅವಗುಣಗಳಿಗೆ ಅನ್ವಯಿಸಿ ಬಳಕೆಯ ನೆಲೆಯನ್ನು ಸ್ಥಾನಪಲ್ಲಟಗೊಳಿಸುತ್ತಾರೆ. ಇದು ಹಲವು ಕಡೆ ಆಗಿರುವ ಪ್ರಯೋಗ. ಈ ಅಂಶವನ್ನು ಮುಂದೆ ಚರ್ಚೆಗೆ ತೆಗೆದುಕೊಳ್ಳುತ್ತೇನೆ.

**ಅಸ್ಪೃಶ್ಯ ಮೂಲದ ಶರಣರು ಹಾಗೂ ಅವರ ಚಿಂತನೆಗಳು : ಜಾತಿನಿಂದೆ – ನೈತಿಕ ಎಚ್ಚರ – ಆತ್ಮಪ್ರತ್ಯಯ**

ಜಾತಿವ್ಯವಸ್ಥೆಯಲ್ಲಿ ಮೇಲಿನ ಸವರ್ಣೀಯ ಸಮುದಾಯಗಳು ಪಾಪಪ್ರಜ್ಞೆಯಿಂದ ಪಶ್ಚಾತ್ತಾಪಕ್ಕೆ ಒಳಗಾಗಬೇಕಾದ ಅಗತ್ಯವಿದ್ದರೆ ಕೆಳಗಿನ ಅವಮಾನಿತ ಮೂಲದ ಸಮುದಾಯಗಳು ನೈತಿಕ ಹಕ್ಕಿನಿಂದ ಸಂಘಟಿತರಾಗಬೇಕಾದ ಅಗತ್ಯವಿದೆ. ಸ್ವಾಭಿಮಾನದಿಂದ ಮುನ್ನಡೆಯಬೇಕಾದ ನೈತಿಕ ಅಧಿಕಾರವಿದೆ. ಮೇಲಿನ ಸಮುದಾಯದ ಮನಸ್ಸುಗಳು ಮೇಲರಿಮೆಯ ಶ್ರೇಷ್ಠತೆಯ ಅಹಂಕಾರ ಪ್ರಜ್ಞೆಯನ್ನು ಕಳೆದುಕೊಳ್ಳಬೇಕು. ಅವಮಾನಿತ ಸಮುದಾಯಗಳು ಕೀಳರಿಮೆಯ ದೈನೇಸಿ ಭಾವದಿಂದ ಬಿಡುಗಡೆ ಹೊಂದಬೇಕು. ತಮ್ಮ ಹೀನಸ್ಥಿತಿಗೆ ಕಾರಣ ಮೂಲಗಳನ್ನು ಕಂಡುಕೊಳ್ಳುತ್ತಾ ಆ ಅಂಥ ಅನಿಷ್ಟ ಅಡೆತಡೆಗಳನ್ನು ಕೆಡವಿ ನಾಶಪಡಿಸಬೇಕು. ಜಾತಿ ಹೆಸರಿಡಿದು ನಿಂದಿಸುವವರನ್ನು ತರಾಟೆಗೆ ತೆಗೆದುಕೊಳ್ಳುವುದರಿಂದ ಹಿಡಿದು ಅಸ್ಪೃಶ್ಯತೆಯನ್ನು ಆಚರಿಸುವ ಎಲ್ಲವನ್ನೂ ತಿರಸ್ಕರಿಸುತ್ತಾ ಪ್ರತಿಭಟಿಸುತ್ತಾ ಆತ್ಮಪ್ರತ್ಯಯವನ್ನು ಮೆರೆಯುವ ಅಗತ್ಯವಿರುತ್ತದೆ. ಕಾರಣ ಶ್ರಮ ಮೂಲದಲ್ಲಿ ಬದುಕನ್ನು ಕಟ್ಟಿದ, ಇತರರಿಗಾಗಿ ಬದುಕಿನುದ್ದಕ್ಕೂ ದೇಹ ಸವೆಸಿದ ಈ ಸಮುದಾಯಗಳು ಈ ಭೂಮಿಯಲ್ಲಿ ಪಂಚಭೂತಗಳಿಗೆ ವಂಚನೆ ಎಸಗಿದಂತೆ ಬಾಳಿದ ಸಮುದಾಯಗಳಲ್ಲ, ಪರರ ಬೆವರಿನ ಗಳಿಕೆಯಲ್ಲಿ ಉದರಂಭರಣ ಮಾಡಿದ ಬಾಳುಗೇಡಿಗಳಲ್ಲ, ಹೀಗಾಗಿ ಇವರಿಗೆ ಪ್ರಶ್ನಿಸಲು ನೈತಿಕ ಅಧಿಕಾರವಿದೆ. ಸಂಘಟಿತರಾಗಲು ನೈತಿಕ ಹಕ್ಕಿದೆ. ಹೋರಾಡಲು ಬದುಕಿನ ಸ್ಥಿತಿ ಬೆಂಬಲವಾಗಿದೆ. ಏಕೆಂದರೆ ಇವರ ಹೋರಾಟ ಅನ್ಯಾಯದ ವಿರುದ್ಧವಾದದ್ದು, ಜನಪರವಾದದ್ದು, ಸ್ವಾರ್ಥ ಮೂಲದ್ದಲ್ಲ, ನಿಸ್ವಾರ್ಥ ನೆಲೆಯದ್ದು, ಸ್ವಾತಂತ್ರ್ಯದ ಹಾದಿಯಲ್ಲಿ ಸಮಸಮಾಜದ ಹಕ್ಕಿಗಾಗಿ ನಡೆಯುವಂಥದ್ದು. ಆದ್ದರಿಂದಲೇ ಎಚ್ಚೆತ್ತ ಮನಸ್ಸುಗಳು ಮಾಡುವ ಹೋರಾಟ ಇದಾಗಿರುತ್ತದೆ. ಇದು ಕಾದಾಟವಲ್ಲ, ಹೋರಾಟ. ಕಾದಾಟ ಸ್ವಾರ್ಥದಿಂದ ಸ್ವಂತಕ್ಕಾಗಿ ಎಂಬ ಮಿತಿಯಲ್ಲಿ ನಡೆಸುವ ಜಗಳ. ಹಿಂಸಾ ಪ್ರಧಾನವಾದದ್ದು. ಆದರೆ ಹೋರಾಟ ನಿಸ್ವಾರ್ಥದಿಂದ ಜನರಿಗಾಗಿ, ಜನರಿಗೋಸ್ಕರ – ಎಂಬ ಉದಾತ್ತಗುರಿಯಿಂದ ಕೂಡಿದ್ದು. ಸಹಜವಾಗಿ ಇವರು ಬಳಸುವ ಶಬ್ದಗಳಲ್ಲಿ, ಪರಿಭಾಷೆಗಳಲ್ಲಿ ಸ್ವಾಭಿಮಾನದ ಎಚ್ಚೆತ್ತ ನೆಲೆಯ ನಿಶ್ಚಿತ ಗುಣ ಇರುತ್ತದೆ. ಉದಾಹರಣೆಗೆ, ಜಾತಿ ಹೆಸರಿನಲ್ಲಿ ನಿಂದಿಸುವವರನ್ನು ಕುರಿತು ಅಂಬಿಗರ ಚೌಡಯ್ಯ :

*ಅಂಬಿಗ ಅಂಬಿಗ ಎಂದು ಕುಂದು ನುಡಿಯದಿರು*
*ನಂಬಿದರೆ ಒಂದೇ ಹುಟ್ಟಲಿ*
*ಕಡೆಯ ಹಾಯಿಸುವ ನಂಬಿಗ ಚೌಡಯ್ಯ*

– ಎನ್ನುತ್ತಾನೆ. 'ಅಂಬಿಗ' ಎಂಬ ಜಾತಿ ಸೂಚಕ ಶಬ್ದ ವೃತ್ತಿ ಸೂಚಕ ಪದವೂ ಹೌದು. ತನ್ನ ಕಾಯಕದಲ್ಲಿನ ಶ್ರದ್ಧೆನಿಷ್ಠೆಗಳ ಪರಿಣಾಮದಲ್ಲಿ ಸ್ವಾಭಿಮಾನಶೀಲ ಗುಣಭರಿತ ಅಂಬಿಗ ಚೌಡಯ್ಯ. ಆದ್ದರಿಂದಲೇ ತನ್ನ ಕಾಯಕದ ಬಗ್ಗೆ ಅವನಿಗೆ ಹೆಗ್ಗಳಿಕೆ ಇದೆ. ತನ್ನ ಪರಿಣತಿಯ ಬಗ್ಗೆ ಹೆಮ್ಮೆಯಿದೆ. ಕಾಯಕವೇ ಕೈಲಾಸವೆಂಬ ಭಾವದ ಸತ್ಯಶುದ್ಧ ಕಾಯಕಜೀವಿಗೆ ತನ್ನ ಕಾಯಕದ ಬಗ್ಗೆ ಅವಮಾನವಿಲ್ಲ; ಅಭಿಮಾನವಿದೆ. ಸಹಜವಾಗಿ ಅಂಬಿಗ ಎನ್ನುವ ಪದದ ಜಾತಿಸೂಚಕ ಹೀನಾರ್ಥವನ್ನು ತಿರಸ್ಕರಿಸಿ ನಂಬಿಗೆಯ ಅಂಬಿಗ ಎಂಬ ಅನುಭಾವಿಕ ನೆಲೆಯ ನೈತಿಕಾರ್ಥವನ್ನು ಎತ್ತಿ ಹೇಳುತ್ತಾನೆ. ಅದೇ ರೀತಿಯಲ್ಲಿ ಬದುಕಿನಲ್ಲಿ ಇಬ್ಬಂದಿ ಬುದ್ಧಿ ತೋರುವವರನ್ನು, ವಂಚನೆ ಮಾಡುವವರನ್ನು, ಶೋಷಣೆ ಮಾಡುವವರನ್ನು ನಿಷ್ಠುರವಾಗಿ ಹಂಗಿಸುವ, ಭಂಗಿಸುವ ಪದ ಪರಿಭಾಷೆಗಳ ಬಳಕೆ ಇವನ ಪ್ರಯೋಗಗಳಲ್ಲಿ ಹೇರಳವಾಗಿ ನಡೆಯುತ್ತದೆ. ಹೀಗೆ ಬಳಸಲೇಬೇಕಾದ ಸ್ಥಿತಿ ಸಂದರ್ಭವಶದಲ್ಲಿಯೇ ನಿರ್ಮಾಣಗೊಂಡ ಒತ್ತಡದ ಪರಿಣಾಮ ಎಂಬುದನ್ನು ಮರೆಯಬಾರದು. ಇದಕ್ಕೆ ಇನ್ನೊಂದು ಉದಾಹರಣೆ ಬಾಚಿ ಕಾಯಕದ ಬಸವಣ್ಣ. ಈತನು ಮೂಲತಃ ಬಡಗಿ. ಇವನು ತನ್ನ ಒಂದು ವಚನದಲ್ಲಿ:

*ಆಶೆಯರತ ಬಾಚಿಯಲ್ಲಿ ಭವಪಾಶವಿಲ್ಲದ*
*ಜಂಗಮವ ಕೆತ್ತುತ್ತ*
*ರೋಷವಿಲ್ಲದ ಉಳಿಯಲ್ಲಿ ನಿಜವಾಸವ ನೋಡಿ*
*ಹುಗಿಲುದೆಗೆವುತ್ತ*
*ಭಾಷೆಗೆ ಊಣಯವಿಲ್ಲದ ಸದ್ಭಕ್ತರ ಆಶ್ರಯಕ್ಕೆ*
*ನಿಜವಾಸವ ಮಾಡುವ ಕಾಯಕ*
*ಈ ಗುಣ ಬಾಚಿಯ ಬಸವಣ್ಣನ ನೇಮ*

*ಆರು ದರುಶನವೆಲ್ಲ ಎನ್ನ ಬಾಚಿಯ ಕಲೆ*
*ಮಿಕ್ಕಾದ ಮೀರಿದ ಅವಧೂತರುಗಳೆಲ್ಲ*
*ಎನ್ನ ಉಳಿಯೊಳಗಣ ಒಡಪು*
*ಇಂತಿವ ಮೀರಿ ವೇಧಿಸಿ ಭೇದಿಸಿಹೆನೆಂಬುವರೆಲ್ಲ*
*ಎನ್ನ ಕೊಡತಿಯಡಿಯಲ್ಲಿ ಬಡಿಯಿಸಿಕೊಂಬ ಬಡಿ*
*ಹೋರಿಗಳು*
*ಇಂತೀ ವಿಶ್ವಗೋಧರೆಲ್ಲರೂ*
*ಕರ್ತಾರನ ಕಮ್ಮಟದ ನಕ್ಕುಬಚ್ಚನೆಯ ಚಿಕ್ಕಮಕ್ಕಳು.*

– ಎನ್ನುತ್ತಾನೆ. ಕಾಯಕ ಮೂಲದಲ್ಲಿ ಅನುಭಾವಿಕತೆಯನ್ನು ಕಾಣುವ ಕಾಯಕ ನಿಷ್ಠೆಯ ಈ ಶರಣರ ಸ್ವಾಭಿಮಾನ ತೊದಳಿಲ್ಲದ ನಡೆಯ ನಿಷ್ಠುರ ಗತಿಯದು. ಇವರ ಪದ ಪರಿಭಾಷೆಗಳು ಕೇವಲ ಕಾಯಕದ ಕೈ ಚಳಕವನ್ನು ಹೇಳುತ್ತಿಲ್ಲ; ಬದುಕಿನ ನೀತಿ ನಿಷ್ಠುರ ನಡೆಯನ್ನೂ ನೆಲೆಗೊಳಿಸಿ ಸಾರುತ್ತಿವೆ. ಹೀಗಾಗಿ ಇವರಿಗೆ ಕಾಯಕ

ಕನಿಷ್ಠತೆಯಲ್ಲಿ ಕೊರಗುವ ಕೀಳರಿಮೆಯಲ್ಲ, ನೈತಿಕ ಗರಿಷ್ಠತೆಯಲ್ಲಿ ಬೆಳಗುವ ಸ್ವಾಭಿಮಾನ. ಹಾಗೆಯೇ ಅದಕ್ಕಂಟಿರುವ ಜಾತಿಪದವು ಕೀಳ್ಗಳೆಯುವ ಕನಿಷ್ಠ ಸೂಚಿಯಲ್ಲ, ಸಮಾಜಮುಖಿಯಾದ ಶ್ರಮಗೌರವದ ಗುಣಸೂಚಿ. ಇದು ಇವರ ಭಾವ. ಇದು ಇವರ ಬದುಕು. ಈ ಕಾರಣದಿಂದಲೇ ಬಾಚಿ ಕಾಯಕದ ಬಸವಣ್ಣ ಹೇಳುತ್ತಾನೆ :

*ಕುಲಗೋತ್ರ ಜಾತಿ ಸೂತಕದಿಂದ*
*ಕೆಟ್ಟವರೊಂದು ಕೋಟ್ಯಾನುಕೋಟಿ*
*ಜನನ ಸೂತಕದಿಂದ ಕೆಟ್ಟವರು ಅನಂತಕೋಟಿ*
*ಮಾತಿನ ಸೂತಕದಿಂದ ಮೋಸವಾದವರು*
*ಮನು ಮುನಿಸ್ತೋಮ ಅಗಣಿತಕೋಟಿ*
*ಆತ್ಮಸೂತಕದಿಂದ ಅಹಂಕರಿಸಿ ಕೆಟ್ಟವರು*
*ಹರಿಹರ ಬ್ರಹ್ಮಾದಿಗಳೆಲ್ಲರೂ*
*'ಯದ್ಭಾವ್ಯಂ ತನ್ನಷ್ಟಂ' ಎಂಬುದನರಿಯದೆ*
*ಹದಿನಾಲ್ಕು ಲೋಕವೂ ಸಂಚಿತಗಾಮಿಯಾಗಿ*
*ಮರಳಿ ಮರಳಿ ಹುಟ್ಟುತ್ತಿಪ್ಪರಯ್ಯ.*

– ಎಂದು. ವರ್ಣ ನೀತಿಯ ಎಲ್ಲ ಕ್ಷುದ್ರ ಮನಸ್ಸುಗಳನ್ನು ಅವರ ವೃಥಾ ಜ್ಞಾನವನ್ನು ಧಿಕ್ಕರಿಸಿದ ಈ ನುಡಿ ಆತ್ಮವಾದಿಗಳ ಅಹಂಕಾರಕ್ಕೆ ಬೀಸಿದ ಬಡಿಗೋಲು.

**ಬುದ್ಧಿಗೇಡಿ ವಿಪ್ರರು – ಸತ್ಯಶುದ್ಧ ಮಾದಿಗರು**

ಕಾಳವ್ವೆ ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ. ದಲಿತ ವಚನಕಾರ್ತಿ. ಅಸ್ಪೃಶ್ಯ ಮೂಲದಿಂದ ಬಂದು ಅಲ್ಲಿನ ಎಲ್ಲಾ ಬಗೆಯ ಅವಮಾನಗಳನ್ನು ಅನುಭವಿಸಿದ್ದ ಕಾಳವ್ವೆಯ ಒಂದು ವಚನವನ್ನು ಇಲ್ಲಿ ಪರಿಶೀಲನೆಗೆ ಎತ್ತಿಕೊಳ್ಳಬಹುದು :

*ಕುರಿಕೋಳಿ ಕಿರುಮೀನು ತಿಂಬವರಿಗೆಲ್ಲಾ ಕುಲಜ*
*ಕುಲಜರೆಂದೆಂಬರು*
*ಶಿವಗೆ ಪಂಚಾಮೃತವ ಕರೆವ ಪಶುವ ತಿಂಬ ಮಾದಿಗ*
*ಕೀಳುಜಾತಿ ಎಂಬರು*
*ಅವರೆಂತು ಕೀಳುಜಾತಿಯಾದರು ? ಜಾತಿಗಳು*
*ನೀವೇಕೆ ಕೀಳಾಗಿರೋ ?*
*ಬ್ರಾಹ್ಮಣನುಂಡುದು ಪುಲ್ಲಿಗೆ ಶೋಭಿತವಾಗಿ ನಾಯಿ*
*ನೆಕ್ಕಿಹೋಯಿತು*
*ಮಾದಿಗರುಂಡುದು ಪುಲ್ಲಿಗೆ ಬ್ರಾಹ್ಮಣರಿಗೆ*
*ಶೋಭಿತವಾಯಿತು*
*ಅದೆಂತೆಂದಡೆ ಸಿದ್ಧಳಿಕೆಯಾಯಿತು, ಸಗ್ಗಳೆಯಾಯಿತು.*
*ಸಿದ್ಧಳಿಕೆಯ ತುಪ್ಪವನು ಸಗ್ಗಳೆಯ ನೀರನು*
*ಶುದ್ಧವೆಂದು ಕುಡಿವ ಬುದ್ಧಿಗೇಡಿ ವಿಪ್ರರಿಗೆ ನಾಯಕ*
*ನರಕ ತಪ್ಪದಯ್ಯ*
*ಉರಿಲಿಂಗ ಪೆದ್ದಿಗಳರಸು ಒಲ್ಲನವ್ವ.*

– ಈ ವಚನ ಹಲವು ಪ್ರಶ್ನೆಗಳನ್ನು ಎತ್ತುತ್ತದೆ. ಈ ಪ್ರಶ್ನೆಗಳು ತರ್ಕಬದ್ಧ ನೆಲೆಯಿಂದ ಹುಟ್ಟಿಕೊಂಡ ಪ್ರಶ್ನೆಗಳು. ಉತ್ತರ ಕೊಡಲಿಕ್ಕೆ ಸಾಧ್ಯವಿಲ್ಲದ ಪರಿಣಾಮದಲ್ಲಿ ವರ್ಣ ವ್ಯವಸ್ಥೆಯ ಟೊಳ್ಳುತನವನ್ನು ಬಯಲಿಗೆಳೆಯುವ ನೈತಿಕ ಬಲದ ಪ್ರಶ್ನೆಗಳು. ಆಹಾರ ಪದ್ಧತಿಯಲ್ಲಿ ಶ್ರೇಷ್ಠ, ಕನಿಷ್ಠ ಎಂಬ ತಾರತಮ್ಯ ನೀತಿಯನ್ನು ವರ್ಣ ವ್ಯವಸ್ಥೆ ಹುಟ್ಟು ಹಾಕಿದೆ. ಗೋವನ್ನು ದೇವತೆಗಳ ಆವಾಸ ಸ್ಥಾನವಾಗಿ ಕಲ್ಪಿಸಿ ಅದನ್ನು ಮಾತೆಯಾಗಿ ಪೂಜಿಸುತ್ತಾ ಆ ನಂಬಿಕೆಯನ್ನು ಬಂಡವಾಳವನ್ನಾಗಿಸಿಕೊಂಡಿರುವ ಆಶೂದ್ರಶಾಹಿ ಇಂದಿಗೂ ಈ ನಂಬಿಕೆಯನ್ನು ರಾಜಕೀಯ ಅಸ್ತ್ರವಾಗಿ ಬೆಳೆಸಿಕೊಂಡು ಕೋಮುದ್ವೇಷವನ್ನು ಬಿತ್ತಿ ಬೆಳೆಯುತ್ತಿದೆ. ತಿನ್ನುವ ಆಹಾರ ಪದ್ಧತಿಯಲ್ಲಿ ಧರ್ಮಕಾರಣವನ್ನು ಬೆರೆಸಿ ಸಮಾಜದ ಸ್ವಾಸ್ಥ್ಯವನ್ನು ನಾಶಮಾಡುತ್ತಿದೆ. ಗೋಮಾಂಸ ಭಕ್ಷಣೆಯನ್ನು ಧಾರ್ಮಿಕ ನಿಷೇಧವಾಗಿ ಮಡಿ, ಮೈಲಿಗೆಯ ವಿಚಾರವಾಗಿ ಬಿಂಬಿಸುತ್ತಿರುವುದು ತಪ್ಪು. ಆಹಾರ ಪದ್ಧತಿ ಎಂಬುದು ಸಮುದಾಯಗಳ ಹಾಗೂ ತಿನ್ನುವವರ ಇಚ್ಛೆಗೆ ಬಿಟ್ಟ ವಿಚಾರ. ಪ್ರಾದೇಶಿಕ ಭಿನ್ನತೆ ಹಾಗೂ ಹವಾಗುಣ ಮಾನ್ಯತೆಗಳ ವಿಶೇಷತೆಯಲ್ಲಿ ಆಹಾರ ಪದ್ಧತಿ ರೂಢಿಗೆ ಬಂದಿರುತ್ತದೆ. ಹೀಗಿರುವಾಗ ಈ ನೀತಿ ಎಷ್ಟು ಅವೈಜ್ಞಾನಿಕವಾದುದು, ಅವೈಚಾರಿಕವಾದುದು ಎಂಬುದನ್ನು ಕಾಳವ್ವೆಯ ವಚನ ತರ್ಕಬದ್ಧವಾಗಿ ಹೇಳುತ್ತದೆ. ಪಶುವಿನ ಹಾಲು ಮಾಂಸದಿಂದಲೇ ಉತ್ಪನ್ನವಾದದ್ದು. ಆ ಹಾಲು ಪಂಚಾಮೃತಕ್ಕೆ ಬಳಕೆಯಾಗುತ್ತದೆ. ಪಶುವಿನ ಚರ್ಮಬಳಕೆಯಲ್ಲಿನ ಉಪಯುಕ್ತತೆಯ ವಿಧಾನಗಳನ್ನು ಹೇಳುತ್ತಲೇ ಅದರ ಲಾಭ ಪಡೆವ ಆಶೂದ್ರವರ್ಣದ ಜಾಣ ಮರೆವನ್ನು ತರಾಟೆಗೆ ತೆಗೆದುಕೊಳ್ಳುತ್ತಾಳೆ ಕಾಳವ್ವೆ. ಮುಖಕ್ಕೆ ರಾಚುವಂತೆ ಸತ್ಯವನ್ನು ಮುಂದೊಡ್ಡಿ ವರ್ಣನೀತಿಯ ಹುನ್ನಾರವನ್ನು ಮೋಸವನ್ನು ಬಯಲಿಗೆಳೆದಿದ್ದಾಳೆ. ವಂಚಿತ ಮೂಲದಿಂದ ಬಂದ ಲೇಖಕನಿಗೆ ಕಲಾತ್ಮಕ ಸಿದ್ಧಾಂತಕ್ಕಿಂತ ಸಾಮಾಜಿಕ ಬದ್ಧತೆ ಮುಖ್ಯವಾದದ್ದು – ಇದು ಓಲೆ ಸೋಯಿಂಕ ಹೇಳುವ ಮಾತು. ಕಾಳವ್ವೆಯ ವಚನಗಳಲ್ಲಿ ದಮನಿತ ಮೂಲದ ಜಾತಿ ಸಮಸ್ಯೆಗಳು ಅವಮಾನದ ಹಲವು ನೆಲೆಗಳು ಮುಖ್ಯವಾಗಿ ದನಿ ಪಡೆದಿವೆ. ಅವು ಪ್ರಶ್ನೆಗಳಾಗಿ ಪ್ರತಿಭಟನೆಯ ದನಿವಿಶೇಷಗಳಾಗಿ ವಚನಗಳಲ್ಲಿ ಮೈತಾಳಿವೆ. ಧಾರ್ಮಿಕ ಸಾಂಸ್ಕೃತಿಕ ಮೂಲದ ನೈತಿಕ ವಿಚಾರಗಳನ್ನು ಪರಿಶೀಲನೆಗೆ ಒಳಗುಮಾಡುತ್ತಾ ಸಾಮಾಜಿಕ ನ್ಯಾಯಕ್ಕಾಗಿ ದನಿಯೆತ್ತಿರುವ ಈ ವಚನ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಸಾಮಾಜಿಕ ಮಹತ್ವದ ವಚನವಾಗಿದೆ. ಮನುಷ್ಯನನ್ನು ಮುಟ್ಟಿಸಿಕೊಳ್ಳಲೇ ಹೇಸುವ ಮನಸ್ಸುಗಳ ಹೀನತನವನ್ನು ತರ್ಕಬದ್ಧವಾಗಿ ಪ್ರಶ್ನಿಸಿದೆ. ಇದೇ ಭಾವದ ವಚನಗಳು ಹಲವು ಜನ ವಚನಕಾರರಲ್ಲಿ ಬಂದಿವೆ. ಭಾಷಾ ಪ್ರಯೋಗದಲ್ಲಿ ಕೆಲವು ವ್ಯತ್ಯಾಸಗಳನ್ನು ಬಿಟ್ಟರೆ ಒಡ್ಡುವ ತರ್ಕಗಳು ಮುಂದೊಡ್ಡುವ ಪ್ರಶ್ನೆಗಳು ಒಂದೇ ನೆಲೆಯಲ್ಲಿ ಹರಿದಿವೆ. ಅಂಬಿಗರ ಚೌಡಯ್ಯನ ಇದೇ ಮಾದರಿಯ ಒಂದು ವಚನವಿದೆ. ಆ ವಚನದ ಕೊನೆಯಲ್ಲಿ:

*ಈ ಬುದ್ಧಲಿಗೆಯೊಳಗಣ ತುಪ್ಪವ ಶುದ್ಧ ಮಾಡಿ*
*ತಿಂಬ ಗುಜ್ಜ ಹೊಲೆಯರ ಕಂಡಡೆ*
*ಉದ್ದನ ಚಮ್ಮಾಳಿಗೆಯ ತಕ್ಕೊಂಡು*
*ಬಾಯ ಕೊಯ್ವೆನು ಎಂದಾತ*
*ನಮ್ಮ ಅಂಬಿಗ ಚೌಡಯ್ಯ.*

– ಎನ್ನುತ್ತಾನೆ. ಇಲ್ಲಿ 'ಹೊಲೆಯ' ಎಂಬ ಪದವನ್ನು ತಿರುಗುಬಾಣವಾಗಿ ಪ್ರಯೋಗಿಸಲಾಗಿದೆ. ಇಂಥ ಕಡೆ ವರ್ಣ ನೀತಿಯ ಪ್ರತಿಪಾದಕರು ಯಾವ ಅರ್ಥದಲ್ಲಿ ಈ ಶಬ್ದವನ್ನು ಬಳಸುತ್ತಿದ್ದರೋ ಅದೇ ಅರ್ಥದಲ್ಲಿ ಅವರಿಗೇ ತಿರುಗಿಸಿ ಬಳಸಲಾಗಿದೆ. ಈ ರೀತಿಯ ಪ್ರಯೋಗಗಳು ಶಬ್ದಾರ್ಥದ ಹಂಗು ಉಳಿಸಿಕೊಂಡು ನಡವಳಿಕೆಯ ನೀಚತನವನ್ನು ಸಂಬೋಧಿಸಿ ಪ್ರಯೋಗಿಸುವ ಪರಿಕ್ರಮಗಳು. ಅಂಬಿಗರ ಚೌಡಯ್ಯ ತನ್ನ ಇನ್ನೊಂದು ವಚನದಲ್ಲಿ ತುಂಬ ಸ್ಪಷ್ಟವಾಗಿ ಇದೇ ಭಾವದಲ್ಲಿ ಹೊಲೆಯ ಪದವನ್ನು ಪ್ರಯೋಗಿಸಿರುವುದನ್ನು ನೋಡಬಹುದು. ಯಾರು ಹೊಲೆಯ, ಎಂಬ ಪ್ರಶ್ನೆಗೆ ಅವನು ನೀಡುವ ಅರ್ಥಗಳು ವ್ಯಕ್ತಿಯ ನಡವಳಿಕೆಗಳಿಗೆ ಸಂಬಂಧಿಸಿದ ಗುಣದವು :

*ಹೊಲೆಯ ಹೊಲೆಯ ಎಂದಡೆ*
*ಹೊಲೆಯರೆಂತಪ್ಪರಯ್ಯಾ ?*
*ಹೊಲೆಯ ಹೊರಕೇರಿಯಲ್ಲಿರುವನು*
*ಊರೊಳಗಿಲ್ಲವೆ ಅಯ್ಯಾ, ಹೊಲೆಯರು ?*
*ತಾಯಿಗೆ ಬೈದವನೇ ಹೊಲೆಯ,*
*ತಂದೆಗೆ ಉತ್ತರ ಕೊಟ್ಟವನೆ ಹೊಲೆಯ,*
*ತಂದೆಗೆ ಬೈದವನೇ ಹೊಲೆಯ,*
*ಕೊಡುವ ದಾನಕ್ಕೆ ಅಡ್ಡ ಬಂದವನೆ ಹೊಲೆಯ,*
*ನಡೆವ ದಾರಿಗೆ ಮುಳ್ಳ ಹಚ್ಚಿದವನೇ ಹೊಲೆಯ,*
*ಬ್ರಾಹ್ಮಣನ ಕುತ್ತಿಗೆಯ ಕೊಯ್ದವನೇ ಹೊಲೆಯ,*
*ಹತ್ತು ಆಡಿದರೆ ಒಂದು ನಿಜವಿಲ್ಲದವನೇ ಹೊಲೆಯ,*
*ಚಿತ್ತದಲ್ಲಿ ಪರಸತಿಯ ಬಯಸಿದವನೇ ಹೊಲೆಯ,*
*ಲಿಂಗಮುದ್ರೆಯ ಕಿತ್ತಿದವನೇ ಹೊಲೆಯ,*
*ಲಿಂಗವ ಬಿಟ್ಟು ತಿರುಗುವವನೇ ಹೊಲೆಯ,*
*ಧರ್ಮವ ಮಾಡದವನೇ ಹೊಲೆಯ,*
*ಬಸವನ ಕೊಂದವನೇ ಹೊಲೆಯ,*
*ಬಸವನ ಇರಿದವನೇ ಹೊಲೆಯ,*
*ಲಿಂಗಪೂಜೆಯ ಮಾಡದವನೇ ಹೊಲೆಯ.*
*ಇಂತಪ್ಪ ಹೊಲೆಯರು ಊರ ತುಂಬ ಇರಲಾಗಿ*
*ಹೊರಕೇರಿಯವರಿಗೆ ಹೊಲೆಯರೆನಬಹುದೆ ?*
*ಹೊಲೆ ಹುಟ್ಟಿದ ಮೂರು ದಿನಕ್ಕೆ ಪಿಂಡಕ್ಕೆ*
*ನೆಲೆಯಾಯಿತ್ತು ,*
*ಹಿಪ್ಪೆಯನುಂಡ ತೊಗಲು ಹರಿಗೋಲವಾಯಿತ್ತು.*
*ಗುರುಗಳಿಗೆ ಚಮ್ಮಾವುಗೆಯಾಯಿತ್ತು.*
*ಹೊಡಲಿಕ್ಕೆ ಮಿಣಿಯಾಯಿತ್ತು.*
*ಹೊಡೆಯಲಿಕ್ಕೆ ಬಾರುಕೋಲವಾಯಿತ್ತು.*
*ಬಂಡಿಗೆ ಮಿಣಿಯಾಯಿತ್ತು.*
*ಅರಸರಿಗೆ ಮೃದಂಗವಾಯಿತ್ತು.*
*ತೋಲು ನಗಾರಿಯಾಯಿತ್ತು.*
*ತುಪ್ಪ ತುಂಬಲಿಕ್ಕೆ ಸಿದ್ದಲಿಕೆ, ಎಣ್ಣೆ ತುಂಬಲಿಕೆ*
*ಬುದ್ದಲಿಕೆಯಾಯಿತ್ತು.*
*ಸಿದ್ದಲಿಕೇನ ತುಪ್ಪ , ಬುದ್ದಲಿಕೇನ ಎಣ್ಣೆ*
*ಕಲ್ಲಿಶೆಟ್ಟಿ ಮಲ್ಲಿಶೆಟ್ಟಿಗಳು ಕೂಡಿ*
*ನಾ ಶೀಲವಂತ ತಾ ಶೀಲವಂತ ಎಂದು*
*ಶುದ್ಧೈಸಿಕೊಂಡು ತಿಂದು ಬಂದು,*
*ಜಗಳ ಬಂದಾಗ ನನ್ನ ಕುಲ ಹೆಚ್ಚು , ನಿನ್ನ ಕುಲ*
*ಹೆಚ್ಚು ಕಡಿಮೆ*
*ಎಂದು ಬಡಿದಾಡುವ ಕುನ್ನಿ ನಾಯಿಗಳ ಮೋರೆ*
*ಮೋರೆಯ ಮೇಲೆ*
*ನಮ್ಮ ಪಡಿಹಾರಿ ಉತ್ತಣ್ಣಗಳ ವಾಮಪಾದುಕೆಯ*
*ಕೊಂಡು*
*ಅವರ ಅಂಗುಳ ಮೆಟ್ಟಿ ಫಡಫಡನೆ ಹೊಡಿ ಎಂದಾತ*
*ನಮ್ಮ ದಿಟ್ಟ ಅಂಬಿಗರ ಚೌಡಯ್ಯ ನಿಜಶರಣರು.*

– ಯಾರು ಹೊಲೆಯ ಎಂಬ ಪ್ರಶ್ನೆಯನ್ನು ಮುಂದೊಡ್ಡಿ ಅವನು ನೀಡುವ ಪಟ್ಟಿಯನ್ನು ಗಮನಿಸಿದರೆ ಇದು ಅಂಬಿಗರ ಚೌಡಯ್ಯನ ವಚನವೇ ಎಂಬ ಅನುಮಾನ ಹುಟ್ಟುತ್ತದೆ. ಇಲ್ಲಿನ ಹೊಲೆತನದ ಪಟ್ಟಿಯಲ್ಲಿ:

ಬ್ರಾಹ್ಮಣನ ಕೊಂದವನೇ ಹೊಲೆಯ
ಲಿಂಗಮುದ್ರೆಯ ಕಿತ್ತಿದವನೇ ಹೊಲೆಯ
ಧರ್ಮವ ಮಾಡದವನೇ ಹೊಲೆಯ

– ಎಂಬ ಸಾಲುಗಳೂ ಇವೆ. ಇವು ಅಂಬಿಗನ ವ್ಯಕ್ತಿತ್ವಕ್ಕೆ ಹೊರತೆನ್ನಿಸುವ ಪ್ರಯೋಗಗಳು. ಬ್ರಾಹ್ಮಣ ಲಿಂಗಮುದ್ರೆ ಧರ್ಮ ಈ ವಿಚಾರಗಳಿಗೆ ಸಂಬಂಧಿಸಿದಂತೆ ಅಂಬಿಗನ ನಿಲುವು ಸ್ಪಷ್ಟವೂ ಖಚಿತವೂ ಆದ ನೆಲೆಯ ನಿಲುವು. ದ್ವಂದ್ವಾತ್ಮಕವಾದ ವಿರುದ್ಧಾತ್ಮಕವಾದ ದೃಷ್ಟಿಗೆ ಅಂಬಿಗನಲ್ಲಿ ಎಡೆಯೇ ಇಲ್ಲ. ಹೊಲೆಯ ಎಂಬ ಪದದ ರೂಢಿಗತ ಅರ್ಥಕ್ಕೆ ಅವನು ನೀಡುವ ನೈತಿಕತೆ ತಪ್ಪಿದ ನಡೆಯ ಪ್ರಮಾಣಗಳ ಪಟ್ಟಿ ಪರಿಶೀಲನಾರ್ಹವೂ ಪ್ರಶ್ನಾರ್ಹವೂ ಆದ ಪಟ್ಟಿಯಾಗಿದೆ. ಅಷ್ಟೇ ಏಕೆ, ಪೂರ್ವರೂಢಿಯಲ್ಲಿ ಆ ಪದವನ್ನು ಪ್ರಯೋಗಿಸುವುದೇ ಸಾಂಸ್ಕೃತಿಕ ರಾಜಕಾರಣದಲ್ಲಿ ಸರಿಯಾದ ಪರಿಕ್ರಮವಲ್ಲ.

ಇದೇ ದಾರಿಯಲ್ಲಿ ಬಸವಣ್ಣನವರು 'ಮಾದಿಗ', 'ಹೊಲೆಯ' ಶಬ್ದಗಳನ್ನು ಬಳಸಿದ್ದಾರೆ :

ಕೊಲುವವನೇ ಮಾದಿಗ
ಹೊಲಸು ತಿಂಬುವವನೇ ಹೊಲೆಯ
ಕುಲವೇನೋ ಅವರ ಕುಲವೇನೋ
ಸಕಲ ಜೀವಾತ್ಮಗಳಿಗೆ ಲೇಸನೇ ಬಯಸುವ
ನಮ್ಮ ಕೂಡಲ ಸಂಗನ ಶರಣರೇ ಕುಲಜರು.

– ಇಲ್ಲಿ ಕುಲದ ಪ್ರಶ್ನೆಯನ್ನು ಎತ್ತಿರುವುದು ಸರಿಯಿದೆ. ಆದರೆ ಹೊಲೆಯ ಮಾದಿಗ ಶಬ್ದಗಳಿಗೆ ಕೊಟ್ಟಿರುವ ಹೊಸ ಅರ್ಥ ಮೇಲುನೋಟಕ್ಕೆ ಆಕರ್ಷಣೀಯವಾಗಿದೆ. ಆದರೆ ಆ ಶಬ್ದಗಳಿಗಿರುವ ರೂಢಿಗತ ಜಾತಿಸೂಚಕ ನಿಂದನೆಯ ಹೀನಾರ್ಥವನ್ನು ತೊಡೆದುಹಾಕುವುದಾಗದೆ ಹೊಸ ತೊಡಕನ್ನು ಹುಟ್ಟುಹಾಕಿದ್ದಾಗಿದೆ. ಸಕಲ ಜೀವಾತ್ಮಗಳಿಗೆ ಲೇಸನೇ ಬಯಸುವ ಸಂಗನ ಶರಣರ ನಡೆ ಕುಲದ ಅರ್ಥಕ್ಕೆ ಬಸವಣ್ಣ ಬರೆದ ಹೊಸ ವ್ಯಾಖ್ಯೆ. ಆದರೆ 'ಮಾದಿಗ', 'ಹೊಲೆಯ' ಎಂಬ ಮೂಲ ಶಬ್ದಗಳ ಹೀನಾರ್ಥ ಇಲ್ಲಿ ತಿರಸ್ಕರಣೆಗೆ ಒಳಗಾಗಲಿಲ್ಲ. ಬದಲಾಗಿ ಇನ್ನಷ್ಟು ಕಳಂಕ ಕೂಡಿಸಿಕೊಂಡಂತೆ ಬೆಳೆಯಿತು. ಇವು ಜಾತಿ ಸೂಚಕ ಶಬ್ದಗಳು. ಜಾತಿಯಿಂದ ಹೊರಬಂದು ಶರಣರಾದವರು ಕುಲಜರಾದರು, ಜಾತಿಮೂಲದಲ್ಲೇ ಉಳಿದವರು ಹಾಗೂ ಜಾತಿಮೂಲ ಶಬ್ದ ಯಥಾರ್ಥ ಹಾಗೇ ಉಳಿಯಿತು. ಆದರೆ ಈ ಪದ ಪ್ರಯೋಗವನ್ನು ಘನತೆಯಿಂದ ಮೇಲೆತ್ತಿದವಳು ಕಾಳವ್ವೆ. ಜಾತಿಯ ಆಚರಣೆಯಲ್ಲಿರುವ ಕಾಯಕದ ನೈತಿಕತೆಯನ್ನು ಹಕ್ಕಿನಿಂದ ಪ್ರತಿಪಾದಿಸುತ್ತಾ ಜಾತಿಯ ಹೆಸರಿನ ಘನತೆಯನ್ನು ಅವಳು ಉನ್ನತೀಕರಿಸಿದಳು.

ಕಾಳವ್ವೆ 'ಬುದ್ಧಿಗೇಡಿ ವಿಪ್ರ'ರೆಂದು ಕರೆದು ಬ್ರಾಹ್ಮಣ್ಯವನ್ನು ನೇರವಾಗಿ ಝಂಕಿಸಿ ಕೇಳುವಲ್ಲಿನ ಪದ ಪ್ರಯೋಗದ ಹಿಂದೆ ಎಚ್ಚರವಿದೆ. 'ಮಾದಿಗರುಂಡುದು' ಎಂಬ ಪ್ರಯೋಗದ ಹಿಂದೆ ಅವಮಾನದ ಹೀಗಳಿಕೆಗಿಂತ ಅಭಿಮಾನದ ತರ್ಕಬದ್ಧ ನೈತಿಕಶುದ್ಧತೆಯ ಪ್ರತಿಪಾದನೆ ಇದೆ. ಸಾಂಸ್ಕೃತಿಕ ರಾಜಕಾರಣದಲ್ಲಿ ಈ ಬಗೆಯ ಎಚ್ಚರದ ಪ್ರಯೋಗಗಳ ಅಗತ್ಯವಿದೆ. ಹೀನ ಅನ್ನಿಸಿದ್ದರ ಒಳಗಿನ ನೈತಿಕಾಂಶವನ್ನು ಎತ್ತಿತೋರುತ್ತ ಶ್ರೇಷ್ಠ ಅನ್ನಿಸಿದ್ದರ ಒಳಗಿನ ಕೊಳಕನ್ನು ಬಯಲುಗೊಳಿಸಿದ ಪರಿಯಿದು. ಅಂಬಿಗರ ಚೌಡಯ್ಯ ಅದೇ ವಿಪ್ರರನ್ನು ಕುರಿತು ಹೇಳುವಾಗ 'ಗುಜ್ಜ ಹೊಲೆಯ' ಎಂಬ ಪದವನ್ನು ತಿರುಗುಬಾಣದ ಪರಿಯಲ್ಲಿ ಪ್ರಯೋಗಿಸಿದ್ದಾನೆ. ಬಸವಣ್ಣ 'ಹೊಲೆಯ, ಮಾದಿಗ' ಶಬ್ದಕ್ಕೆ ಹಿಂಸೆಯ ಮೂಲದ ಹೊಸ ಅರ್ಥ ಕೊಟ್ಟಿದ್ದಾರೆ. ಕಾಳವ್ವೆ ನೇರವಾಗಿ ಬುದ್ಧಿಗೇಡಿ ವಿಪ್ರರೆಂದು ಝಂಕಿಸಿದ್ದಾಳೆ. ಮೂರು ಜನರ ಪ್ರಯೋಗಗಳ ಹಿಂದಿನ ಮನಸ್ಥಿತಿಗಳು ಒಂದೇ ಎಂಬಂತೆ ಕಂಡರೂ ಪ್ರತಿರೋಧವನ್ನು ಒಡ್ಡುವಾಗ ಇರಬೇಕಾದ ಸ್ಪಷ್ಟತೆ ಕಾಳವ್ವೆಯಲ್ಲಿ ನಿಖರವಾಗಿವೆ. ಅಸ್ಪೃಶ್ಯತೆಯನ್ನು ಪ್ರತಿಪಾದಿಸುವ ಹಾಗೂ ಆ ಅರ್ಥವನ್ನು ಪ್ರತೀತಗೊಳಿಸುವ ಯಾವುದೇ ಪದಗಳನ್ನು ತಿರುಗುಬಾಣ ಪದಗಳನ್ನಾಗಿ ಪ್ರಯೋಗಿಸುವುದು ಒಂದು ನೆಲೆಯಲ್ಲಿ ಆ ಪದಗಳಿಗಂಟಿರುವ ಹೀನಾರ್ಥವನ್ನು ಒಪ್ಪಿಕೊಂಡ ಭಾವವನ್ನು ತೋರಿಸುತ್ತದೆ. ಅದಕ್ಕಿಂತ ಆ ಪದಗಳಿಗೇ ತನ್ನ ನಡೆಯೊಳಗಿನ ನೈತಿಕವೂ ಸತ್ಯಶುದ್ಧವೂ ಆದ ಗುಣಾತ್ಮಕತೆಯಿಂದ ಸ್ವಾಭಿಮಾನದ ಹೆಗ್ಗಳಿಕೆಯ ಬಲ ನೀಡುವುದು ಉನ್ನತೀಕರಿಸಿದ ಕ್ರಿಯೆಯಾಗಿರುತ್ತದೆ. ಇದನ್ನು ಕಾಳವ್ವೆಯ ವಚನದಲ್ಲಿ ಕಾಣಬಹುದು. ನೊಂದ ನೋವಿನ ನೆಲೆಯ ಮನಸ್ಸಿನ ಸ್ವಾಭಿಮಾನದ ಎಚ್ಚರ ಹಾಗೂ ನೋವಿನ ತೀವ್ರತೆಯನ್ನು ಪರಿಭಾವನೆಗೆ ತಂದುಕೊಂಡು ಪ್ರತಿಕ್ರಿಯಿಸುವ ಮನಸ್ಸಿನ ಎಚ್ಚರ, ಈ ಎರಡೂ ಒಂದೇ ಸಮಸ್ಯೆಯನ್ನು ಹೇಗೆ ನೋಡುತ್ತವೆ ಎಂಬುದಕ್ಕೆ ಇದು ದೊಡ್ಡ ಉದಾಹರಣೆಯಾಗಿದೆ. ಗಾಂಧೀಜಿ ಹೊಲೆಯ, ಮಾದಿಗ ಪದಗಳಿಗೆ ಪರ್ಯಾಯವಾಗಿ 'ಹರಿಜನ' ಶಬ್ದವನ್ನು ಕೊಟ್ಟಾಗ ಅಂಬೇಡ್ಕರ್ ಅದನ್ನು ವಿರೋಧಿಸಿದರು. **ಶಬ್ದ ಬದಲಾವಣೆಯಾಗಲಿ, ಶಬ್ದ ಪ್ರಯೋಗದ ಸ್ಥಾನಪಲ್ಲಟವಾಗಲಿ ಸ್ವಾಭಿಮಾನವನ್ನು ಹೆಚ್ಚುಗೊಳಿಸುವ ಪ್ರಕ್ರಿಯೆಗಳಲ್ಲ, ಅವು ಕಷ್ಟಕ್ಕೆ ಕರಗಿದ ಅಂತಃಕರಣದ ಅಶ್ರುಜಲರೂಪಿಗಳು.** ಹೀಗಾಗಿ :

ತನ್ನೊಳಗಣ ಅರಿವು
ತನ್ನಲ್ಲಿಯೇ ತೋರಿದಲ್ಲದೆ
ಅನ್ಯರಲ್ಲಿ ತೋರಬಲ್ಲದೆ
ತನ್ನಲ್ಲಿ ತಾನೇ ಇದ್ದಿತ್ತು.
ತನ್ನ ತಾನೇ ಪಕ್ವಕ್ಕೆ ಬಂದು
ತನ್ನಲ್ಲಿ ಹುಟ್ಟಿದ ನೆನಹಿನ ಬಿನ್ನಾಣವನ್ನೇನೆಂಬೆನಯ್ಯ
ರಾಮನಾಥ.

– ಎಂಬಂತೆ ಕಾಳವ್ವೆಯ ಸ್ವಾಭಿಮಾನವೆಂಬುದು ಅರಿವಿನ ಪರಿಣಾಮದಲ್ಲಿ ಫಲಿಸಿತ್ತು. ೨೦ನೇ ಶತಮಾನದಲ್ಲಿ ಕೆಳಜಾತಿಗಳಿಂದ ಬಂದ ಬುದ್ಧಿಜೀವಿಗಳು ಜಾತಿ ಸೂಚಕ ಶಬ್ದಗಳನ್ನು ಸ್ವಾಭಿಮಾನದ ಕುರುಹಾಗಿ ಇಟ್ಟುಕೊಂಡದ್ದನ್ನು ನೆನೆದಾಗ ಕಾಳವ್ವೆಯಂಥ ಶರಣ, ಶರಣೆಯರ ಸ್ವಾಭಿಮಾನದ ನಡೆ ಚಾರಿತ್ರಿಕ ಮಹತ್ವದ ಸಂಗತಿಯಾಗಿದೆ.

**ಮುಟ್ಟಿಯೂ ಮುಟ್ಟದಿಹೆ**

ಸ್ಪೃಶ್ಯ ಮುಟ್ಟಿಸಿಕೊಳ್ಳುವವನಾದರೆ ಅಸ್ಪೃಶ್ಯ ಮುಟ್ಟಬಾರದವನು. ಇವನನ್ನು ಶ್ವಪಚ, ಚಂಡಾಲ, ಹೊಲೆಯ, ಮಾದಿಗ ಇತ್ಯಾದಿ ಶಬ್ದಗಳಲ್ಲಿ ಗುರುತಿಸಿ ಅವಮಾನಿಸಲಾಗಿದೆ. ಮುಟ್ಟುವುದು ಆಪ್ತತೆಯ, ಆರ್ದ್ರತೆಯ ಭಾವ ಸಂಪನ್ನ ಕ್ರಿಯೆ. ಹಿಂದೂ ಸಂಸ್ಕೃತಿ ಎಂದೂ ಒಳಗೊಳ್ಳುವ ಸಂಸ್ಕೃತಿಯಲ್ಲ; ಮುಟ್ಟಬೇಡ ಎನ್ನುವ ನಡೆಯದು. ಹೊರಗಿನವರು ಒಳಗಿನವರು ಮುಟ್ಟಬಹುದಾದವರು, ಮುಟ್ಟಬಾರದವರು ಎಂಬ ನೆಲೆಗಳಲ್ಲಿ ಮನುಷ್ಯರ ಬಗೆಗಿನ ತನ್ನ ಸಣ್ಣತನವನ್ನು ಭಿನ್ನಭೇದವನ್ನು ಉದ್ದಕ್ಕೂ ಉಳಿಸಿಕೊಂಡೇ ಬಂದಿದೆ. ಈ ಮುಟ್ಟುವ, ಮುಟ್ಟಿಸಿಕೊಳ್ಳುವ ಮನುಷ್ಯ ಸಹಜ ಮನೋಧರ್ಮಕ್ಕೆ ಎರವಾದ ಪರಿಯಲ್ಲಿ ಬದುಕನ್ನು ಹೊರೆಯಬೇಕಾದ ಬಂಧನಕ್ಕೆ ಸಿಕ್ಕಿ ಅವಮಾನ, ಬೇಗುದಿಗಳನ್ನು ಅನುಭವಿಸಿದವರ ಒಳಸಂಕಟಗಳು ಹೇಳಲಾಸಲ್ಲ. ಡೋಹರ ಕಕ್ಕಯ್ಯನ ವಚನಗಳಲ್ಲಿ ಈ ಮುಟ್ಟುವ ಸಂಗತಿ ಮುಟ್ಟುವ - ಮುಟ್ಟದಿರುವ ಎರಡೂ ನೆಲಗಳಲ್ಲೂ ಅನುಭವದ್ರವ್ಯವಾಗಿ ಮಾತಾಡಿದೆ. ಕಕ್ಕಯ್ಯನವೆಂದು ಸಿಕ್ಕಿರುವ ವಚನಗಳೇ ಆರು. ಆ ಆರೂ ವಚನಗಳಲ್ಲಿ ಹರಿದಿರುವ ವಿಚಾರ ಮುಟ್ಟುವ ಸಂಗತಿಗೆ ಸಂಬಂಧಿಸಿದ ಸಂಗತಿಯೇ ಆಗಿದೆ. ಅಸ್ಪೃಶ್ಯತೆಯ ಅವಮಾನದಲ್ಲಿ ನರಳಿದ ಮನಸ್ಸು ಹೀಗೆ ಅದನ್ನೇ ಮತ್ತೆ ಮತ್ತೆ ಧೇನಿಸಿ ಬರೆಯುವುದು ಅವಮಾನದ ತೀವ್ರತೆಯನ್ನು ಕಾಣಿಸುತ್ತದೆ. ಅದರಿಂದ ಹೊರಬರಲು ಸಾಧ್ಯವಾದ ಸ್ಥಿತಿಯ ಬಗೆಗೂ ಇಲ್ಲಿ ಸೂಚನೆಗಳಿವೆ. ಬಿಡುಗಡೆಯಿಂದ ಮನಸ್ಸಿಗಾದ ಸಂತೋಷ ಅದಕ್ಕೆ ಕಾರಣರಾದವರ ಬಗ್ಗೆ ಒಡಮೂಡಿದ ಕೃತಜ್ಞತಾಭಾವ ಕಕ್ಕಯ್ಯನ ವಚನಗಳಲ್ಲಿ ಬಿಂಬಿತವಾಗಿದೆ.

ಎನ್ನ ಕಷ್ಟಕುಲದಲ್ಲಿ ಹುಟ್ಟಿಸಿದೆಯಯ್ಯಾ
ಎಲೆ ಲಿಂಗ ತಂದೆ ಕೆಟ್ಟೆನಯ್ಯಾ
ನಿಮ್ಮ ಮುಟ್ಟಿಯೂ ಮುಟ್ಟದಿಹೆನೆಂದು
ಎನ್ನ ಕೈಮುಟ್ಟದಿರ್ದಡೆ ಮನಮುಟ್ಟಲಾಗದೆ
ಅಭಿನವ ಮಲ್ಲಿಕಾರ್ಜುನ

– ಈ ವಚನದಲ್ಲಿ ಅಸ್ಪೃಶ್ಯತೆಯ ನೋವಿನ ನಿವೇದನೆಯಿದೆ. ಹುಟ್ಟು ಕಾರಣವಾದ ತನ್ನ ಪರಿಸ್ಥಿತಿ ಮುಟ್ಟದ, ಮುಟ್ಟಿಸಿಕೊಳ್ಳದ ಉಭಯ ಸಂಕಟದ ದುಸ್ಥಿತಿ. ಮುಟ್ಟಿಯೂ ಮುಟ್ಟದ ಎನ್ನುವಲ್ಲಿ ಪ್ರೀತಿಪೂರ್ವಕವಾಗಿ ಒಬ್ಬ ಮನುಷ್ಯನನ್ನು ಒಂದು ದೈವವನ್ನು ಅಂತರಂಗದ ಒಳಕ್ಕೆ ತೆಗೆದುಕೊಂಡರೂ ಹೊರಗೆ ಮಾತ್ರ ಅಂತರ ಕಾಯ್ದುಕೊಳ್ಳುವ ಮುಟ್ಟಲಾಗದ ಸ್ಥಿತಿಯಿದು. ಮುಟ್ಟಿನ ನಿಜದ ನೆಲೆ ಯಾವುದಿರಬೇಕು, ಯಾವುದಿದೆ ಎಂಬುದನ್ನು ಇಲ್ಲಿ ವಚನಕಾರ ವ್ಯಂಗ್ಯಾತ್ಮಕ ಭಾವದಲ್ಲಿ ಪ್ರಶ್ನಿಸುತ್ತಿದ್ದಾನೆ. ಕೈಮುಟ್ಟು ಮನಮುಟ್ಟುಗಳ ಮುಟ್ಟುಚಿಟ್ಟಿನ ವ್ಯವಹಾರವನ್ನು ನಿಜದ ನೆಲೆಯಲ್ಲಿ ಸತ್ಯವನ್ನು ನೋಡುವಂತೆ ಒತ್ತಾಯಿಸುತ್ತಿದ್ದಾನೆ. ಕೈಮುಟ್ಟನ್ನು ನಿಯಂತ್ರಿಸುವ ಸಮಾಜಕ್ಕೆ

## ಅವಳಿ–ಜವಳಿ

ಖಾದಿ–ಖಾವಿಗೂ
ಫೆವಿಕಾಲ್ ಅಂಟು
ಖಾದಿಯಲ್ಲಿದೆ ನೋಟು
ಖಾವಿಯಲ್ಲಿದೆ ಓಟು
ಎರಡೂ ಸೇರಿದರೆ ಗಂಟು
ಎರಡರ ನಡುವಿನ ಕೊಂಡಿ
ಇತಿ–ಮಿತಿಯಲ್ಲಿದ್ದರೆ
ಪರಸ್ಪರ ಪೂರಕ
ಜೊತೆಗೆ ತಾರಕ
ಅತಿಯಾದರೆ ಮಾರಕ

ಕೆ. ಬಸವನಗೌಡ
ಹಳೇಹಗರಿಬೊಮ್ಮನಹಳ್ಳಿ - ೫೮೩ ೨೧೨ ಬಳ್ಳಾರಿ ಜಿಲ್ಲೆ

ಮನಮುಟ್ಟುವ ಮನೋಸ್ಥಿತಿಯನ್ನು ನಿಯಂತ್ರಿಸಲು ಆಗುವುದಿಲ್ಲ. ಶರಣರಲ್ಲಿ ಅಂತರಂಗ ಬಹಿರಂಗಗಳ ಆತ್ಮಸಂಗ ಎಂಬ ಮಾತು ಬರುತ್ತದೆ. ಇಲ್ಲಿ ಕಕ್ಕಯ್ಯನ ಇಕ್ಕಟ್ಟು ಅಂತರಂಗದ ಸ್ಥಿತಿಯನ್ನು ಬಹಿರಂಗದಲ್ಲಿ ಸಂಗಗೊಳಿಸಲಾಗುತ್ತಿಲ್ಲ ಎಂಬ ಸಂಕಟದ್ದು. ಇದು ಕಾರಣ ಈ ಮುಟ್ಟು ಅವಮಾನದ ಪ್ರಶ್ನೆ ಅಷ್ಟೇ ಅಲ್ಲ; ಅಪೇಕ್ಷೆಯನ್ನು ಈಡೇರಿಸಿಕೊಳ್ಳಲಾಗದ ಅಡ್ಡಿಯ ಪ್ರಶ್ನೆಯೂ ಆಗಿದೆ. ಮನಸ್ಸು ದಾಟಿದರೂ ಮೈ ದಾಟಲಾರದ ಸ್ಥಿತಿಯ ಬಂಧನ ನೀಡುವ ಈ ಒಳನೋವು ಕಕ್ಕಯ್ಯನದು. ಇಂಥ ಈ ಬೇಗುದಿಯಿಂದ ಅವನನ್ನು ಪಾರುಮಾಡಿದ್ದು ಶರಣಧರ್ಮ.

*ಎನ್ನ ಕಷ್ಟ ಕುಲದಲ್ಲಿ ಹುಟ್ಟಿದವನೆಂಬ ಕರ್ಮವ ಕಳೆದು*
*ಮುಟ್ಟಿ ಪಾವನವ ಮಾಡಿ*
*ಕೊಟ್ಟನಯ್ಯ ಎನ್ನ ಕರಸ್ಥಲಕ್ಕೆ ಲಿಂಗವ*
*ಆ ಲಿಂಗ ಬಂದು ಸೋಂಕಲೊಡನೆ*
*ಎನ್ನ ಸರ್ವಾಂಗದ ಅವಲೋಹವಳಿಯಿತ್ತಯ್ಯ*
*ಎನ್ನ ತನುವಿನಲ್ಲಿ ಗುರುವ ನೆಲೆಗೊಳಿಸಿದ*
*ಎನ್ನ ಮನದಲ್ಲಿ ಜಂಗಮವ ನೆಲೆಗೊಳಿಸಿದ*
*ಎನ್ನ ಅರುಹಿನಲ್ಲಿ ಪ್ರಸಾದವ ನೆಲೆಗೊಳಿಸಿದ*
*ಇಂತೀ ತ್ರಿವಿಧ ಸ್ನಾನವ ಶುದ್ಧವ ಮಾಡಿ*
*ಚತುರ್ವಿಧ ಸಾರಾಯಸ್ಥಲವ ಸಂಬಂಧವ ಮಾಡಿದ*
*ಸಂಗನ ಬಸವಣ್ಣನ ಕರುಣದಿಂದ*
*ಪ್ರಭುದೇವರ ಶ್ರೀಪಾದವ ಕಂಡು ಬದುಕಿದೆನು ಕಾಣಾ*
*ಅಭಿನವ ಮಲ್ಲಿಕಾರ್ಜುನಾ.*

– ಸ್ವಾತಂತ್ರ್ಯವೆಂಬುದು ಎಲ್ಲಾ ಜೀವಿಗಳ ಬದುಕಿನ ಹಕ್ಕು. ಸಂಕೋಲೆಗಳು ಜೀವಿಗಳ ಮೇಲೆ ಮನುಷ್ಯ ಹಾಕುವ ನಿರ್ಬಂಧ. ಬೇರೆ ಯಾವುದೇ ಪ್ರಾಣಿಜಗತ್ತಿನಲ್ಲಿ ಈ ರೀತಿಯ ಸ್ವಾತಂತ್ರ್ಯ ಹರಣದ ಪರಿಸ್ಥಿತಿ ಇರಲಾರದು. ಬುದ್ಧಿಯನ್ನು ಅಸ್ತ್ರವಾಗಿಸಿಕೊಂಡಿರುವ ಮನುಷ್ಯನ ಕ್ರೌರ್ಯದ ಸ್ವರೂಪ ಇದು. ಬಂಧನದಿಂದ ಬಿಡುಗಡೆಗೊಂಡ ಜೀವಿಯ ಮನಸ್ಸು ಅನುಭವಿಸುವ ಆಹ್ಲಾದ ಪದಗಳಲ್ಲಿ ಬಣ್ಣಿಸಲಾಗದ್ದು. ಮುಟ್ಟಿನ ಅವಮಾನದಲ್ಲಿ ಬಂಧಿತನಾಗಿದ್ದ ಕಕ್ಕಯ್ಯನನ್ನು ಅದರಿಂದ ಬಿಡುಗಡೆಗೊಳಿಸಿದ್ದು ಇಷ್ಟಲಿಂಗದ ಸೋಂಕು. ಅದು ಲಿಂಗದೀಕ್ಷೆಯಲ್ಲ, ಸೋಂಕಿನ ಸಂಗದ ಕರುಣೆ.

ಇಲ್ಲಿ ಅಸ್ಪೃಶ್ಯತೆಯ ಅವಮಾನದಿಂದ ಪಾರಾಗುವ ಈ ಬಗೆ ಅಪರೂಪವಾದುದು. ಈ ಅಪರೂಪದ ವಿಶೇಷತೆಯ ಅರಿವಾಗಬೇಕಾದರೆ ಕುಲದ ಕಾರಣದಿಂದ ಅವಮಾನಕ್ಕೆ ಒಳಗಾಗಿದ್ದ ಪಂಪನ ಕರ್ಣನನ್ನು ಇಲ್ಲಿ ಉದಾಹರಣೆಗೆ ಎತ್ತಿಕೊಳ್ಳುವ ಅಗತ್ಯವಿದೆ. ಪಂಪನಲ್ಲಿ ಕರ್ಣನ ಕುಲದ ಪ್ರಶ್ನೆ ಇಡೀ ಪಂಪಭಾರತವನ್ನೇ ಕರ್ಣರಸಾಯನವಾಗಿಸಿದೆ. ಪಂಪ ಕವಿ ಕರ್ಣನ ಮನೋನಿರೀಕ್ಷೆಯನ್ನು ವ್ಯಕ್ತಿ ಮಾತ್ರದ ನೆಲೆಯಲ್ಲಿ ಅಷ್ಟೇ ಅಲ್ಲ, ಶ್ರೇಣೀಕರಣ ವ್ಯವಸ್ಥೆಯ ಅವಮಾನ, ಸ್ವಾಭಿಮಾನಗಳ ನೆಲೆಯಲ್ಲಿಟ್ಟು ನಿರೀಕ್ಷಿಸಿದ್ದಾನೆ. ಹೀನ ಕುಲದವನೆಂಬ ಮಾತು ಬಂದಾಗಲೆಲ್ಲಾ ಸೂತಜ ಕರ್ಣನಿಗೆ ಮಾತು ಕಟ್ಟುತ್ತಿತ್ತು. ಕಾರಣ ಆಗ ಅವನಿಗೆ ತನ್ನ ಜನ್ಮರಹಸ್ಯ ಗೊತ್ತಿರಲಿಲ್ಲ. ಅವನು ತಾನು ಸೂತಜನೆಂದೇ ನಂಬಿದ್ದ. ಕೃಷ್ಣನ ಭೇದೋಪಾಯಕ್ಕೆ ಬಲಿಯಾದ ಮೇಲೆ ಕರ್ಣನಿಗೆ ತಾನು ಕ್ಷತ್ರಿಯ, ತಾನು ರಾಧೇಯನಲ್ಲ, ಕೌಂತೇಯ ಎಂಬ ಹುಟ್ಟಿನ ಗುಟ್ಟು ಗೊತ್ತಾಗುತ್ತದೆ. ಇದಾದ ಮೇಲೆ ಯಾರಾದರೂ ಕುಲದ ಪ್ರಶ್ನೆ ಎತ್ತಿದರೆ ಕರ್ಣ ಅದನ್ನು ಕೇಳಿಕೊಂಡು ಸುಮ್ಮನಿರುವುದಿಲ್ಲ. ಅವರ ಮೇಲೆ ಹರಿಹಾಯುತ್ತಾನೆ. ಇದಕ್ಕೆ ಕಾರಣ ತಾನು ಸೂತಜನಲ್ಲ, ಕ್ಷತ್ರಿಯ ಎಂಬ ಹುಟ್ಟಿನ ಮೂಲದ ಶ್ರೇಷ್ಠತೆಯ ಮೇಲರಿಮೆಯ ಭಾವ. ಅವನಲ್ಲಿ ಈ ಪ್ರತಿಭಟನೆ ಅವಮಾನದ ಆಳದಲ್ಲಿ ಸಿಡಿದ ಸ್ವಾಭಿಮಾನವಾಗಿ ಬರದೆ ಮೇಲರಿಮೆಯ ಭಾವದಲ್ಲಿ ಬೊಬ್ಬಿರಿದ ಪ್ರತಿಕ್ರಿಯೆಯಾಗಿ ಹೊಮ್ಮಿದೆ. ಕರ್ಣ-ದ್ರೋಣರ ಸಂವಾದ ಪ್ರಸಂಗದಲ್ಲಿ ಪಂಪ ಈ ಅಂಶವನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದ್ದಾನೆ. ಸೂತಜನೆಂಬ ಹೀಗಳಿಕೆಯ ಅವಮಾನದಿಂದ ಬಿಡುಗಡೆಗೊಂಡ ಕರ್ಣನ ಮನಸ್ಸು ಸಿಡಿಯುವುದಕ್ಕೂ ಮುಟ್ಟಿಸಿಕೊಳ್ಳಬಾರದವನು ಎಂಬ ಸ್ಥಿತಿಯಿಂದ ಬಿಡುಗಡೆಗೊಂಡ ಕಕ್ಕಯ್ಯನ ಮನಸ್ಸು ಪ್ರತಿಕ್ರಿಯಿಸುವ ಸ್ಥಿತಿಗೂ ಗಮನಾರ್ಹವಾದ ವ್ಯತ್ಯಾಸಗಳಿವೆ. ಕರ್ಣನಲ್ಲಿ ಬಿಡುಗಡೆಯ ಮನಸ್ಥಿತಿಯ ಒಳಗೆ ಮೇಲರಿಮೆಯ ಬೀಗುವಿಕೆ ತುಂಬಿದೆ. ಕಕ್ಕಯ್ಯನಲ್ಲಿ ಅವಮಾನದ ಒಳಸುಳಿಯಿಂದ ಹೊರಬಂದ ನಿರಾಳತೆಯಿದೆ. ಈ ನಿರಾಳತೆ ಅವಮಾನದ ಮೂಲವಾದ ಮುಟ್ಟುವ - ಮುಟ್ಟಬಾರದ ಸಂಗತಿಯನ್ನೇ ದ್ರವ್ಯಮಾಡಿಕೊಂಡ ಬಿಡುಗಡೆಯ ಚಿಂತನೆಯಲ್ಲಿ ಒಡಮೂಡಿದ್ದು. ಲಿಂಗ ಸೋಂಕಿನಲ್ಲಿ ಸಂಭವಿಸಿದ್ದು; ಸಂಭ್ರಮಿಸಿದ್ದು. ಈ ಸೋಂಕು ಅಂತಿಂಥ ಸೋಂಕಲ್ಲ. ಶತಮಾನಗಳ ಕಾಲಗರ್ಭದಲ್ಲಿ ಅವಮಾನದ ದಳ್ಳುರಿಯಲ್ಲಿ ಬೇಯುವುದಕ್ಕೆ ಕಾರಣವಾಗಿ ಸಮುದಾಯವನ್ನು ವಂಚಿಸಿದ್ದು. ಮನಸ್ಸಿನಲ್ಲಿ ಮುಟ್ಟಿದರೂ ಕೈಯಲ್ಲಿ ಮುಟ್ಟಲಾರದ, ಮುಟ್ಟಬಾರದ ಕರಕಷ್ಟಕ್ಕೆ ತಳ್ಳಿದ್ದು ಈಗ ಬಿಡುಗಡೆಗೆ ಕಾರಣವಾಗಿರುವ ಈ ಲಿಂಗಸೋಂಕಿನಲ್ಲಿ ಶತಮಾನಗಳ ಹಸಿವನ್ನು ಹಿಂಗಿಸಿದ ತೃಪ್ತಿಯಿದೆ. ಅಸ್ಪೃಶ್ಯನೆಂಬ ಅವಲೋಹವನ್ನು ಗುರು ಜಂಗಮ ಪ್ರಸಾದಗಳೆಂಬ ತ್ರಿವಿಧ ಸ್ನಾನಕ್ಕೆ ಭಾಜನವಾಗಿಸಿ ಪಕ್ಕಾ ಲೋಹವಾಗಿಸಿದೆ. ಸಂಗನ ಕರುಣದಿಂದ ಸಂಬಂಧದ ಚತುರ್ವಿಧ ಬಳ್ಳಿ ಕುಡಿವೊಡೆದು ಹಬ್ಬಿದೆ. ಈ ಸುಖ ಈ ಸಂಭ್ರಮ ಯಾವುದೇ ಹೊರಗಿನ ಒತ್ತಡದಿಂದ ಆದದ್ದಲ್ಲ, ತನುವಿನಲ್ಲಿ ಗುರು, ಮನದಲ್ಲಿ ಜಂಗಮ, ಅರುವಿನಲ್ಲಿ ಪ್ರಸಾದ ನೆಲೆಗೊಂಡ ಪರಿಣಾಮದಲ್ಲಿ ಫಲಿಸಿದ್ದು. ಇಲ್ಲಿ ಒಂದು ಅನುಭವ ಪ್ರಸಂಗ ನೆನಪಾಗುತ್ತಿದೆ. ೧೯೭೫ರ ನವೆಂಬರ್ ತಿಂಗಳು ನಾನು ನನ್ನ ಕೆಲವು ಜನ ಸ್ನೇಹಿತರ ಜೊತೆಯಲ್ಲಿ ಶ್ರೀಶೈಲಕ್ಕೆ ಹೋಗಿದ್ದೆ. ಶ್ರೀಶೈಲದ ಒಂದು ವಿಶೇಷವೆಂದರೆ ಎಲ್ಲರೂ ಸಾಲಿನಲ್ಲಿ ನಿಂತು ಲಿಂಗ ದರ್ಶನವನ್ನು ಪಡೆಯುವುದಷ್ಟೇ ಅಲ್ಲ, ಲಿಂಗ ಮೂರ್ತಿಯನ್ನು ಮುಟ್ಟಲೂಬಹುದು. ನಾವು ನಿಂತಿದ್ದ ಸಾಲಿನಲ್ಲಿ ನಮ್ಮ ಮುಂದೆಯೇ ಗ್ರಾಮೀಣ ಮೂಲದ ಒಂದು ದಲಿತ ಕುಟುಂಬ ಸಾಲುಗಟ್ಟಿ ನಿಂತಿತ್ತು. ಅವರು ತಿರುಪತಿಗೆ ಹೋಗಿ ಬಂದಿರುವುದು ಅವರ ಬೋಳಾದ ತಲೆಯಿಂದಲೇ ಗೊತ್ತಾಗುತ್ತಿತ್ತು. ಅವರಲ್ಲಿ ಒಬ್ಬ ತನ್ನ ಗುಂಡು ತಲೆಯನ್ನು ಆ ಗುಂಡಾದ ಲಿಂಗಕ್ಕೆ ಸೋಂಕಿಸಿ ನಮಸ್ಕರಿಸಿದ. ಆ ಸೋಂಕು ಅವನನ್ನು ಎಷ್ಟು ಭಾವಪರವಶಗೊಳಿಸಿತೆಂದರೆ ತನ್ನೆರಡೂ ಕೈಗಳಿಂದ ಆ ಲಿಂಗವನ್ನು ತಬ್ಬಿಕೊಂಡು ತನ್ನ ಗುಂಡು ತಲೆಯನ್ನು ಆ ಗುಂಡು ಲಿಂಗಕ್ಕೆ ಅಂಟಿಸಿಕೊಂಡು ಮುಂಡಾಡತೊಡಗಿದ. ಕೆಲವು ಕ್ಷಣಗಳ ಕಾಲ ಆ ಮುಂಡಾಟ ನಡೆದೇ ಇತ್ತು. ಪಕ್ಕದಲ್ಲಿದ್ದ ಪೂಜಾರಿ ತಕ್ಷಣ ಅವನ ಗುಂಡು ತಲೆಗೆ ಕೈಹಾಕಿ ದೂರ ತಳ್ಳತೊಡಗಿದ. ಕಾರಣ, ಒಬ್ಬನೇ ಹೀಗೆ ಮುಂಡಾಡುತ್ತಾ ನಿಂತರೆ ಉದ್ದನೆಯ ಸಾಲಿನಲ್ಲಿ ನಿಂತವರ ಕತೆಯೇನು? ಇದು ಪೂಜಾರಿಯ ವರಾತ. ಆದರೆ ಆ ಭಕ್ತನದು ಲಿಂಗ ಸೋಂಕಿನ ಪುಳಕ. ಎಂದೂ ದೇವರ ವಿಗ್ರಹವನ್ನು ಮುಟ್ಟದವನು, ಮುಟ್ಟಿದರೆ ಏನಾದೀತೋ ಎಂಬ ಭಯದಲ್ಲಿ ಜಾತಿ ಕಾರಣದಲ್ಲಿ ದೂರವುಳಿದವನು, ಒಮ್ಮೆಗೇ ಇಂಥ ಅವಕಾಶಕ್ಕೆ ತೆರೆದುಕೊಂಡರೆ ಹೇಗಾಗಬೇಡ? ಅವನಿಗೆ ಆ ಲಿಂಗ ಕೇವಲ ಒಂದು ವಸ್ತುವಲ್ಲ. ಅವನ ಮುಗ್ಧ ಭಕ್ತಿಭಾವದಲ್ಲಿ ಅದು ದೈವ. ಅದು ದಿವ್ಯ. ಅದು ಪರಮಗಂತವ್ಯ. ಎಂದೂ ತನ್ನ ಸೋಂಕಿಗೆ ಲಭ್ಯವಾಗದ್ದು ಇದೇ ಪ್ರಥಮ ಬಾರಿಗೆ ಭಾಗ್ಯದ ಬಾಗಿಲು ತೆರೆದಂತೆ ಒದಗಿಬಂದಿದೆ. ಹೀಗಾಗಿ ಮಗುವನ್ನು ಮುಂಡಾಡುವ ಸ್ಪರ್ಶಸುಖ ಭಾವದಲ್ಲಿ ಅವನು ಪರವಶನಾಗಿ ಮುಂಡಾಡುತ್ತಿದ್ದ. ಆದರೆ ಅದೇ ಪೂಜಾರಿಗೆ ನಿತ್ಯ ಮುಟ್ಟಿ ಮುಟ್ಟಿ ಅದೊಂದು ವಸ್ತು. ಅದೊಂದು ವ್ಯವಹಾರ ಎಂಬಂತಾಗಿತ್ತು. ಬರುವವರನ್ನು ಕ್ಷಣಾರ್ಧದಲ್ಲಿ ಮುಂದಕ್ಕೆ ಕಳುಹಿಸುವ ಯಾಂತ್ರೀಕೃತ ನಿರ್ಭಾವುಕ ವ್ಯವಹಾರದಲ್ಲಿ ಅವನ ಕ್ರಿಯೆ ಇತ್ತು. ಹೀಗಾಗಿ ಈ ಮುಗ್ಧಭಕ್ತನ ಲಿಂಗಸೋಂಕಿನ ಸ್ಪರ್ಶಸುಖ ಕ್ಷಣದಲ್ಲಿ ತಳ್ಳುವ ವ್ಯವಹಾರ ಮಾತ್ರವಾಯಿತು. ಭಕ್ತನಿಗೆ ಅನಿರೀಕ್ಷಿತವಾಗಿ ಒದಗಿದ ಆ ಸ್ಪರ್ಶ ಅನಂತಕಾಲದ ಬಯಕೆಯ ನಿಧಿಯಾಗಿತ್ತು. 'ಲಿಂಗಕ್ಕೆ ಮುಟ್ಟಿಲ್ಲ ಗಂಗೆಗೆ ಕಟ್ಟಿಲ್ಲ' ಎಂಬ ಮಾತಿನ ಮೋಹರಕ್ಕೆ ಈ ಪ್ರಸಂಗ ಸಾಕ್ಷೀಕರಿಸಿದ ಉದಾಹರಣೆಯಾಗಿತ್ತು.

ಕಕ್ಕಯ್ಯನ ಲಿಂಗ ಸೋಂಕಿನ ಪುಳಕ ಹಾಗೂ ಆ ಮುಗ್ಧ ಭಕ್ತನ ಲಿಂಗ ಸೋಂಕಿನ ಪುಳಕ ಭಾವದ ವಿಭ್ರಮವಲ್ಲ ಭಕ್ತಿಯ ಸಂಭ್ರಮ. ಕ್ಷಣದ ಕ್ಷಯವಲ್ಲ ಗುಣದ ಅಕ್ಷಯ.

*ಎನ್ನ ಕಷ್ಟಕುಲದ ಸೂತಕ*
*ನಿಮ್ಮ ಹಸ್ತ ಮುಟ್ಟಿದಲ್ಲಿ ಹೋಯಿತ್ತು*
*ಶುಕ್ಲ ಶೋಣಿತದಿಂದಲಾದ ಸೂತಕ*
*ನಿಮ್ಮ ಮುಟ್ಟಲೊಡನೆ ಬಯಲಾಯಿತ್ತು*
*ತಟ್ಟಿದ ಮುಟ್ಟಿದ ಸುಖಾಂಗಗಳನೆಲ್ಲವ*
*ಲಿಂಗಮುಖಕ್ಕೆ ಅರ್ಪಿಸಿದನಾಗಿ*
*ಎನ್ನ ಪಂಚೇಂದ್ರಿಯಗಳು ಬಯಲಾದವು*
*ಎನ್ನ ಅಂತರಂಗದಲ್ಲಿ ಜ್ಞಾನಜ್ಯೋತಿ ಎಡೆಗೊಂಡುದಾಗಿ*
*ಒಳಗೂ ಬಯಲಾಯಿತ್ತು*
*ಸಂಸಾರ ಸಂಗದ ಅವಸ್ಥೆಯ ಮೀರಿದ ಕ್ರೀಯಲ್ಲಿ*
*ತರತಹವಾಯಿತ್ತಾಗಿ ಬಹಿರಂಗ ಬಯಲಾಯಿತ್ತು*
*ಅಭಿನವ ಮಲ್ಲಿಕಾರ್ಜುನ*
*ನಿಮ್ಮ ಮುಟ್ಟಿದ ಕಾರಣ ನಾನೂ ಬಯಲಾದೆ.*

ಶತಮಾನಗಳ ಪರ್ಯಂತ ಹೊರೆಯಾಗಿದ್ದದ್ದು ಒಂದು ಮುಟ್ಟುವಿಕೆಯಲ್ಲಿ ಹಗುರವಾಯಿತು. ಒಂದು ಮುಟ್ಟಿನಲ್ಲಿ ಬಯಲಾಯಿತು. ಇಂಥ ಮುಟ್ಟಿನ ಅವಸ್ಥೆಯಲ್ಲಿ ಬಹಿರಂಗ ಅಂತರಂಗಗಳ ಆತ್ಮಸಂಗವಾಯಿತು. ಇದು ಮುಟ್ಟಿನ ಮಹಿಮೆ. ಇದು ಶತಮಾನಗಳ ಚರಿತ್ರೆಯ ಪಾಪಭಾರದ ಸೂತಕದ ಹೊರೆಯನಿಳುಹಿದ ಲಿಂಗಸೋಂಕಿನ ಕೇಡು.

**ಎಸ್. ಜಿ. ಸಿದ್ದರಾಮಯ್ಯ**
ಎಸ್-೧೨೩, ದೀಪ್ತಿ ಅಪಾರ್ಟ್‌ಮೆಂಟ್ಸ್, ಎಫ್-೨
ಕಿರ್ಲೋಸ್ಕರ್ ಕಾಲನಿ, ೧ನೇ ಅಡ್ಡರಸ್ತೆ, ಬಸವೇಶ್ವರನಗರ
ಬೆಂಗಳೂರು - ೫೬೦ ೦೭೯

**ಅರುಂಧತಿ ಜೋಶಿ**

**ಮ**ರೆಯುವುದು ನಮ್ಮ ಸ್ವಭಾವದಲ್ಲಿರುವ ನಿರ್ದಿಷ್ಟ ಕುಂದುಕೊರತೆಗಳಲ್ಲಿ ಒಂದು ಅವಿಭಾಜ್ಯ ಅಂಶವೆಂದು ಹೇಳಿದಾಗ, ಇದೊಂದು ಪ್ರಶ್ನಾತೀತ, ನಿರ್ವಿವಾದಿತ ಸತ್ಯವೆನ್ನುವುದು ನನ್ನ ಅನಿಸಿಕೆ. ಕೆಲವೊಮ್ಮೆ ಮರೆಗುಳಿತನ ಯಾವ ಮಟ್ಟಕ್ಕೆ ಮುಟ್ಟುವುದೆಂದರೆ, 'ಕಂಕುಳಲ್ಲಿ ಕೂಸನ್ನು ಹೊತ್ತುಕೊಂಡು, ಊರೆಲ್ಲ ಹುಡುಕಿದಳಂತೆ' ಎಂದು ಕೇಳಿಬರುವ ಗಾದೆ ಮಾತಿನಲ್ಲಿ, ಇದು ಮರೆವೆಯ ಪರಮಾವಧಿ ಎಂದು ಹೇಳಬಹುದೇನೋ! ಆ ಮಹಾತಾಯಿ ಯಾವ ಲೋಕದಲ್ಲಿದ್ದಳೋ ಏನೋ! ಸಂಸಾರದ ಜಂಜಡದಲ್ಲಿ ಮುಳುಗಿ ತೇಲಿ, ಆತಂಕದ ಅಲೆಯಲ್ಲಿ ಸಿಲುಕಿದಾಗ ಬಹುತೇಕ ಹೀಗಾಗಿರಲೂಬಹುದು.

ಅರವತ್ತಕ್ಕೆ ಅರಳು ಮರಳು ಎಂದು ಹೇಳುತ್ತಾರೆ. ಸಹಜವಾಗಿ ನಮಗೆ ಯಾವ ಬಗ್ಗೆ, ಯಾವುದರ ಬಗ್ಗೆ, ಅಷ್ಟಾಗಿ ಕೌತುಕ, ಆಸಕ್ತಿ ಇರುವುದಿಲ್ಲವೋ, ಆ ಸಂಭವಗಳು, ಹೆಸರುಗಳು ಒಮ್ಮೆಲೇ ನಮ್ಮ ಸ್ಮೃತಿಪಟಲದಲ್ಲಿ ಹಾದುಹೋಗಲು ನಿರಾಕರಿಸಿ, ಮುಷ್ಕರ ಹೂಡುತ್ತವೆ. ''ಅಯ್ಯೋ, ಮೆದುಳಿನಲ್ಲಿದೆ, ವಾಕ್ತಂತುವಿನಲ್ಲಿ ಇಳಿಯುತ್ತಿಲ್ಲ,'' ಎಂದು ಬೇಸರ ಮಾಡಿಕೊಂಡಾಗ, ಇದು ವಯೋಧರ್ಮಕ್ಕೆ ಅನುಗುಣವಾಗಿದೆಯೆಂದು ಒಪ್ಪಿಕೊಂಡುಬಿಡಬೇಕು.

ಬಳಕೆಯಲ್ಲಿರುವ ವಸ್ತುಗಳನ್ನು ಎಲ್ಲೋ ಇಟ್ಟು ಮರೆತಾಗ ಹುಡುಕಾಟದಲ್ಲಿ ಅರ್ಧ ಜೀವಮಾನ ಕಳೆದು ಹೋಗುತ್ತದೇನೋ ಅನಿಸುತ್ತದೆ. ''ಇಲ್ಲೇ ಇಟ್ಟಿದ್ದೆ, ಎಲ್ಲಿ ಹೋಯಿತು'' ಎಂದು ತಲೆ ಕೆಡಿಸಿಕೊಂಡು ಆತಂಕಕ್ಕೆ ಒಳಗಾದಷ್ಟು ನಮ್ಮ ಮಿದುಳು ಸಹಕರಿಸಲು ಒಪ್ಪುವುದಿಲ್ಲ. ಯಾವಾಗಲಾದರೊಮ್ಮೆ ಹೀಗಾದಾಗ ನನ್ನ ಮೊಮ್ಮಗ, ''ಕೂಲ್‌ಡೌನ್ ಅಜ್ಜಿ! ಕೂಲ್‌ಡೌನ್'' ಎಂದು ಉಪದೇಶ ಮಾಡುತ್ತಿದ್ದ. ಯಜಮಾನರು ಈ ಪ್ರಕರಣವನ್ನು ನಿಭಾಯಿಸುವ ರೀತಿ ಸ್ವಲ್ಪ ಓಬೀರಾಯನ ಕಾಲದ್ದೆಂದು ಅನಿಸಿದರೂ, ಇದರಲ್ಲಿ ಒಂದು ರೀತಿಯ ಪ್ರಭಾವ ಇದೆಯೆಂದು ತೋರುತ್ತಿತ್ತು. ಮರೆತು ಎಲ್ಲೋ ಇಟ್ಟ ವಸ್ತುಗಳನ್ನು ಪತ್ತೆಹಚ್ಚಲು ಈ ಮಂತ್ರವನ್ನು ಹೇಳುತ್ತಿದ್ದರು.

''ಕಾರ್ತವೀರ್ಯಾರ್ಜುನೋ ನಾಮ ರಾಜಾಬಾಹು ಸಹಸ್ರವಾನ್
ತಸ್ಯ ಸ್ಮರಣ ಮಾತ್ರೇಣ ಗತಂ ನಷ್ಟಂಚ ಲಭ್ಯತೇ''

– ಈ ತಿರುಮಂತ್ರ ಸಾಕಷ್ಟು ನಮ್ಮ ಒತ್ತಡವನ್ನು ಬಗೆಹರಿಸಿದ ಪ್ರಕರಣಗಳಿವೆ. ಬಹುತೇಕ ನಮ್ಮ ನೆನಪಿನ ಶಕ್ತಿಯನ್ನು ಜಾಗೃತಗೊಳಿಸಲು ಸಹಾಯ ಮಾಡುತ್ತದೇನೋ ಎಂದು ಮನಸ್ಸಿನಲ್ಲಿ ತರ್ಕ ಮಾಡಿದಾಗ, ಇದರಿಂದ ಸಹಾಯವಾಗಿರಬೇಕಾದರೆ ತರ್ಕಶಾಸ್ತ್ರದ ಮೊರೆಹೋಗುವುದು ಅನಗತ್ಯವೆನಿಸಿತು. ಒಂದು ವಸ್ತು ಕಳೆದುಹೋದಾಗ, ಈ ಶ್ಲೋಕ ಸಹಾಯಕ್ಕೆ ಬರುತ್ತದೆಂಬ ನಂಬಿಕೆ ಇದೆ. ಮರೆಯಾಗಿ ತಾಳ್ಮೆಯನ್ನು ಪರೀಕ್ಷಿಸುವ, ನಾವು ನಿತ್ಯ ಬಳಸುವ ವಸ್ತುಗಳಲ್ಲಿ ಕನ್ನಡಕ, ಸಂಚಾರಿ ದೂರವಾಣಿ, ಕೀಲಿಕೈ, ಲೇಖನಿ, ಕತ್ತರಿ, ಸೂಜಿ... ಹೀಗೆ ಪಟ್ಟಿ ಮಾಡುತ್ತ ಹೋಗಬಹುದು. ಎಡಗೈ ಮಾಡುವ ಕೆಲಸ ಬಲಗೈಗೆ ಗೊತ್ತಾಗುವುದಿಲ್ಲವೆಂದು ಹೇಳುವುದುಂಟು. ಅಜಾಗ್ರತೆ ಮೇಲುಗೈ ಸಾಧಿಸಿದಾಗ ವಸ್ತುಗಳನ್ನು ಎಲ್ಲೆಂದರಲ್ಲಿಟ್ಟು, ಮತ್ತೆ ಹುಡುಕುವ ಕಸರತ್ತನ್ನು ಪ್ರಾರಂಭಿಸಬೇಕು.

ಕನ್ನಡಕದ ಪುರಾಣ ಶುರುವಾಗುವುದಕ್ಕೆ ಮುನ್ನ ನೇತ್ರತಜ್ಞರು ದೂರದೃಷ್ಟಿಯೋ ಅಥವಾ ಸಮೀಪ ದೃಷ್ಟಿಯೋ ಎಂದು ತಪಾಸಣೆ ಮಾಡಿ, ದೃಢೀಕರಿಸಿದ ಲಿಖಿತ ಸಲಹೆಯನ್ನು ಬರೆದುಕೊಟ್ಟಾಗ ಕನ್ನಡಕವನ್ನು



ಧರಿಸಲೇಬೇಕಾದ ಅನಿವಾರ್ಯತೆ ಎದುರಾಯಿತು. ಕನ್ನಡಕದ ಅಂಗಡಿಗೆ ಅಧಿಕೃತ ಭೇಟಿ ನೀಡಿದಾಗ ನಮ್ಮ ಮುಂದೆ ಬಗೆಬಗೆಯ ಫ್ರೇಮುಗಳನ್ನು ಆಯ್ಕೆಗಾಗಿ ಹರಡಿಟ್ಟರು, ಎಲ್ಲರಿಗೂ ಒಪ್ಪಿಗೆ ಆದ ಒಂದು ಫ್ರೇಮನ್ನು ಆಯ್ಕೆಮಾಡಿದ ಮೇಲೆ, ಕನ್ನಡಕ ಕೈ ಸೇರಿದಾಗ, ಅದನ್ನು ಧರಿಸಿ ಮುಖದ ಶೋಭೆಯನ್ನು ಹೆಚ್ಚಿಸಿಕೊಂಡಿದ್ದೂ ಆಯ್ತು. ಇಷ್ಟೆಲ್ಲ ಕನ್ನಡಕದ ಸಂಭ್ರಮವಾದ ಮೇಲೆ ೨೪ ಗಂಟೆಯೂ ಅದನ್ನು ಧರಿಸಲು ಸಾಧ್ಯವಿಲ್ಲವಲ್ಲ! ನಿದ್ರೆಯ ಹೊತ್ತು, ಸ್ನಾನದ ಹೊತ್ತಿನಲ್ಲಿ ಅದಕ್ಕೂ ವಿರಾಮ ಕೊಡಬೇಕಲ್ಲವೇ! ಬ್ರೇಕ್ ನಂತರ ಕಾರ್ಯಕ್ರಮ ಮುಂದುವರಿಯುವುದೆಂದು ಹೇಳುವ ಟಿ.ವಿ. ಉದ್ಘೋಷಕರ ಹಾಗೆ, ಬ್ರೇಕ್ ನಂತರ ಕನ್ನಡಕಧಾರಣೆ ಮುಂದುವರಿಯಲು ಅಡೆತಡೆಗಳು ಉದ್ಭವಿಸುತ್ತವೆ. ಕನ್ನಡಕವನ್ನು ಎಲ್ಲಿಟ್ಟೆ ಎಂದು ಮರೆತುಬಿಟ್ಟರೆ ಹುಡುಕಾಟದ ಪರ್ವ ಶುರುವಾಗಲೇಬೇಕು. ನಾನು ಈ ಕಸರತ್ತನ್ನು ನಡೆಸುವಾಗ, ಯಜಮಾನರು ಹಾರಿಸುವ ಹಾಸ್ಯಚಟಾಕಿ ಹೀಗಿರುತ್ತಿತ್ತು: ''ಮಂಗಳ ಸೂತ್ರದ ಹಾಗೆ ಇದನ್ನು ಕುತ್ತಿಗೆಗೆ ಹಾರದಂತೆ ಹಾಕಿಕೊಂಡುಬಿಡು. ಎಷ್ಟು ಮಂದಿ ಇದನ್ನು ರೂಢಿಸಿಕೊಂಡು ನಿರಾಳವಾಗಿದ್ದಾರೆ ಗೊತ್ತದೇನು ? ನೀನೂ ಸಹ ಹಾಗ್ಯಾಕೆ ಮಾಡಬಾರ್ದು''... ಹೀಗೆ ಅವರು ಲೇವಡಿ ಮಾಡ್ತಿದ್ರೂ, ಯಾಕೋ ಏನೋ ನನಗಂತೂ ಈ ಉಪಾಯ ಕರಗತವಾಗಲೇ ಇಲ್ಲ.

ಸಾಧಾರಣವಾಗಿ ಎಲ್ಲರ ಮನೆಯಲ್ಲೂ ಕೀಲಿಕೈ ಪುರಾಣವೂ ಇದ್ದಿದ್ದೇ! ಮನೆಯಿಂದ ಹೊರಡಬೇಕಾದರೆ ಮನೆಯ ಬಂದೋಬಸ್ತಿಗಾಗಿ ಬಾಗಿಲಿಗೆ ಬೀಗ ಹಾಕಿಕೊಂಡೇ ಹೊರಡಬೇಕಾದ ಅನಿವಾರ್ಯತೆ ಇರುವಾಗ ನಮ್ಮ ಹತ್ತಿರ ಬೀಗದ ಕೈ ಇರಬೇಕು. ಒಮ್ಮೊಮ್ಮೆ ಇಲ್ಲೂ ಸಹ ಶನಿ ಶಿಂಗಣಾಪುರದಲ್ಲಿ ಇರುವ ಹಾಗೆ ಬಾಗಿಲುಗಳಿಲ್ಲದ ಮನೆಗಳು, ಕಳ್ಳಕಾಕರ ಕಾಟ ಇಲ್ಲದಿರುವ ಸನ್ನಿವೇಶ ಇದ್ದರೆ ಎಷ್ಟು ಸುಖ ಎಂದು ಅನ್ನಿಸಿದರೂ ಮಹಾನಗರಿಯಾದ ಬೆಂಗಳೂರಿನಲ್ಲಿ ಇದು ಅಸಾಧ್ಯವಾದ ಕನಸು. ಮನೆಬಿಟ್ಟು ಹೊರಡಬೇಕಾದರೆ ಪರ್ಸಿನಲ್ಲಿ ಕೀಲಿಕೈ ಸಿಗದಿದ್ದಾಗ, ''ಈ ಪರ್ಸಿನಲ್ಲೇ ಇಟ್ಟಿದ್ದೆ, ಎಲ್ಲಿ ಹೋಯಿತಪ್ಪಾ!'' ಎಂದು ಎಲ್ಲೆಡೆ ಹುಡುಕಿದರೂ ಸಿಗಲಿಲ್ಲ. ಎಲ್ಲೋ ಮೂಲೆಯಲ್ಲಿ ಸೇರಿಕೊಂಡುಬಿಟ್ಟಿರಬೇಕೆಂದು ಪರ್ಸನ್ನು ಉಲ್ಟಾ ಮಾಡಿ ನೋಡಿದ್ದೂ ಆಯಿತು. ''ಎಲ್ಲಿಟ್ಟಿರಬಹುದು'' ಎಂದು ತಲೆಕೆಡಿಸಿಕೊಂಡು ಮೂಲೆ ಮೊಡಕುಗಳನ್ನೆಲ್ಲ ಜಾಲಾಡಿದರೂ ಸಿಗದಿದ್ದಾಗ, ಜೋಪಾನವಾಗಿರಲೆಂದು ಬಟ್ಟೆಗಳ ಕೆಳಗೆ ಇಟ್ಟಿದ್ದು ಒಮ್ಮೆಲೇ ನೆನಪಾಯಿತು. ''ಛೇ! ಎಷ್ಟು ಅಮೂಲ್ಯವಾದ ವೇಳೆಯನ್ನು ಹುಡುಕಾಟದಲ್ಲೇ ವ್ಯರ್ಥ ಮಾಡಿದೆನಲ್ಲ ಎಂದು ಬೇಸರವಾಯ್ತು.

ಹೊರಗೆ ವಾಕಿಂಗ್ ಹೋಗಿದ್ದ ಅಪ್ಪಾಜಿ ವಾಪಸ್ಸು ಬಂದಾಗ ಬೀಗ ತೆಗೆದು ಬೀಗದ ಕೈಯನ್ನು ಅದರಲ್ಲೇ ಬಿಟ್ಟು, ಅರ್ಜೆಂಟಾಗಿ ಒಳಗೆ ಬಂದವರು, ಆಯಾಸ ಪರಿಹಾರ ಮಾಡಿಕೊಳ್ಳುತ್ತ, ಕುಳಿತಾಗ, ಬೀಗದ ಕೈಯನ್ನು ಬಾಗಿಲಲ್ಲೇ ಸಿಕ್ಕಿಸಿ ಬಂದಿರುವುದನ್ನು ಮರೆತೇಬಿಟ್ಟಿದ್ದರು. ಅದರ ಅವಶ್ಯಕತೆ ಎದುರಾದಾಗ, ಹುಡುಕಾಟ ಮತ್ತೆ ಶುರುವಾಯಿತು. ''ನೀವೇನಾದರೂ ನೋಡಿದಿರಾ ? ನೀನು ನೋಡಿದಿಯಾ ?'' ಎಂದು ಮನೆಯವರನ್ನೆಲ್ಲ ವಿಚಾರಣೆಗೆ ಒಳಪಡಿಸಿದರೂ ಫಲಮಾತ್ರ ಶೂನ್ಯ! ಮಾಮೂಲಾಗಿ ಇಡುವ ಜಾಗದಲ್ಲಿ ಸಿಗದಿದ್ದಾಗ ಪರದಾಟ, ಶೋಧ ಕಾರ್ಯ ಮಾಮೂಲಿನಂತೆ ಶುರು.

ಬಾಗಿಲನ್ನು ತೆಗೆದು ಹೊರಗೆ ಹೊರಟ ಮಗರಾಯನಿಗೆ, ಕೀಲಿಕೈ ಬಾಗಿಲಲ್ಲೇ ನೇತಾಡುತ್ತಿರುವುದು ಕಣ್ಣಿಗೆ ಬಿದ್ದಾಗ, ''ಅಪ್ಪಾ! ಬೇಗ ಬನ್ನಿ'' ಎಂದು ಅರಚಿದ. ಏನಾಗಿದೆಯೋ ಏನೋ ಎಂದು ಗಾಬರಿಯಾಗಿ ಮನೆಯವರೆಲ್ಲ ಓಡಿಬಂದರೆ ನೇತಾಡುವ ಕೀಲಿಕೈಯನ್ನು ತೋರಿಸುತ್ತ, ''ಏನಪ್ಪಾ ಇದು ? ಇಲ್ಲೇ ಇದೆ! ಎಷ್ಟು ಅವಾಂತರ ಮಾಡ್ಬಿಟ್ಟೆ. ನಿನ್ನ ಮರೆಗುಳಿತನಕ್ಕೆ ಏನ್ಹೇಳೋಣ! ಗಂಡಾಂತರವನ್ನು ಮೈಮೇಲೆ ಎಳೆದುಕೊಂಡ್ಹಾಗೆ ಆಯ್ತಲ್ಲ, ಸದ್ಯ! ಪುಣ್ಯಕ್ಕೆ ತಲೆಬಾಗಿಲ ಹೊರಗೆ ಸ್ಪ್ರಿಂಗ್ ಬಾಗಿಲು ಇರೋದರಿಂದ ಹೊರಗಿನವರ ಕಣ್ಣಿಗೆ ಬೀಳದೆ ಬಚಾವ್. ಕಳೆದೇ ಹೋಗಿದ್ರೆ ಬೀಗದ ಸೆಟ್ಟನ್ನೇ ಬದಲಾಯಿಸಬೇಕಿತ್ತಲ್ಲೇ ?!'' ಎಂದು ಬಡ ಬಡಿಸಿದ. ಅಪ್ಪಾಜಿ ಗರಬಡಿದವರ ಹಾಗೆ ನಿಂತುಬಿಟ್ಟರು.

''ಹಾಳಾದ ಮರೆವೆ. ಇದಕ್ಕೆ ಏನಾದರೂ ಇಲಾಜು ಮಾಡ್ಕೋಬೇಕೋ ಏನೋ ?'' ಎಂದು ಗೊಣಗುತ್ತ ಕೀಲಿಕೈ ಗೊಂಚಲನ್ನು ಹಿಡಿದು ಒಳಗೆ ನಡೆದೇಬಿಟ್ಟರು.

ಆಧುನಿಕ ಯುಗದ ಅವಿಭಾಜ್ಯ ಅಂಗವಾಗಿಬಿಟ್ಟಿರುವ ಸಂಚಾರಿ ದೂರವಾಣಿಯನ್ನು ದೇಹದ ಒಂದು ಭಾಗದಂತೆ ಕೈಯಲ್ಲಿ ಹೊತ್ತುಕೊಂಡು ಸುತ್ತಮುತ್ತ ತಿರುಗಾಡುವವರದೇ ಮೇಲುಗೈ. ನೂರಕ್ಕೆ ತೊಂಬತ್ತು ಜನಕ್ಕೆ ಇದಿಲ್ಲದೆ ಅನ್ನ ನೀರು ಗಂಟಲಲ್ಲಿ ಇಳಿಯುವುದಿಲ್ಲ. ಅಕಸ್ಮಾತ್ ತುರ್ತಾಗಿ ಬೇರೆ ಕೆಲಸ ಅಂಟಿಕೊಂಡಾಗ ಈ ''ಮೊಬೈಲ್ ಪ್ರಾಣಿ''ಗಳು, ತಾತ್ಕಾಲಿಕವಾಗಿ ಅದನ್ನು ದೂರವಿಟ್ಟು ಕಾರ್ಯ ನಿರತರಾದಾಗ ಮತ್ತೆ ಅಗತ್ಯಬಿದ್ದಾಗ ಮಾತ್ರ ಅದರ ನೆನಪಾಗುತ್ತೆ. ಕೈಯಲ್ಲಿಲ್ಲ.. ಅದರ ಸಂಚಿಯಲ್ಲಿಲ್ಲ... ಎಲ್ಲೂ ಇಲ್ಲ. ''ನನ್ನ ಮೊಬೈಲನ್ನು ಇಲ್ಲೇ ಎಲ್ಲೋ ಇಟ್ಟಿದ್ದೆ. ನೀವ್ಯಾರಾದರೂ ನೋಡಿದಿರಾ'' ಎಂದು ಸುತ್ತಿರುವವರನ್ನೆಲ್ಲ ವಿಚಾರಿಸಿದರೂ, ಮೊಬೈಲ್ ನಾಪತ್ತೆ. ತಲೆ ಬಿಸಿ ಮಾಡಿಕೊಳ್ಳದೆ ಸುಲಭೋಪಾಯ ನಮ್ಮ ಕೈಯಲ್ಲೇ ಇರಬೇಕಾದರೆ ಧೃತಿಗೆಡದೆ ಮೊಬೈಲನ್ನು ಪತ್ತೆ ಮಾಡಬಹುದೆಂದು, ಬೇರೆ ದೂರವಾಣಿಯಿಂದ ಸಂಚಾರಿ ದೂರವಾಣಿಯ ಸಂಖ್ಯೆಯನ್ನು ಸಂಪರ್ಕಿಸಿದಾಗ ಎಲ್ಲೋ ಒಂದು ಮೂಲೆಯಲ್ಲಿ ಫೋನಿನ ಸಂಗೀತ ಕೇಳಿಸುತ್ತಿತ್ತು. ಅದರ ಕಲರವದ ದಿಕ್ಕಲ್ಲಿ ಸಾಗಿ, ಹುಡುಕುತ್ತ ಹೊರಟಾಗ ಸಿಕ್ಕಿತು. ಪತ್ತೆಯಾದ ಮೇಲೆ ಮೊಬೈಲನ್ನು ಪುನಃ ಕೈಯಲ್ಲಿ ಪ್ರತಿಷ್ಠಾಪನೆ ಮಾಡಿದ್ದಾಯಿತು. ಒಟ್ಟಾರೆ ಅದರ ಹುಡುಕಾಟದಲ್ಲಿ ನಮ್ಮ ಸಂಚಾರ ಹೆಚ್ಚಾಗಿತ್ತು.

ಶಾಶ್ವತವಾಗಿ ಸ್ಥಿರ ದೂರವಾಣಿಯ ಹತ್ತಿರ ಒಂದು ಪೆನ್ನೆಂದೇ ಪ್ರಸಿದ್ಧವಾಗಿರುವ ಲೇಖನಿಯನ್ನು ಇಟ್ಟಿದ್ದರೂ, ಬೇಕೆಂದಾಗ ಅದೇ ಜಾಗದಲ್ಲಿ ಇರುತ್ತಿರಲಿಲ್ಲ. ವಿಚಾರಣೆ ಮಾಡಿದರೂ ಪ್ರಯೋಜನವಾಗದಿದ್ದಾಗ ಬೇರೆ ಲೇಖನಿಯನ್ನು ತಂದಿಟ್ಟರೂ, ಅದೂ ಸಹ ಮಾಯವಾಗಿಬಿಟ್ಟಿರುತ್ತಿತ್ತು. ಕಾಣೆಯಾದ ಲೇಖನಿಗಳ ನಿಗೂಢ ರಹಸ್ಯ ಏನಿರಬಹುದೆಂದು ಪತ್ತೇದಾರಿ ಕೆಲಸ ಮಾಡಿದಾಗ ಒಂದೇ ನಮೂನೆಯ ಲೇಖನಿಗಳಿರುವಾಗ ಅದರ ಮಾಲೀಕತ್ವವನ್ನು ಪ್ರಶ್ನಿಸುವುದು ಸ್ವಲ್ಪ ಕಷ್ಟ. ಎಲ್ಲಿ ಹೋಗಿದೆಯೋ ತಮಗೆ ಗೊತ್ತಿಲ್ಲವೆಂದು ಮನೆಯ ಸದಸ್ಯರು ಹೇಳುವಾಗ ಓಡಿಹೋಗಲು ಅದಕ್ಕೆ ಕಾಲಂತೂ ಇಲ್ಲ, ಎರಡು ಕಾಲಿನ ಮನುಷ್ಯರದೇ ಕಾರಬಾರ. ಕೊನೆಗೆ ಇದಕ್ಕೆ ಪರಿಹಾರ, ಇದನ್ನು ದೂರವಾಣಿಗೆ ಒಂದು ದಾರದಿಂದ ಕಟ್ಟಿದ ಮೇಲೆ ಆಗಬಹುದೆಂದು ಕೆಲವರ ಸಲಹೆ.

ದಿನನಿತ್ಯದ ಈ ಕಣ್ಣಾಮುಚ್ಚಾಲೆಯಾಟ ಮನೆಯ ಬೇರೆ ಬೇರೆ ವಿಭಾಗಗಳಲ್ಲೂ ಅಗ್ರಪಂಕ್ತಿಯಲ್ಲಿದೆ. ಪತಿದೇವರ ಮತ್ತು ಕುಲದೀಪಕನ ಸಾಕ್ಸ್ ಎನ್ನುವ ಕಾಲುಚೀಲ, ಶಾಲೆಗೆ, ಆಫೀಸಿಗೆ ಹೊರಡುವಾಗ ಕಣ್ಮರೆಯಾದರೆ, ಒಂಟಿ ಕಾಲುಚೀಲವನ್ನು ಹಿಡಿದುಕೊಂಡು, ಶಾಲೆಯ ಬಸ್ಸಿಗೆ ಹೊತ್ತಾಯಿತೆಂದು ಕುಣಿಯುವ ಮಗರಾಯ, ''ಆಫೀಸ್ ವ್ಯಾನ್ ಬಾಗಿಲಲ್ಲಿ ಕಾಯ್ತಿದೆ, ಸಾಕ್ಸ್ ಹುಡುಕಿ ಕೊಡು'' ಎಂದು ಯಜಮಾನರ ತಗಾದೆ, ಎಲ್ಲವೂ ಬೆಳಗಿನ ರಂಪ ರಾಮಾಯಣದ ಘಟನಾವಳಿಗಳಾಗಿ ಅನಾವರಣಗೊಳ್ಳುತ್ತವೆ. ಇಂತಹ ದೃಶ್ಯಗಳು ಮನೆ ಮನೆಯಲ್ಲೂ ಮಾಮೂಲಾಗಿ ಕಾಣಲು ಸಿಗುವುದಲ್ಲವೇ!

ಎಲ್ಲರೂ ಹೊರಟಮೇಲೆ ಮನೆ ಸುನಾಮಿ ಅಪ್ಪಳಿಸಿದ ಕಡಲತೀರದಂತೆ ಅಸ್ತವ್ಯಸ್ತ ವಾಗಿರುವಾಗ, ಹತ್ತು ಹದಿನೈದು ನಿಮಿಷಗಳಾದರೂ ಶಾಂತವಾಗಿ ಯೋಗಮುದ್ರೆಯಲ್ಲಿ ಕುಳಿತರೆ ಮಾತ್ರ ಸಂಸಾರ ನೌಕೆಯನ್ನು ಮುಂದೆ ಸಾಗಿಸಲು ಸಾಧ್ಯ!



**ಅರುಂಧತಿ ಜೋಶಿ**
ಬಿ-೦೦೩, ಕೃಷ್ಣ ಡೈಮೆಂಡ್ ಅಪಾರ್ಟ್‌ಮೆಂಟ್ಸ್, ೪೭/೨, 'ಎ' ಬ್ಲಾಕ್
ಸಹಕಾರನಗರ, ಬೆಂಗಳೂರು - ೫೬೦ ೦೯೨




# ನಾನೂ ಸಾಧನಕೇರಿಗೆ ಬಂದೆ...

ಮಹೇಶ್ವರಿ ಕೋಟಿ

ಧಾರವಾಡಕ್ಕೆ ಒಂದೆರಡು ಸಾರಿ ಮೊದಲು ಬಂದು ಹೋಗಿದ್ದೆ. ಆದರೆ ಬಿ.ಎಸ್‌ಸಿ. ಮುಗಿದ ಮೇಲೆ ಉನ್ನತ ವ್ಯಾಸಂಗಕ್ಕಾಗಿ ವಿಶ್ವವಿದ್ಯಾಲಯಕ್ಕೆ ಅರ್ಜಿ ಹಾಕಲು ಬಂದಾಗಲೇ ಅದರ ನಿಜವಾದ ಸೊಬಗನ್ನು ನಾನು ಕಣ್ತೆರೆದು ನೋಡಿದ್ದು. ಅರ್ಜಿ ಹಾಕಲು ಅಪ್ಪ-ಅವ್ವನೂ ಜೊತೆಗೆ ಬಂದಿದ್ದರು. ಎರಡು ದಿನ ಸುತ್ತಾಡುವಾಗ ಊರ ತುಂಬೆಲ್ಲ ಅರೆ-ನಿತ್ಯಹರಿದ್ವರ್ಣ ಧಾರವಾಡದ ಹಸುರಿನಷ್ಟೇ ಮನಸೆಳೆದದ್ದು ವಿವಿಧ ಮಹನೀಯರ ಹೆಸರುಗಳುಳ್ಳ ರಸ್ತೆಗಳು, ವೃತ್ತಗಳು; ರೊದ್ದ ರಸ್ತೆ, ಅರಟಾಳ ರುದ್ರಗೌಡ್ರ ರಸ್ತೆ, ಡೆಪ್ಯೂಟಿ ಚೆನ್ನಬಸಪ್ಪ ರಸ್ತೆ, ಬಸವರಾಜ ಕಟ್ಟಿಮನಿ ವೃತ್ತ, ಸರ್ ಸಿದ್ದಪ್ಪ ಕಂಬಳಿ ವೃತ್ತ, ಸ. ಸ. ಮಾಳವಾಡ ರಸ್ತೆ, ಇತ್ಯಾದಿ. ಮತ್ತೆ ಕಿರೀಟಪ್ರಾಯವಾದ 'ಪಾವಟೆ ನಗರ'; ನಮ್ಮ ಕ.ವಿ.ವಿ. ಆವರಣ. ಆವರಣದಲ್ಲಿ ಸುತ್ತಾಡುವಾಗ ಅಪ್ಪ ಕ.ವಿ.ವಿ.ಯ ಆವರಣಕ್ಕೆ 'ಪಾವಟೆ ನಗರ' ಎಂದು ಹೆಸರು ಏಕೆ ಬಂತು, ಡಿ. ಸಿ. ಪಾವಟೆಯವರು ಪಟ್ಟ ಶ್ರಮ, ಎಲ್ಲವನ್ನು ಬಣ್ಣಿಸಿದ ಮೇಲಂತೂ ಕುತೂಹಲ ತಾಳಲಾಗಲಿಲ್ಲ. ಮಾರನೇ ದಿನ ಬಾಗಲಕೋಟೆಗೆ ಮರಳಿದ ತಕ್ಷಣ ಮನೆಯ ಗ್ರಂಥಾಲಯದಲ್ಲಿ 'ಧಾರವಾಡದ ಮರೆಯಲಾರದ ಮಹನೀಯರು' ಪುಸ್ತಕಕ್ಕಾಗಿ ಹುಡುಕಿದೆ. ಎರಡು ದಿನ ಧಾರವಾಡದಲ್ಲಿ ನಾನು ಕಂಡ ಹೆಸರುಗಳನ್ನೆಲ್ಲ ಹುಡುಕಿ ಓದಿದೆ. ಏನೋ ಒಂದು ಅಭಿಮಾನ ಉಕ್ಕಿ ಬಂತು. ವಿ.ವಿ.ಯ ಆವರಣವಂತೂ ನನಗೆ ಪವಿತ್ರ ಸ್ಥಳದಂತೆ ಭಾಸವಾಯ್ತು. ಪಾವಟೆಯವರ ಕರ್ತೃತ್ವ ಶಕ್ತಿಗೆ ತಲೆ ಬಾಗಿದೆ. ಅಂಥದ್ದರಲ್ಲಿ ಧಾರವಾಡದಲ್ಲೇ ಇದ್ದು ಕಲಿಯಬೇಕೆಂದುಕೊಂಡ ಮೇಲೆ ಇನ್ನೊಂದು ಜಾಗ ಕೆಣಕಲಾರದೇ ಇದ್ದೀತೇ ? ಅದೇ, ದತ್ತಜ್ಜನ ಸಾಧನಕೇರಿ !

*ಬಾರೊ ಸಾಧನಕೇರಿಗೆ ಮರಳಿ ನಿನ್ನೀ ಊರಿಗೆ*
*ಮಳೆಯು ಎಳೆಯುವ ತೇರಿಗೆ*
*ಹಸಿರು ಏರಿದೆ ಏರಿಗೆ*
*ಹಸಿರು ಸೇರಿದೆ ಊರಿಗೆ*
*ಹಸಿರು ಚಾಚಿದೆ ದಾರಿಗೆ*
*ನಂದನದ ತುಣುಕೊಂದು ಬಿದ್ದಿದೆ*
*ನೋಟ ಸೇರದು ಯಾರಿಗೆ ?*
*ಬಾರೋ ಸಾಧನಕೇರಿಗೆ ?...*

ಈ ಸಾಲುಗಳನ್ನು ಆಗಾಗ ಅಲ್ಲಿ ಇಲ್ಲಿ ಕೇಳುತ್ತಲೇ ಇದ್ದೆ. ಆದರೆ ಒಂದು ವರ್ಷ ಎಂ.ಇಡಿ.ಗಾಗಿ ಧಾರವಾಡದಲ್ಲೇ ಇದ್ದರೂ, ಕರ್ನಾಟಕ ಕಾಲೇಜ್ ಹತ್ತಿರವೇ ನನ್ನ ಅಧ್ಯಯನ ಪೀಠ ಮತ್ತು ವಸತಿ ನಿಲಯವಿದ್ದರೂ ನನಗೆ ಸಾಧನಕೇರಿಗೆ ಹೋಗಲಾಗಲೇ ಇಲ್ಲ. ಊರಿಗೆ ಅಡ್ಡಾಡುವಾಗ ಸಾಧನಕೇರಿಯ ಬಸ್ ಬೋರ್ಡ್ ನೋಡಿದಾಗಲೆಲ್ಲ, ಹುಬ್ಬಳ್ಳಿ-ಧಾರವಾಡ ಮಧ್ಯ ಅಡ್ಡಾಡುವ 'ಬೇಂದ್ರೆ ಬಸ್'ಗಳನ್ನು ನೋಡಿದಾಗಲೆಲ್ಲ ಸಾಧನಕೇರಿಗೆ ಹೋಗುವ ಆಸೆ ತೀವ್ರಗೊಳ್ಳುತ್ತಿತ್ತು. ಆದರೆ ನಿತ್ಯದ ಆಟ-ಪಾಠಗಳಲ್ಲಿ ಸಮಯ ಕಳೆದದ್ದೇ ತಿಳಿಯಲಿಲ್ಲ, ಎಂ.ಇಡಿ. ಮುಗಿಯಿತು, ಸಾಧನಕೇರಿಯನ್ನು ನೋಡುವ ಆಸೆ ಹಾಗೇ ಉಳಿದುಬಿಟ್ಟಿತು.

ನಂತರ ಎಂ.ಎಸ್‌ಸಿ.ಗಾಗಿ ಮತ್ತೆ ಧಾರವಾಡಕ್ಕೆ ಬಂದ ಮೇಲಾದರೂ ಸಾಧನಕೇರಿಗೆ ಹೋಗೇ ಬರಬೇಕೆಂದು ನಿರ್ಧರಿಸಿದೆ. ಥೇ ! ನನ್ನ ಆಲಸ್ಯತನಕ್ಕಿಷ್ಟು ಬೆಂಕಿ ಹಾಕಾ ! ಒಂದು ವರ್ಷ ಕಳೆದರೂ ಈ ಸಲವೂ ಹೋಗಲೇ ಇಲ್ಲ. ಕಡೆಗೆ ಮೂರನೇ ಸೆಮಿಸ್ಟರ್ ಮುಗಿದ ಮೇಲೆ ದಿನಪತ್ರಿಕೆಯಲ್ಲಿ ಹೆದ್ದಾರಿ ವಿಸ್ತರಣೆಗಾಗಿ 'ಕಡಲ ತೀರ ಭಾರ್ಗವ' ಶಿವರಾಮ ಕಾರಂತರ ಮನೆಯನ್ನು ತೆರವುಗೊಳಿಸಿದ್ದು ಓದಿದೆ. ಜೀವ ಜಲ್ಲೆಂದಿತು ! ಮುಂದೊಂದು ದಿನ ಕನ್ನಡಿಗರೆದೆಯ ಭಾವತಂತಿಯನ್ನು ಮೀಟಿದ ವೈಣಿಕನ ಧ್ಯಾನಮಂದಿರವೂ ಇಲ್ಲವಾದಂತಾದರೆ ?? ಯಾವ ಯಾವ ಕೆಲಸಗಳಿಗಾಗಿ ಯಾವ ಯಾವ ವಸ್ತುಗಳು ಗೌಣವಾಗುತ್ತ ಹೋಗುತ್ತವೆಯೋ ? ಹಿಂದೆ ಸಾಂಸ್ಕೃತಿಕ ಸಂಪತ್ತುಗಳಾಗಿ ಕಾಣುತ್ತಿದ್ದ ಕವಿ, ಲೇಖಕ, ಹೋರಾಟಗಾರರ ಮನೆಗಳೆಲ್ಲ ಈಗ ತೊಡಕುಗಳಾಗಿ ಹೋದವು!! ಅಂಥದೊಂದು ಭಯ ಆವರಿಸಿದ್ದೇ ತಡ ಗೆಳತಿಯರನ್ನೆಲ್ಲ ಒಟ್ಟುಗೂಡಿಸಿಕೊಂಡು ಸಾಧನಕೇರಿಗೆ ಹೋಗೇಬಿಟ್ಟೆ.

ಧಾರವಾಡದ ಸಿ.ಬಿ.ಟಿ.ಯಲ್ಲಿ ಬಸ್‌ಗಾಗಿ ಕಾಯುತ್ತಿದ್ದೇವೆ, ದಿನಾ ಎಷ್ಟೋ ಬಸ್‌ಗಳು ನನ್ನ ಕಣ್ಣಮುಂದೆಯೇ ಓಡಾಡುತ್ತಿದ್ದರೂ ಇವತ್ತು ಒಂದು ತಾಸು ಕಳೆದರೂ ಸಾಧನಕೇರಿಯ ಯಾವ ಬಸ್ಸೂ ಇಲ್ಲ. ಸಮಯ ಕಳೆಯಲು ತೆಗೆದುಕೊಂಡ ಐಸ್ ಕ್ರೀಂ, ಹುರಿಗಡಲೆ, ಚಾಕ್ಲೇಟ್, ಯಾವುದೂ ರುಚಿಸುತ್ತಿಲ್ಲ.

ಸರಿಸುಮಾರು ಮೂರು ಗಂಟೆಗೆ ಸಾಧನಕೇರಿ ಬಸ್

ಬಂತು. ಸಿ.ಬಿ.ಟಿ.ಯಿಂದ ಸಾಧನಕೇರಿಗೆ ಹತ್ತು-ಹದಿನೈದು ನಿಮಿಷಗಳ ದಾರಿಯಿರಬಹುದೇನೋ. ಆದರೆ ಅಲ್ಲಿ ಹೋಗಿ ಮುಟ್ಟುವವರೆಗಿನ ತವಕವನ್ನೇನು ಹೇಳಲಿ? ಅಂಥದ್ದರಲ್ಲಿ ಬಸ್ ನಿಂತದ್ದು ಬೇಂದ್ರೆಯವರ ಮನೆಯ ಮುಂದೆ! ಅಷ್ಟು ದೊಡ್ಡ ಕವಿ/ಲೇಖಕನೊಬ್ಬನ ಮನೆಯನ್ನು ನಾನು ಕಂಡದ್ದು ಅದೇ ಮೊದಲು! ಕಾಂಪೌಂಡ್ ಮೇಲಿನ ಹಳೆಯ, ಮೂಲ ಫಲಕವನ್ನು ನೋಡಿಯೂ ನಂಬಲಾಗುತ್ತಿಲ್ಲ. ಪಕ್ಕದಲ್ಲಿ ಯಾರನ್ನೋ ಕೇಳಿದೆವು. ಹೌದು, ಅದು ಬೇಂದ್ರೆಯವರು ವಾಸವಿದ್ದ 'ಶ್ರೀ ಮಾತಾ'ನೇ ಆಗಿತ್ತು. ತಕ್ಷಣ ಒಳಗೆ ಹೋಗಲು ಮನಸ್ಸೇ ಬಾರದು. ನನಗಂತೂ ಅದು ಎಷ್ಟೋ ಕಾಲ ಪೂಜೆ ಮಾಡಿ ತೈಲ ಹೊಯ್ದು ಮಿರುಗುವ ಮೂರ್ತಿಯನ್ನು ನೋಡಿದಾಗ ಭಾಸವಾಗುವ ತೇಜಸ್ಸು ನಮ್ಮನ್ನು ಸ್ವಾಗತಿಸಿದಂತಾಯ್ತು.

ಗೇಟು ತೆಗೆದು ಒಳಗೆ ಹೊರಟೆವು. ಆ ಗೇಟನ್ನು ಬೇಂದ್ರೆಯವರು ಮುಟ್ಟಿರಬಹುದಲ್ಲವೇ ಎಂಬ ಭಾವನೆಗೇ ಮೈಯಲ್ಲಿ ಮಿಂಚು ಸಂಚರಿಸಿದಂತಾಯ್ತು. ಎದುರಿಗೇ ಇದ್ದ ಕಟ್ಟೆಯ ಮೇಲಿನ 'ಶ್ರೀ ಮಾತಾ'ವನ್ನು ಪ್ರವೇಶಿಸುವ ಮುನ್ನ ಕಟ್ಟೆಯನ್ನು ಹತ್ತಿ ಮನೆಯ ಆವರಣವನ್ನೆಲ್ಲಾ ನಿರೀಕ್ಷಿಸಿದೆ. ಗೇಟಿನ ಒಳಗೆ ಎಡಮೂಲೆಯಲ್ಲಿ ಮಧ್ಯಮ ಗಾತ್ರದ ಸಿಮೆಂಟ್ ಚೌಕಟ್ಟಿನಲ್ಲಿ ಬೇಂದ್ರೆಯವರ ಭಾವಚಿತ್ರವನ್ನು ಬಿಡಿಸಲಾಗಿತ್ತು. ಪಕ್ಕದಲ್ಲಿಟ್ಟಿದ್ದ ಫಲಕದ ಮೇಲೆ ಬರೆಯಲ್ಪಟ್ಟಿದ್ದವು ಮತ್ತದೇ ಸಾಲುಗಳು –

*ಬಾರೋ ಸಾಧನಕೇರಿಗೆ*
*ಮರಳಿ ನಿನ್ನೀ ಊರಿಗೆ...*
*ನಂದನದ ತುಣುಕೊಂದು ಬಿದ್ದಿದೆ*
*ನೋಟ ಸೇರದು ಯಾರಿಗೆ ?*
*ಬಾರೋ ಸಾಧನಕೇರಿಗೆ...*

ಈ ಸಲ ನಾನು ಬೇಂದ್ರೆ ಅಜ್ಜನಿಗೆ ಧೈರ್ಯದಿಂದ ಉತ್ತರಿಸಿದೆ, ''ನಾನೂ ಸಾಧನಕೇರಿಗೆ ಬಂದೆ.''

ಚಿಕ್ಕದಾದ ಆ ಕಾಂಪೌಂಡಿನಲ್ಲೆಲ್ಲ ಅಡ್ಡಾಡಿ ತುಂಬಾ ಹಳೆಯದಾಗಿರಬಹುದಾದ ಗಿಡ-ಮರಗಳಿಗಾಗಿ ಹುಡುಕಾಡಿದೆವು. ಕಾರಣ ? ಮತ್ತದೇ, ಬೇಂದ್ರೆಯವರು ಆ ಗಿಡ ನೆಟ್ಟಿರಬಹುದು, ಅದಕ್ಕೆ ನೀರೆರೆದಿರಬಹುದು !

'ಶ್ರೀ ಮಾತಾ' ಮನೆಯ ಬಾಗಿಲು ತಟ್ಟಿದೆವು. ನಮಗೆಲ್ಲ ಪುರುಸೊತ್ತೇ ಇಲ್ಲ. ಯಾರು ಬಾಗಿಲು ತೆರೆಯಬಹುದು? ಒಳಗೆ ಏನಿರಬಹುದು? ಗೆಳತಿಯರೆಲ್ಲ ಪಿಸುಗುಟ್ಟುತ್ತಿದ್ದೆವು, ಬಾಗಿಲು ತೆರೆಯಿತು. ಅಚ್ಚುಕಟ್ಟಾಗಿ ಕರಿ ಪ್ಯಾಂಟು, ತುಂಬು ತೋಳಿನ ಗೀರಿನ ಶರ್ಟು, ಮೇಲೊಂದು ಬಾದಾಮಿ ಬಣ್ಣದ ಸ್ವೆಟರ್ ತೊಟ್ಟ ಹಿರಿಯರೊಬ್ಬರು ಬಾಗಿಲು ತೆರೆದರು. ತೀರಾ 'ಅಜ್ಜ' ಎಂದು ಸಂಬೋಧಿಸಲಾಗದೇ 'ಅಂಕಲ್' ಎಂದೆವು. ಅಂಕಲ್ ಏನೂ ಮಾತನಾಡಲಿಲ್ಲ. ಒಳಗೆ ಬರುವಂತೆ ಸನ್ನೆ ಮಾಡಿ ತಾವು ಮರಳಿ ಬಲಮೂಲೆಗಿದ್ದ ತಮ್ಮ ಮೇಜಿಗೆ ಹೋಗಿ ಕುಳಿತರು. ಆ ಪಡಸಾಲೆ ಚಿಕ್ಕದು. ಸುಮಾರು ೧೦x೨೦ ಗಾತ್ರದ್ದಿರಬಹುದೇನೋ. ಗೋಡೆಗುಂಟ ಅಲ್ಮಾರಿಗಳು. ಅದರಲ್ಲೆಲ್ಲ ಬೇಂದ್ರೆ ನೆನಪಿನ ಗುಚ್ಛಗಳು !

ಅಲ್ಮಾರಿಗಳಲ್ಲಿನ ವಸ್ತುಗಳನ್ನೆಲ್ಲ ಮುಟ್ಟಬೇಕೆಂಬ ಆಸೆಯಾಯ್ತು. ಅಲ್ಲಿದ್ದದ್ದು ತೀರಾ ಹತ್ತಿರದಿಂದ, ಪ್ರೀತಿಯಿಂದ ಬೇಂದ್ರೆಯವರು ಬಳಸಿದ, ಸಂಗ್ರಹಿಸಿದ ವಸ್ತುಗಳು, ನೆನಪಿನ ಕಾಣಿಕೆಗಳು; ಅವರು ತೊಟ್ಟ ಬಟ್ಟೆ, ಬಳಸಿದ ಛತ್ರಿ, ಚಪ್ಪಲಿ, ಪೂಜಾ ಮಣಿ, ಪಾತ್ರೆ, ರುದ್ರಾಕ್ಷಿ ಮಾಲೆ, ಇತ್ಯಾದಿಯಿಂದ ಹಿಡಿದು 'ನಾಕು ತಂತಿ', 'ನವಿಲು ಗರಿ', 'ಸಖಿ ಗೀತ' ಮತ್ತಿತರ ಮೂಲ ಪ್ರತಿಗಳು ಹಾಗೂ ಅವರ ಪ್ರತಿಭೆಗೆ ಕಲಶವಿಟ್ಟ ಜ್ಞಾನಪೀಠ, ಪದ್ಮಶ್ರೀ, ಇನ್ನೂ ಅನೇಕ ಪ್ರಶಸ್ತಿ ಪದಕಗಳು, ಪ್ರಮಾಣ ಪತ್ರಗಳು, ಭಾವಚಿತ್ರಗಳು...


'ಶ್ರೀಮಾತಾ' ಆವರಣದಲ್ಲಿ ಬೇಂದ್ರೆಯವರ ಭಾವಚಿತ್ರ

ಸುಮಾರು ಒಂದು ತಾಸು ನಿಂತು ಎಲ್ಲ ನೋಡಿದೆವು. ಎದುರಿಗೆ ಒಂದು ಬಾಗಿಲು ಪರದೆ ಇಳಿಬಿಟ್ಟಿದ್ದರು. ಅದು ತೀರಾ ಬಳಕೆಯ ಮನೆಗಳಲ್ಲಿರುವಂತೆಯೇ ತೋರಿತು. ಹೀಗಾಗಿ ಒಳಗೆ ಜನರೂ ಇರಬಹುದೆಂದು ಮಾತನಾಡಿಕೊಳ್ಳುತ್ತ ಒಬ್ಬೊಬ್ಬರಾಗಿ ಹೊರನಡೆದೆವು. ನಾವು ಕೇಳಿದ ಒಂದೆರಡು ಪ್ರಶ್ನೆಗಳಿಗೆ ಅಲ್ಲಿದ್ದ 'ಅಂಕಲ್' ಚಿಕ್ಕದಾಗಿ ಚೊಕ್ಕದಾಗಿ ಉತ್ತರಿಸಿ ಸುಮ್ಮನೆ ನಿಂತಿದ್ದರು. ಅವರ ಶ್ರವಣ ಶಕ್ತಿ ಕಡಿಮೆ ಎಂದು ಕಿವಿಯಲ್ಲಿದ್ದ ಮಷೀನ್ ಹೇಳುತ್ತಿತ್ತು. ಹೀಗಾಗಿ ನಾವು ಹೆಚ್ಚೇನೂ ಕೇಳಾಡಲಿಲ್ಲ. ಕೊನೆಗೆ ಬರುವಾಗ ನಾನು ಅವರನ್ನು ಕುರಿತು, ''ನೀವು ಇದನ್ನೆಲ್ಲ ನೋಡಿಕೊಳ್ತೀರೀ ?'' ಎಂದು ಕೇಳಿದೆ. ''ಆಂ ?'' ಎಂದರು ಕಿವಿಯ ಹಿಂದೆ ಬೆರಳಿಟ್ಟುಕೊಳ್ಳುತ್ತಾ. ಮತ್ತೊಮ್ಮೆ

ವರಕವಿ ದ. ರಾ. ಬೇಂದ್ರೆ ರಾಷ್ಟ್ರೀಯ ಟ್ರಸ್ಟ್ ಎದುರು

ಕೇಳಿದೆ, ನೀವು ಇಲ್ಲೇ ಇರ್ತೀರೀ ? ಅಂದ್ರ ನೀವು ಇಲ್ಲಿ... (ನೀವ್ಯಾರು ? ನೋಡಿಕೊಳ್ಳಲು ನೇಮಿಸಲ್ಪಟ್ಟವರೇ ? ಎಂಬರ್ಥದಲ್ಲಿ) ಎಂದು ಸಂಜ್ಞೆ ಮಾಡಿದೆ. ಅವರು ''ನಾನು ವಾಮನ ಬೇಂದ್ರೆ'' ಎಂದರು! ಅವರನ್ನು ಆ ರೀತಿ ಕೇಳಿದ್ದಕ್ಕೆ ಜೀವ ತುಂಬಾ ಕಜೀಲಾಗಿಹೋಯಿತು. ಕ್ಷಮಿಸಿಬಿಡಿ ಎಂಬಂತೆ ಎದೆಗೆ ಕೈ ಒತ್ತಿಕೊಳ್ಳುತ್ತಾ ''ಓಹೋ!'' ಎಂದು ಉದ್ಗರಿಸಿ ಎರೆಡೆರಡು ಸಾರಿ ನಮಸ್ಕರಿಸಿ ಜಾಗ ಖಾಲಿ ಮಾಡಿದೆ. ಅವರು ಹೊರಗೆ ಮುಖಮಾಡಿ ನಿಂತಿದ್ದರು. ಮೊಬೈಲ್‌ನಿಂದ ಒಂದು ಫೋಟೋ ಕ್ಲಿಕ್ಕಿಸಿಕೊಂಡು ಬಂದೆ.

ಪಕ್ಕದಲ್ಲೇ ಇರುವ ನಮ್ಮ ಘನ ಸರ್ಕಾರ ನಿರ್ಮಿಸಿರುವ 'ವರಕವಿ ದ. ರಾ. ಬೇಂದ್ರೆ ರಾಷ್ಟ್ರೀಯ ಟ್ರಸ್ಟ್'ಗೆ ಹೋದೆವು. ಅದು ಉತ್ತಮ ಸ್ಥಿತಿಯಲ್ಲಿ ನಿರ್ವಹಿಸಲ್ಪಡುತ್ತಿದ್ದುದನ್ನು ನೋಡಿ ತುಂಬ ಖುಷಿಯಾಯಿತು. ಅಲ್ಲಿನ ಸಭಾಭವನದ ಮೇಲೆ ಬೇಂದ್ರೆಯವರ ಭಾವಚಿತ್ರಗಳ ವಿಶೇಷ ಪ್ರದರ್ಶನವಿದೆ. ಅವರ ಕಾವ್ಯದ ತುಣುಕುಗಳಿಗೆ ಸೂಕ್ತವಾಗುವಂತೆ ವಿವಿಧ ಭಾವಚಿತ್ರ, ಚಿತ್ರಪಟಗಳನ್ನೂ ಚಿತ್ರಿಸಿ ಪ್ರದರ್ಶಿಸಲಾಗಿದೆ. ಬೇಂದ್ರೆಯವರ ಜೀವಮಾನದ ವಿವಿಧ ಘಟನೆಗಳನ್ನು ಬಿತ್ತರಿಸುವ ಭಾವಚಿತ್ರಗಳನ್ನು ನೋಡಿ ಸಂತೋಷವಾಯಿತು, ಚಿತ್ರವೊಂದರಲ್ಲಿ ಬೇಂದ್ರೆಯವರು ಕವನ ವಾಚಿಸುತ್ತಿದ್ದರು. ವಾರದ ಹಿಂದಷ್ಟೇ ಓದಿದ 'ಆಡಾಡತ ಆಯುಷ್ಯ'ದಲ್ಲಿ ಗಿರೀಶ ಕಾರ್ನಾಡರು ಬಿಂಬಿಸಿದ ಬೇಂದ್ರೆ ಟೀವಿಗೂ ಚಿತ್ರದಲ್ಲಿರುವ ಬೊಂಬೆಗೂ, ಅರ್ಥಾತ್, ಏನೂ ವ್ಯತ್ಯಾಸವೇ ಇರಲಿಲ್ಲ! ಬೇಂದ್ರೆ ಒಂದು ಕೈಯಲ್ಲಿ ತೆರೆದ ಪುಸ್ತಕ, ಇನ್ನೊಂದು ಕೈ ಮುಗಿಲೆತ್ತರಕ್ಕೆ, ಮುಖದಲ್ಲಿ ಚಿಮ್ಮುವ ಉತ್ಸಾಹ. ವಾಹ್! ನಾನಂತೂ ತೇಲಿಹೋದೆ ಅಲ್ಲಿನ ಭಾವಭಿತ್ತಿಗಳಿಗೆ. ಹಿಂದೆ ಕೇಳಿಬರುತ್ತಿತ್ತು, ''ನಾರಿ ನಿನ್ನ ಮಾರಿ ಮ್ಯಾಲ...'', ''ನಾನು ಬಡವಿ ಆತ ಬಡವ...'', ''ಬದುಕು ಮಾಯೆಯ ಆಟ...'', ಹತ್ತು ಹಲವು ಭಾವಗೀತೆಗಳ ಗುಂಜಾರವ! ಅವರ್ಣನೀಯ ಭಾವವೊಂದು ಆವರಿಸಿ ಮನಸ್ಸು ತುಂಬಿ ಬಂತು. ಫೋಟೋ ತೆಗೆಯುವ ಪರವಾನಗಿ ಇಲ್ಲದಿದ್ದರೂ ಕುತೂಹಲ ತಾಳದೇ ಮೊಬೈಲ್‌ನಲ್ಲೇ ಫೋಟೋ ತೆಗೆದುಕೊಳ್ಳುವ ಕೆಲಸ ಅಲ್ಲಲ್ಲಿ ನಡೆದೇ ಇತ್ತು.

ಸುಮಾರು ಒಂದೂವರೆ ತಾಸು ಅಲ್ಲೇ ಕಳೆದೆವು. ಕೆಳಗೆ ಬಂದು ಕೆಲವು ಪುಸ್ತಕಗಳನ್ನು ಖರೀದಿಸಿದೆವು. ನಿರ್ವಾಹಕರೊಂದಿಗೆ ಪ್ರತಿಷ್ಠಾನದ ಚಟುವಟಿಕೆಗಳ ಬಗ್ಗೆ ತಿಳಿದುಕೊಂಡೆವು. ಗೆಳತಿಯರೆಲ್ಲ ಸೇರಿ ಫೋಟೋ ತೆಗೆಸಿಕೊಂಡೆವು. ವಿಜಿಟರ್ಸ್ ರಿಜಿಸ್ಟರ್‌ನಲ್ಲಿ ನಮ್ಮ ಅಭಿಪ್ರಾಯ ಬರೆದು ರುಜು ಹಾಕಿ ಹೊರ ಬಂದಾಗಲೇ ಗಮನ ಸೆಳೆದದ್ದು ಎದುರಿಗಿದ್ದ 'ಎಲಿಕೆರೆ'; ಬೇಂದ್ರೆ ಸ್ಫೂರ್ತಿಯ ಸೆಲೆ!

ಕೆರೆಯ ಆವರಣವನ್ನೆಲ್ಲ ಚೊಕ್ಕಟವಾಗಿ ಅಭಿವೃದ್ಧಿಪಡಿಸಲಾಗಿದೆ. ಸುಂದರವಾಗಿದೆ. ಬೇಂದ್ರೆಯವರು ನೈಜವಾಗಿ ನೋಡಿದಾಗ ಹೇಗಿತ್ತೋ ಅದು ಕಂಡಿರಬಹುದು! ಸೂರ್ಯೋದಯದಿಂದ ಸೂರ್ಯಾಸ್ತದವರೆಗೆ ಆ ನೀರಿನಲ್ಲಿ ನಡೆವ ಬಣ್ಣದಾಟ ಬೇಂದ್ರೆ ಎದೆಯನ್ನು ಎಷ್ಟು ಹದಗೊಳಿಸಿರಲಾರದು! ಥೋ! ನಮ್ಮ ಮನೆ ಮುಂದೆಯೂ ಹಾಗೇ ಸುಖಾಸುಮ್ಮನೇ ನೋಡಿ ಆನಂದಿಸಲಾದರೂ ಒಂದು ಕೆರೆ ಇರಬಾರದೇ ಎಂದು ತಕ್ಷಣ ಅನಿಸಿದ್ದಂತೂ ನಿಜ. ಸಂಜೆಯಾಗುತ್ತ ಬಂದಿತ್ತು. ಹಾಸ್ಟೆಲ್‌ನ ಸಮಯದ ಮಿತಿ ಬೇಗ ಹೊರಡಬೇಕೆಂದು ಎಚ್ಚರಿಸಿತು. ಕೆರೆಯ ಸುತ್ತಲೂ ಅಡ್ಡಾಡಿ ಅಲ್ಲೇ ಇದ್ದ ಕ್ಯಾಂಟೀನಿನಲ್ಲಿ ಪಾನಿಪುರಿ ತಿಂದು ಬಸ್ ಹತ್ತಿದೆವು. ಮನಸ್ಸು ಮಾತ್ರ ಸಾಧನಕೇರಿಯಲ್ಲೇ ಉಳಿಯಿತು...

**ಮಹೇಶ್ವರಿ ಕೋಟಿ**
ಮನೆ ಸಂಖ್ಯೆ. ೩, ೨೨ನೇ ಮುಖ್ಯರಸ್ತೆ, ವಿದ್ಯಾಗಿರಿ ಬಾಗಲಕೋಟೆ - ೫೮೭ ೧೦೧

## ನಮನ



ನಾಡಿನ ಹಿರಿಯ ಸಾಹಿತಿ, ಜಾನಪದ ತಜ್ಞ, ಸಹೃದಯಿ, **ಪ್ರೊ|| ಡಿ. ಲಿಂಗಯ್ಯ** ಅವರು ಹೃದಯಾಘಾತದಿಂದ ನಿಧನರಾಗಿದ್ದಾರೆ. ಅಧ್ಯಾಪಕರಾಗಿ, ಕನ್ನಡ ಸಾಹಿತ್ಯಪರಿಷತ್‌ನ ಗೌರವ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿ ಅಪಾರ ಶಿಷ್ಯರನ್ನೂ, ಸ್ನೇಹಿತರನ್ನೂ ಅಗಲಿರುವ ಅವರಿಗೆ 'ಹೊಸತು' ಬಳಗ ಗೌರವ ಸಲ್ಲಿಸುತ್ತದೆ.

# ನಿನ್ನ ತಲೆ



ತಲೆ ತಲೆ ತಲೆ ಎಂದು
ಅಲ್ಲಗಳೆಯದಿರು ಸೋದರಾ...

ಕಾಶಿ ರಾಮೇಶ್ವರ ನಿನ್ನ ತಲೆ
ಶ್ರೀಶೈಲ ಪಂಪಾಕ್ಷೇತ್ರ ನಿನ್ನ ತಲೆ
ಮಸೀದಿ ಮಂದಿರ ಚರ್ಚ್ ನಿನ್ನ ತಲೆ
ಸಿದ್ಧ ಬುದ್ಧ ಜೋಗಿ ಜಂಗಮ ನಿನ್ನ ತಲೆ
ಸ್ವರ್ಗ ನರಕ ನಿನ್ನ ತಲೆ
ಬಂಧ-ಮೋಕ್ಷಕ್ಕೆ ನಿನ್ನ ತಲೆ
ಮಾಯೆ ಇರುವುದು ನಿನ್ನ ತಲೆ
ಮಂತ್ರವಿರುವುದು ನಿನ್ನ ತಲೆ
ಆತ್ಮ-ಪರಮಾತ್ಮನಿರುವುದು ನಿನ್ನ ತಲೆ
ತತ್ತ್ವ-ಪರತತ್ತ್ವವಿರುವುದು ನಿನ್ನ ತಲೆ
ಜಗನ್ನಾಥ ಸರ್ವೇಶ್ವರನಿರುವುದು ನಿನ್ನ ತಲೆ
ಜ್ಞಾನದ ಆಗರವೇ ನಿನ್ನ ತಲೆ
ಪರಮಾನಂದದ ನೆಲೆವೀಡು ನಿನ್ನ ತಲೆ
ಸಿದ್ಧಿಯ ಶಿಖರವೇ ನಿನ್ನ ತಲೆ
ಸತ್ಯದ ಸಾಗರ ನಿನ್ನ ತಲೆ
ಶಿವಶಕ್ತಿಯ ಕೇಂದ್ರವೇ ನಿನ್ನ ತಲೆ
ಸಕಲ ತೀರ್ಥದ ನೆಲೆ ನಿನ್ನ ತಲೆ
ಬ್ರಹ್ಮಾಂಡವೇ ನಿನ್ನ ತಲೆ
ಅರಿವಿನ ಅಂತರಾಳ ನಿನ್ನ ತಲೆ
ಗುರುವಿನ ನೆಲೆಯೇ ನಿನ್ನ ತಲೆ

**ಎಸ್. ಸಿ. ರಂಗನಾಥ್**
'ಮಾತೃಶ್ರೀ ನಿಲಯ', ಮನೆ ನಂ. ೯/೭, ೩ನೇ 'ಡಿ' ಮುಖ್ಯರಸ್ತೆ, ೯ನೇ ಕ್ರಾಸ್,
ಸಾರಕ್ಕಿ ೧ನೇ ಹಂತ, ಜೆ. ಪಿ. ನಗರ, ಬೆಂಗಳೂರು - ೫೬೦ ೦೭೮

# ಮೂರು, ಮತ್ತೊಂದು ಕೆಂಪು ಚುಕ್ಕೆಗಳು

ನಭಾವಲೋಕನ

**ಈ** ತಿಂಗಳಲ್ಲಿ ಸಂಜೆ ಶುಭ್ರವಾಗಿದ್ದಾಗಲೆಲ್ಲಾ ಪಶ್ಚಿಮದ ಅಂಚಿಗೆ ಕಣ್ಣು ಹಾಯಿಸುತ್ತಿರಿ. ಎರಡು ಮೂರು ಕೆಂಪು ಚುಕ್ಕೆಗಳು ನಿಮ್ಮ ಗಮನ ಸೆಳೆಯುವುವು. ವಾಯುವ್ಯ ದಂಚಿನಲ್ಲಿ ಕಾಣುವುದು ಸ್ವಾತಿ ನಕ್ಷತ್ರ. ಬೂಟಿಸ್ (ಸಹದೇವ) ಪುಂಜದ್ದು. ಪಶ್ಚಿಮಕ್ಕಿರುವುದು ಜ್ಯೇಷ್ಠಾ ಅಥವಾ ಅಂಟಾರೆಸ್. ಇದು ವೃಶ್ಚಿಕರಾಶಿಯ ಪ್ರಕಾಶಮಾನ ನಕ್ಷತ್ರ. ಇದರ ಜೊತೆಗೆ ಮಿನುಗಲೊಲ್ಲದ ಚುಕ್ಕೆಯೊಂದು ಕಾಣುವುದು. ಅದು ಮಂಗಳ ಗ್ರಹ. ದಿನೇ ದಿನೇ ಇದು ಜ್ಯೇಷ್ಠಾದ ಸಮೀಪ ಬಂದು ಮತ್ತೆ ದೂರ ಸರಿಯುವುದನ್ನು ಗಮನಿಸಿ ಅದು ಗ್ರಹ ಎಂದು ತಿಳಿಯಬಹುದು. ತಿಂಗಳ ಕೊನೆಗೆ ಜ್ಯೇಷ್ಠಾ ದಿಗಂತದ ಅಂಚಿಗೆ ಸರಿದಿರುತ್ತದೆ. ಸ್ವಾತಿ ಗುರುತಿಸಲಾಗದಷ್ಟು ಕೆಳಗೆ ಸರಿದಿರುತ್ತದೆ. ಮಂಗಳ ಸ್ವಲ್ಪ ಮೇಲೇರಿರುತ್ತದೆ. ಅಂದರೆ ನಮಗೆ ತಿಂಗಳುದ್ದಕ್ಕೂ ಅದೇ ಎತ್ತರದಲ್ಲಿ ಕಾಣುತ್ತದೆ ಎನ್ನಬಹುದು. ಈ ಒಂಟಿ ಚುಕ್ಕೆಗೆ ಜೋಡಿಯಾಗಿ ಮತ್ತೊಂದು ಚುಕ್ಕೆ ಕಾಣತೊಡಗುತ್ತದೆ. ಇದು ವಾಸ್ತವದಲ್ಲಿ ಕೆಂಪು ಬಣ್ಣದ್ದೇನೂ ಅಲ್ಲ; ಆದರೆ ದಿಗಂತದಂಚಿನಲ್ಲಿ ಎಲ್ಲಾ ಕಾಯಗಳೂ (ಸೂರ್ಯ, ಚಂದ್ರರೂ) ಕೆಂಪಾಗಿಯೇ ಕಾಣುವುದರಿಂದ ಇದೂ ಕೆಂಪಾಗಿ ಕಾಣುತ್ತದೆ. ಅಲ್ಲಿಂದ ಇದು ಮೇಲೇಳುವುದಿಲ್ಲ, ಆದ್ದರಿಂದ ಅದರ ನೈಜ ಬಣ್ಣ ತಿಳಿಯುವ ಅವಕಾಶವೇ ದೊರಕುವುದಿಲ್ಲ. ಇದು ಬುಧ ಗ್ರಹ.

ಕಳೆದ ತಿಂಗಳು ಸಂಜೆಯ ಆಕಾಶದಲ್ಲಿ ಶನಿ ಮತ್ತು ಅದರ ಪಕ್ಕದ ಚಿತ್ರಾ ನಕ್ಷತ್ರ ಕಾಣುತ್ತಿದ್ದವು; ಈಗ ಎರಡೂ ಮಾಯ! ಶನಿ ಸೂರ್ಯನ ಆಚೆ ಬದಿಯನ್ನು ಹಾದು ಹೋಗುವ ಕಾರಣ ತಿಂಗಳುದ್ದಕ್ಕೂ ಕಾಣುವುದೇ ಇಲ್ಲ ಎನ್ನಬಹುದು. ಸೋಹೋ ಎಂಬ ಅಂತರಿಕ್ಷ ಪ್ರಯೋಗಾಲಯ ಸೂರ್ಯನ ಚಿತ್ರಗಳನ್ನು ಸತತವಾಗಿ ಕಳಿಸುತ್ತದೆ. ಆ ಚಿತ್ರಗಳಲ್ಲಿ ಶನಿಯನ್ನು ಗುರುತಿಸಬಹುದು.

ಮುಂಜಾವಿನಲ್ಲಿ ಕಾಣುವ ಗ್ರಹಗಳು ಶುಕ್ರ ಮತ್ತು ಗುರು. ರೋಹಿಣಿ ಮತ್ತು ಕೃತ್ತಿಕಾ ನಕ್ಷತ್ರಗಳ ಜೊತೆಗೆ ಗುರು ಗ್ರಹ ಮಧ್ಯರಾತ್ರಿಗೆ ಸ್ವಲ್ಪ ಮೊದಲು ಉದಯಿಸುತ್ತದೆ. ಅಂದರೆ ಬೆಳಿಗ್ಗೆ ನೆತ್ತಿಯ ಮೇಲೆ ಕಾಣುತ್ತದೆ. ಬಹುಳ ಅಷ್ಟಮಿಯ ಚಂದ್ರದ ಪಕ್ಕ ಎಂದು ಊಹಿಸಬಹುದು. ಚಂದ್ರ ಇದನ್ನು ಮರೆಮಾಡುವ ಪುಟ್ಟ ಗ್ರಹಣ - ಆಚ್ಛಾದನೆ - ಈ ತಿಂಗಳೂ ನಡೆಯುತ್ತದೆ. ಆದರೆ ಈ ತಿಂಗಳೂ ನಮಗೆ ಅದರ ನೋಟ ಲಭ್ಯವಿಲ್ಲ. ಚಂದ್ರನನ್ನೂ ಅದನ್ನೂ ಒಟ್ಟಿಗೇ ಸೆರೆಹಿಡಿಯುವ ಪ್ರಯತ್ನ ಮಾಡಬಹುದು. ಅದರ ಹಿನ್ನಡೆ ಆರಂಭವಾಗಲಿದೆ.

ಹುಣ್ಣಿಮೆಯ ಚಂದ್ರ ವೃಷಭ ರಾಶಿಯ ಕೃತ್ತಿಕಾ ನಕ್ಷತ್ರದ ಸಮೀಪ ಕಾಣಲಿದೆ. ಹಾಗಾಗಿ ಈ ತಿಂಗಳು ಕಾರ್ತೀಕ ಎಂಬ ಹೆಸರು ಪಡೆಯುತ್ತದೆ.

ಈ ತಿಂಗಳಲ್ಲಿ ಹ್ಯಾಲೀ ಧೂಮಕೇತುವಿನ ಧೂಳು ಉಲ್ಕಾವೃಷ್ಟಿಯಾಗಿ ಭೂಮಿಯನ್ನು ತಲುಪಲಿದೆ. ತಿಂಗಳ ಕೊನೆಯಲ್ಲಿ ಉಂಟಾಗುವ ಈ ವೃಷ್ಟಿ ಆಸ್ವಾದನೆಗೆ ಚಂದ್ರನ ಬೆಳಕೇ ಮುಖ್ಯ ಅಡಚಣೆಯಾಗಲಿದೆ. ಓರಿಯನಿಡ್ಸ್ ಎಂಬ ಹೆಸರಿನ ಈ ವೃಷ್ಟಿಯ ಉಲ್ಕೆಗಳು ಒರೈಯನ್ ನಕ್ಷತ್ರ ಪುಂಜದಿಂದ ಹೊರಟಂತೆ ಕಾಣುತ್ತವೆ. ಗಂಟೆಗೆ 15-20 ಉಲ್ಕೆಗಳು ಕಾಣುತ್ತವೆ.

ತಿಂಗಳ ಮೊದಲ ಭಾಗದಲ್ಲಿ ವೃಶ್ಚಿಕ, ಧನು, ವೀಣಾ (ಲೈರಾ), ಗರುಡ (ಅಕ್ವಿಲಾ) ಮತ್ತು ರಾಜಹಂಸ (ಸಿಗ್ನಸ್) ಗಳ ಮೂಲಕ ಆಕಾಶ ಗಂಗೆಯ ಹರಿವನ್ನು ಗುರುತಿಸ ಬಹುದು. ಪೂರ್ವದಲ್ಲಿ ಪೆಗಸಸ್ (ನಕುಲ)ದ ಚೌಕ ಇವುಗಳನ್ನು ಕಾಣಬಹುದು. ವಾಯುವ್ಯದಲ್ಲಿ ಸಪ್ತರ್ಷಿ ಮರೆಯಾಗುತ್ತದೆ. ಈಶಾನ್ಯದಲ್ಲಿ ದ್ರೌಪದಿ (ಆಂಡ್ರೋಮಿಡಾ), ಕುಂತಿ (ಕೆಸಿಯೋಪಿಯಾ) ಸ್ಫುಟವಾಗಿ ಕಾಣುತ್ತವೆ.

### ಖಗೋಳ ದಿನಚರಿ

**ಅಕ್ಟೋಬರ್**

1 ಶುಕ್ರದ ಸಮೀಪ ಮಘ ನಕ್ಷತ್ರ

4 ಗುರುಗ್ರಹದ ಹಿನ್ನಡೆ ಆರಂಭ

5 ಚಂದ್ರ - ಭೂಮಿ ನಡುವೆ ಗರಿಷ್ಠ ಅಂತರ

6 ಗುರು - ಚಂದ್ರ ಜೋಡಿ*

8 ಚಾಂದ್ರಮಾಸದ ಕೊನೆಯ ಪಾದ (ಬಹುಳ ಅಷ್ಟಮಿ)

10 ಬುಧ ಗ್ರಹದ ಉಚ್ಚ ಯುತಿ

12 ಶುಕ್ರ - ಚಂದ್ರ ಜೋಡಿ*

15 ಅಮಾವಾಸ್ಯೆ 17:32ಕ್ಕೆ

16 ಶನಿ - ಚಂದ್ರ ಜೋಡಿ

17 ಬುಧ - ಚಂದ್ರ ಜೋಡಿ

ಚಂದ್ರ-ಭೂಮಿ ನಡುವೆ ಕನಿಷ್ಠ ಅಂತರ

18 ಮಂಗಳ ಚಂದ್ರ ಜೋಡಿ*

21 ಓರಿಯನಿಡ್ಸ್ ಉಲ್ಕಾ ವೃಷ್ಟಿ*

22 ಚಾಂದ್ರಮಾಸದ ಮೊದಲ ಪಾದ (ಶುಕ್ಲ ಅಷ್ಟಮಿ)

25 ಶನಿ ಗ್ರಹದ ಯುತಿ

(ಶನಿ ಸೂರ್ಯನ ಜೊತೆ ಇರುವುದನ್ನು ಸೋಹೋ ವೆಬ್‌ಸೈಟ್‌ನಲ್ಲಿ ನೋಡಬಹುದು)

26 ಬುಧ ಗ್ರಹದ ಗರಿಷ್ಠ ಕೋನೋನ್ನತಿ*

29 ಹುಣ್ಣಿಮೆ 02:19ಕ್ಕೆ

ನವೆಂಬರ್ 2 ಗುರು ಚಂದ್ರ ಜೋಡಿ*

(* ಛಾಯಾಗ್ರಹಣಕ್ಕೆ ಸದವಕಾಶ)

ಡಾ|| ಬಿ. ಎಸ್. ಶೈಲಜಾ
ಜವಾಹರ್‌ಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧

ಓರಂದು ಚಂದ್ರ ಮತ್ತು ಗುರು

# ಇಂಜಿನಿಯರಿಂಗ ಕೋರ್ಸು ನಿನ್ನದೇ, ಆಯ್ಕೆಯೂ ನಿನ್ನದೇ...

**ದೀ**ಪಾ ಪಿಸಿಎಮ್‌ನಲ್ಲಿ ೯೮ ಪ್ರತಿಶತ ಮಾರ್ಕ್ಸ ಪಡೆದಿದ್ದಾಳೆ. ರಾಜ್ಯದ ರ‍್ಯಾಂಕ ಪಟ್ಟಿಯಲ್ಲಿ ಅವಳ ಹೆಸರಿದೆ. ನಿನ್ನ ಮುಂದಿನ ಗುರಿ ಏನು ? ಎಂಬ ಪ್ರಶ್ನೆಗೆ ತಕ್ಷಣ ಅವಳಿಂದ ಬಂದ ಉತ್ತರ ''ನಾನು ಇಂಜಿನಿಯರ್ ಆಗಬೇಕು. ಅದೂ ಎಲೆಕ್ಟ್ರಾನಿಕ್ಸ ಇಂಜಿನಿಯರ್ ಮಾತ್ರ.'' ''ಯಾಕೆ ಅಂತ ಕೇಳಬಹುದಾ ?'' ಎಂದಾಗ ಅವಳು ಸುಮ್ಮನೇ ನಸುನಕ್ಕಳು. ರಮೇಶನಿಗೆ ೫೭% ಮಾರ್ಕ್ಸ ಬಂದಿದೆ, ನೀನೇನು ಮಾಡಬೇಕೆಂದುಕೊಂಡಿದಿಯಾ ಅಂದರೆ ''ನನ್ನ ಗೆಳೆಯ ೯೦% ಪಡೆದವನು ಮೆಕ್ಯಾನಿಕಲ್ ಬಿಇ ಮಾಡತಾನಂತೆ. ನಾನೂ ಅದನ್ನೇ ಮಾಡಬೇಕೆಂದು ಅನಕೊಂಡಿದಿನಿ.'' ಹೀಗೆ ಇಂಜಿನಿಯರ್ ಆಗಬಯಸುವ ಅನೇಕ ವಿದ್ಯಾರ್ಥಿಗಳು ಸಾಮಾನ್ಯವಾಗಿ ತಮ್ಮ ಗೆಳೆಯರನ್ನು ಹಿಂಬಾಲಿಸಿಯೋ, ಪಾಲಕರ ಒತ್ತಾಯಕ್ಕಾಗಿಯೋ, ಅಥವಾ ಸಮೂಹ ಸನ್ನಿಯ ಬೆನ್ನು ಬಿದ್ದೋ ಕೋರ್ಸಿನ ಆಯ್ಕೆ ಮಾಡುವದು ಸರ್ವೇ ಸಾಮಾನ್ಯ. ಭವಿಷ್ಯ ರೂಪುಗೊಳ್ಳುವ ಈ ಸಮಯದಲ್ಲಿ ನಿಮ್ಮ ನಿರ್ಧಾರ ಸೂಕ್ತವಾಗಿರಬೇಕು, ಅಚಲವಾಗಿರಬೇಕು. ನೀರಿನ ಆಳ ತಿಳಿಯದೇ, ನಿಮ್ಮ ಸಾಮರ್ಥ್ಯವನ್ನಳೆಯದೇ ನೀರಿಗೆ ಧುಮುಕಿದರೆ, ಪಾತಾಳವೇ ಗತಿ ಎಂಬುದು ನಿಮಗೆ ತಿಳಿದಿರಲಿ. ಏನೂ ಅರಿಯದೇ, ಸುಮ್ಮನೇ ಯಾವುದಾದರೊಂದು ಕೋರ್ಸಿನ ಆಯ್ಕೆ ಮಾಡಿಕೊಂಡು, ಓದಿನಲ್ಲಿ ಆಸಕ್ತಿ ಇಲ್ಲದೇ, ಓದಿನುದ್ದಕ್ಕೂ ಒದ್ದಾಡುವದಕ್ಕಿಂತ, ಆಯಾ ವಿಷಯದ ಬಗೆಗೆ ಸೂಕ್ತ ಮಾಹಿತಿ ಕಲೆ ಹಾಕಿ, ವಿಷಯ ಪರಿಣತರೊಂದಿಗೆ ಚರ್ಚಿಸಿ, ಪ್ರಚಲಿತ ಮತ್ತು ಮುಂದಿನ ನಾಲ್ಕಾರು ವರ್ಷಗಳ ನಂತರದ ಪರಿಸ್ಥಿತಿಯನ್ನವಲೋಕಿಸಿ ಕೋರ್ಸಿನ ಆಯ್ಕೆಯ ನಿರ್ಧಾರ ತೆಗೆದುಕೊಳ್ಳುವದು ಯೋಗ್ಯ. ನೂರು ಮೀಟರ್ ಸ್ಪ್ರಿಂಟ್ ಓಟಗಾರ್ತಿಯ ಯಶಸ್ಸು ಅವಳು ಇಡುವ ಮೊದಲ ಹೆಜ್ಜೆಯ ಮೇಲೆ ನಿರ್ಧಾರವಾಗುವದಿಲ್ಲ, ಆದರೆ ಅವಳು ಹೆಜ್ಜೆ ಇಡುವ ಮೊದಲೇ ತೆಗೆದುಕೊಳ್ಳುವ ನಿರ್ಧಾರದ ಮೇಲೆ ಅವಲಂಬಿಸಿರುತ್ತದೆ. ನೆನಪಿರಲಿ.

**ಇಂಜಿನಿಯರಿಂಗ ವೃತ್ತಿಯನ್ನೇ ಯಾಕೆ ಆಯ್ಕೆಮಾಡಬೇಕು ?**

ಇಂಜಿನಿಯರಿಂಗ ವೃತ್ತಿ ಎಂದಾಕ್ಷಣ ಅನೇಕರ ಮನದಲ್ಲಿ, ಸದ್ಯ ಈ ವೃತ್ತಿಯಲ್ಲಿರುವ, ಸಾಕಷ್ಟು ಹಣ ಗಳಿಸುತ್ತಿರುವ ವೃತ್ತಿ ಬಾಂಧವರ ಚಿತ್ರಣ, ಮನದಲ್ಲಿ ಮೂಡುವದು ಸಾಮಾನ್ಯ. ಆದರೆ ನನ್ನ ದೃಷ್ಟಿಯಲ್ಲಿ ವೃತ್ತಿ ಎಂದರೆ, ಮಾಹೆ ಒಂದೆರಡು ಲಕ್ಷ ಗಳಿಸುವದಲ್ಲ, ಹೀಗಾದರೆ ಅದು ಜೀವನ ನಿರ್ವಹಣೆಗೆ ಒಂದು ದಾರಿ ಅನ್ನಿಸಿಕೊಳ್ಳುತ್ತದೆ. ಯಾವುದೇ ಇಂಜಿನಿಯರಿಂಗ ಪದವಿ ಪಡೆದು, ಮಾಹೆ ಒಂದೆರಡು ಲಕ್ಷ ಗಳಿಸುವವರು ಇಂಜಿನಿಯರಿಂಗ ವೃತ್ತಿಯಲ್ಲಿ ಔನ್ನತ್ಯಕ್ಕೇರಿದವರಲ್ಲ ಎಂಬುದು ನನ್ನ ಅಭಿಪ್ರಾಯ. ಇಂಜಿನಿಯರಿಂಗ ಕೋರ್ಸ ಯಾವುದೇ ಇರಲಿ, ಆಯ್ದ ಕ್ಷೇತ್ರದಲ್ಲಿ, ಆಳವಾದ ವಿಷಯ ನೈಪುಣ್ಯತೆ ಪಡೆದವರು, ಅವರವರ ಕ್ಷೇತ್ರದಲ್ಲಿ ಎಕ್ಸಪರ್ಟ ಎಂದು ಗುರುತಿಸುವಷ್ಟು ಅಂತರರಾಷ್ಟ್ರೀಯ ಮನ್ನಣೆ ಪಡೆದವರು ಮಾತ್ರ ಇಂಜಿನಿಯರಿಂಗ ವೃತ್ತಿಯಲ್ಲಿ ಯಶಸ್ಸು ಪಡೆದವರು ಎಂಬುದು ನನ್ನ ಅನಿಸಿಕೆ. ಇಂಥ ವೃತ್ತಿಬಾಂಧವರಿಗೆ ಲಕ್ಷ್ಮಿ ತಾನಾಗಿಯೇ ಒಲಿಯುತ್ತಾಳೆ. ನಮ್ಮ ಯುವಕರು ಇಂಥವರನ್ನು ಮಾದರಿಯಾಗಿ ಪರಿಗಣಿಸಬೇಕು.

ಬರೀ ಹಣ ಗಳಿಸುವದೊಂದೇ ಗುರಿ ನಿಮ್ಮದಾಗಿದ್ದರೆ ಇಂಜಿನಿಯರಿಂಗ ವೃತ್ತಿಯೇ ಯಾಕೆ ಬೇಕು ? 'ಒಬ್ಬ ವಿಜ್ಞಾನಿ ಇರುವದನ್ನು ಸಂಶೋಧಿಸಿದರೆ, ಒಬ್ಬ ಇಂಜಿನಿಯರ್ ಇಲ್ಲದ್ದನ್ನು ಸೃಷ್ಟಿಸುವ ಸಾಮರ್ಥ್ಯ ಹೊಂದಿದವನು', ಎಂದು ಶ್ರೇಷ್ಠ ವಿಜ್ಞಾನಿ ಆಲ್ಬರ್ಟ್ ಐನ್‌ಸ್ಟೈನ್ ಹೇಳಿದ ಮಾತಿನಲ್ಲಿ ತಥ್ಯವಿದೆ. ಒಬ್ಬ ಸೃಜನಶೀಲ ವ್ಯಕ್ತಿಯ ಕಲ್ಪನೆಗಳನ್ನು ಸಾಕಾರಗೊಳಿಸಲು ಇಂಜಿನಿಯರಿಂಗ ಕ್ಷೇತ್ರದಲ್ಲಿ ಸಾಕಷ್ಟು ಅವಕಾಶಗಳಿವೆ. ಅದೂ ಅಭಿವೃದ್ಧಿಶೀಲ ಭಾರತದಲ್ಲಂತೂ ಅಂಥ ಅವಕಾಶಗಳಿಗೆ ಆಕಾಶವೂ ಮಿತಿಯಾಗಲಾರದು. ಪ್ರಪಂಚದಲ್ಲಿ ಚೀನಾ ಬಿಟ್ಟರೆ, ಭಾರತವು ಶೀಘ್ರಗತಿಯಲ್ಲಿ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರ. ಇಂಜಿನಿಯರಿಂಗ ಮಾನವ ಸಂಪನ್ಮೂಲ ನಮ್ಮ ದೇಶದ ಆಸ್ತಿ. ಯಾವುದೇ ದೇಶದಲ್ಲಿಯ ವಿಜ್ಞಾನಿಗಳು ಹಾಗೂ ತಂತ್ರಜ್ಞರು ಮತ್ತು ಜನಸಂಖ್ಯೆಯ ಅನುಪಾತ ಆ ದೇಶದ ಅಭಿವೃದ್ಧಿಯ ಸಂಕೇತವಾಗಿದೆ. ಉದಾಹರಣೆಗೆ, ದಕ್ಷಿಣ ಕೊರಿಯಾದಲ್ಲಿ ಈ ಅನುಪಾತ ಒಂದು ಮಿಲಿಯನ್ ಜನಸಂಖ್ಯೆಯಲ್ಲಿ ೧೩೪೪, ಜಪಾನದಲ್ಲಿ ೭೭೦, ಆಸ್ಟ್ರೇಲಿಯಾದಲ್ಲಿ ೬೭೪, ಜರ್ಮನಿಯಲ್ಲಿ ೩೯೭, ಚೀನಾದಲ್ಲಿ ೨೭೨ ಮತ್ತು ಭಾರತದಲ್ಲಿ ೨೧೪ ಮಾತ್ರ. ಆದಕ್ಕೆಂತಲೇ ಚೀನಾ ಮತ್ತು ಭಾರತ ದೇಶಗಳು ಅಭಿವೃದ್ಧಿಶೀಲ ರಾಷ್ಟ್ರಗಳು ಎಂಬ ಹಣೆಪಟ್ಟಿಯನ್ನು ಇನ್ನೂ ಕಟ್ಟಿಕೊಂಡೇ ಮುನ್ನಡೆಯಬೇಕಾಗಿದೆ.

ಕಳೆದ ಐದಾರು ವರ್ಷಗಳಲ್ಲಿ, ಜಾಗತಿಕ ಆರ್ಥಿಕ ಹಿಂಜರಿತದಲ್ಲಿ, ಅಮೇರಿಕಾದಂಥ ಅಭಿವೃದ್ಧಿ ಹೊಂದಿದ ದೇಶಗಳಿಗೆ ಹೋಲಿಸಿದರೆ, ಭಾರತವು ಧೃತಿಗೆಡದೆ ಮುನ್ನಡೆದದ್ದನ್ನು ನಾವು ಕಂಡಿದ್ದೇವೆ, ದೇಶದ ಆಂತರಿಕ ಅಭಿವೃದ್ಧಿ ದರ (ಜಿಡಿಪಿ), ೧೯೭೧ರ ಮೂರನೇ ದಶಕವನ್ನು ಬಿಟ್ಟರೆ, ೧೯೫೧ರ ದಶಕದಿಂದ ೨೦೦೧ರ ದಶಕದವರೆಗೆ ಸತತ ಏರಿಕೆಯನ್ನೇ ಕಂಡಿದೆ. ೧೯೫೧ರ ದಶಕದಲ್ಲಿ ಸರಾಸರಿ ಅಭಿವೃದ್ಧಿದರ ೩.೯% ಇದ್ದದ್ದು, ೨೦೦೧ರ ದಶಕದಲ್ಲಿ ಸರಾಸರಿ ೭.೭% ತಲುಪಿತ್ತು. ಇದು ೧೧ನೇ ಯೋಜನಾ ಅವಧಿಯಲ್ಲಿ ೮.೨% ಆಗಬಹುದೆಂದು ಅಂದಾಜಿಸಲಾಗಿದೆ. ಇದು ಸಾಧ್ಯವಾಗಲು ಕೆಲ ಮುನ್ಸೂಚನೆಗಳೂ ದೊರೆತಿವೆ. (೧) ಈ ಅಭಿವೃದ್ಧಿಯ ಅವಧಿಯಲ್ಲಿ ಕೆಲ ರಾಜ್ಯಗಳು ಹೆಚ್ಚು ಅಭಿವೃದ್ಧಿದರ ಹೊಂದಿರುವದು ಮತ್ತು ಕೇಂದ್ರ ಸರಕಾರವು ಬಡವರಿಗಾಗಿ ಮೀಸಲಿಟ್ಟ ಕೆಲ ಯೋಜನೆಗಳನ್ನು ಕೆಲ ರಾಜ್ಯಗಳು ಪರಿಣಾಮಕಾರಿಯಾಗಿ ಜಾರಿಗೊಳಿಸಿರುವದು. (೨) ಕೃಷಿ ಕ್ಷೇತ್ರದಲ್ಲಿ ೧೦ನೇ ಯೋಜನಾ ಅವಧಿಯಲ್ಲಿ ೨% ಇದ್ದ ಅಭಿವೃದ್ಧಿ ದರ ೩%ಕ್ಕೆ ಹೆಚ್ಚಾಗಿರುವದು. (೩) ಶಿಕ್ಷಣ ಕ್ಷೇತ್ರದಲ್ಲಿ ಉಚಿತ ಮತ್ತು ಕಡ್ಡಾಯ ಶಿಕ್ಷಣ ಕಾನೂನು ಜಾರಿ ಮಾಡಿದ್ದು ಮತ್ತು ಉನ್ನತ ಶಿಕ್ಷಣಕ್ಕೆ ಹೆಚ್ಚು ಹಣ ಮೀಸಲಿಟ್ಟಿರುವದು. ಇಂಜಿನಿಯರಿಂಗ ಶಿಕ್ಷಣ ಕ್ಷೇತ್ರದಲ್ಲಿ ಎಆಯ್‌ಸಿಟಿಇ ಇತ್ತೀಚಿನ ವರ್ಷಗಳಲ್ಲಿ ವಾರ್ಷಿಕ ೫ ಲಕ್ಷಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಪ್ರವೇಶ ನಿಗದಿ ಪಡಿಸಿದೆ. ಬಿಇ ಪದವಿಗೆ ಪ್ರವೇಶಗತಿ ೯.೪% ವಾರ್ಷಿಕ ವೃದ್ಧಿ ಹೊಂದುತ್ತಲಿದೆ. ಕೇಂದ್ರ ಸರಕಾರ ಪ್ರಮುಖ ಇಂಜಿನಿಯರಿಂಗ ಕಾಲೇಜುಗಳನ್ನು ಮೇಲ್ದರ್ಜೆಗೆ ಏರಿಸಲು ಕ್ರಮ ಕೈಗೊಂಡಿದೆ. ಅಂತರರಾಷ್ಟ್ರೀಯ ಮಟ್ಟದಲ್ಲಿ ಹೋಲಿಸಿದಾಗ ಭಾರತದಲ್ಲಿ ಪ್ರತಿವರ್ಷ ಹೆಚ್ಚು ಇಂಜಿನಿಯರಿಂಗ ಪದವೀಧರರು ಹೊರ

**ಪ್ರೊ॥ ಆರ್. ಪಿ. ಪುನಗಿನ**



ಬರುತ್ತಿದ್ದಾರೆ. ನಮ್ಮ ದೇಶದಲ್ಲಿ ವಾರ್ಷಿಕ ಇಂಜಿನಿಯರಿಂಗ ಪದವೀಧರರು ಹೊರಬರುವ ವೃದ್ಧಿ ದರ ಇತ್ತೀಚಿನ ವರ್ಷಗಳಲ್ಲಿ ೯.೭% ಇದ್ದರೆ, ಚೀನಾದಲ್ಲಿ ೭.೬%, ದಕ್ಷಿಣ ಕೊರಿಯಾದಲ್ಲಿ ೬.೨%, ಯುಕೆಯಲ್ಲಿ ೪.೫%, ಜಪಾನದಲ್ಲಿ ೨.೧%, ಜರ್ಮನಿಯಲ್ಲಿ ೨% ಮತ್ತು ಅಮೇರಿಕಾದಲ್ಲಿ ೧.೪% ಇರುವದನ್ನು ಗಮನಿಸಿದರೆ, ಭಾರತವು ಮಾನವ ಸಂಪನ್ಮೂಲದಲ್ಲಿ ಮುಂದಿನ ದಿನಗಳಲ್ಲಿ ಮೊದಲ ಸ್ಥಾನ ಪಡೆಯುವತ್ತ ಮುನ್ನಡೆಯುತ್ತಿದೆ ಎಂಬುದರ ಅರಿವಾಗುವದು. ಇದು ಧನಾತ್ಮಕ ಬೆಳವಣಿಗೆ.



ಅಭಿವೃದ್ಧಿಹೊಂದಿದ ದೇಶಗಳಿಗೆ ಹೋಲಿಸಿದಾಗ ಜನಸಂಖ್ಯೆ ಮತ್ತು ಇಂಜಿನಿಯರ್ ಅನುಪಾತ ನಮ್ಮ ದೇಶದಲ್ಲಿ ತೀರ ಕಡಿಮೆ. ದೇಶ ಅಭಿವೃದ್ಧಿ ಪಥದಲ್ಲಿ ದಾಪುಗಾಲಿಡಬೇಕಾದರೆ, ಈ ಅನುಪಾತ ತೀವ್ರಗತಿಯಲ್ಲಿ ಹೆಚ್ಚಾಗಬೇಕು. ಹೆಚ್ಚು ಯುವಕ ಯುವತಿಯರು ಮೌಲ್ಯಾಧಾರಿತ ಇಂಜಿನಿಯರಿಂಗ ಶಿಕ್ಷಣ ಪಡೆಯಲು ಮನಸ್ಸು ಮಾಡಬೇಕು. ದೇಶದಲ್ಲಿ ಅಭಿವೃದ್ಧಿದರವನ್ನು ಸತತವಾಗಿ ಊರ್ಧ್ವಮುಖಿಯಾಗಿ ಮುನ್ನಡೆಸಲು, ಇಂಜಿನಿಯರಿಂಗ ಶಿಕ್ಷಣವೃತ್ತಿಯನ್ನಾರಿಸಿಕೊಂಡವರು, ಹೆಚ್ಚುಪಾಲು ಸಲ್ಲಿಸಲು ಸಾಧ್ಯವಿದೆ. ಅಭಿವೃದ್ಧಿದರ ಬರೀ ಹೆಚ್ಚಾಗುವದು ಮುಖ್ಯವಲ್ಲ, ದೇಶದಲ್ಲಿ ಅಭಿವೃದ್ಧಿಯ ಕ್ರಾಂತಿಯಾಗಬೇಕಿದೆ. ಅದಕ್ಕಾಗಿ ಕೇಂದ್ರ ಮತ್ತು ರಾಜ್ಯ ಸರಕಾರಗಳು ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಆಗಲೇ ಕೆಲ ಸುಧಾರಣಾ ಕ್ರಮಗಳನ್ನು ಕೈಗೆತ್ತಿಕೊಂಡಿದ್ದಾರೆ. ೧೧ನೇ ಯೋಜನಾ ಅವಧಿಯಲ್ಲಿ ೯% ಅಭಿವೃದ್ಧಿದರ ನಿಗದಿಪಡಿಸಲಾಗಿದೆ. ಈ ದರ ತಲುಪಲು ಆಧುನಿಕ ತಂತ್ರಜ್ಞಾನದ ಬಳಕೆಗೆ ಹೆಚ್ಚು ಒತ್ತು ಕೊಡಬೇಕಾಗಿದೆ. ಮೌಲ್ಯಾಧಾರಿತ ಶಿಕ್ಷಣ ಮತ್ತು ಕಟ್ಟಕಡೆಯ ನಾಗರಿಕನಿಗೂ ನಿಲುಕಬಹುದಾದ ಉತ್ತಮ ಆರೋಗ್ಯ ಸೇವೆ, ಮೂಲಭೂತ ಸೌಕರ್ಯಗಳನ್ನು ಒದಗಿಸುವ ಯೋಜನೆಗಳು ಮಾತ್ರ ನಿಗದಿತ ಅಭಿವೃದ್ಧಿದರ ತಲುಪುವಲ್ಲಿ ಹೆಚ್ಚುಪಾಲು ನೀಡಬಲ್ಲವು.

**ನಾಗರಿಕ ಸೇವೆಯಲ್ಲಿ ಇಂಜಿನಿಯರ್ ಮತ್ತು ಕೋರ್ಸುಗಳ ಪಾತ್ರ**

ಇಂಜಿನಿಯರಿಂಗ ಕೋರ್ಸು ಸಿವಿಲ್, ಮೆಕ್ಯಾನಿಕಲ್, ಇಲೆಕ್ಟ್ರಿಕಲ್, ಇಲೆಕ್ಟ್ರಾನಿಕ್ಸ, ಅಥವಾ ಮತ್ತಾವುದೇ ಆಗಿರಬಹುದು, ನನ್ನ ದೃಷ್ಟಿಯಲ್ಲಿ ಪ್ರತಿಯೊಂದು ವಿಷಯವೂ ನಾಗರಿಕ ಸೇವೆಯಲ್ಲಿ ಸಮಾನ ಅವಕಾಶಗಳನ್ನು ಒದಗಿಸುತ್ತದೆ. ಯಾವುದೇ ಒಂದು ಇಂಜಿನಿಯರಿಂಗ ಕೋರ್ಸಿನ ವ್ಯಾಪ್ತಿ, ಇಂಥದೇ ನಾಗರಿಕ ಸೇವೆಗೇ ಮೀಸಲು ಎಂದು ಹೇಳುವದು ಕಠಿಣ. ಆದರೆ, ಯಾವುದೇ ಇಂಜಿನಿಯರ್ ಅಥವಾ ಯಾವುದೇ ಕೋರ್ಸಿನ ಪದವೀಧರನು ಸಾಮಾಜಿಕ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸಬಲ್ಲನೆನ್ನುವದು ಮಾತ್ರ ಸತ್ಯ. ಜನಸಾಮಾನ್ಯರ ಜೀವನಮಟ್ಟವನ್ನು ಸುಧಾರಿಸುವದಾಗಲಿ, ಸ್ವಚ್ಛ ಕುಡಿಯುವ ನೀರನ್ನು, ನಿರಂತರ ವಿದ್ಯುತ್ತನ್ನು, ಸರ್ವಋತು ರಸ್ತೆಗಳನ್ನು, ಕಡಿಮೆ ಖರ್ಚಿನ ಸುಭದ್ರ ಮನೆಗಳನ್ನು, ಕಡಿಮೆ ವಿದ್ಯುತ್ ಬಳಸುವ ವಿದ್ಯುತ್ ಉಪಕರಣಗಳನ್ನು, ಸುಧಾರಿತ ಕೃಷಿ ಉಪಕರಣಗಳನ್ನು, ಅಭಿವೃದ್ಧಿಪಡಿಸಿ, ಪ್ರತಿಯೊಬ್ಬ ನಾಗರಿಕರಿಗೆ ನಿಲುಕುವ ದರದಲ್ಲಿ ದೊರೆಯುವಂತೆ ಮಾಡಲು ಅನೇಕ ಕೋರ್ಸಿನ ಇಂಜಿನಿಯರ್‌ಗಳ ಸಂಯುಕ್ತ ಪರಿಶ್ರಮದ ಅಗತ್ಯವಿದೆ. ನೀರಿನ ಮಿತವ್ಯಯ ಬಳಕೆ ಮಾಡುವದಾಗಲಿ, ಮಳೆಯ ಮಾಹಿತಿ, ಅಥವಾ ಮಳೆನೀರ ಕೃಷಿಯಾಗಲಿ, ಹೆಚ್ಚು ಇಳುವರಿ ಕೊಡುವ ಬೀಜ ಅಭಿವೃದ್ಧಿ ಪಡಿಸುವದಾಗಲಿ, ಇಂಧನ ಕೊರತೆ ನೀಗಿಸುವದರಲ್ಲಾಗಲಿ, ಕಡಿಮೆ ಇಂಧನ ಹಾಗೂ ಪರ್ಯಾಯ ಇಂಧನ ಬಳಸುವ ವಾಹನಗಳನ್ನು ಅಭಿವೃದ್ಧಿಪಡಿಸುವದಾಗಲಿ, ಮಳೆಯಾಧಾರಿತ ಹೆಚ್ಚು ಇಳುವರಿ ಕೊಡುವ ತಳಿಗಳ ಅಭಿವೃದ್ಧಿಯಾಗಲಿ, ಪ್ರತಿ ಹಳ್ಳಿಗರಿಗೆ ಆಧುನಿಕ ಪರಿಣಿತ ವೈದ್ಯರ ಸೇವೆ, ಔಷಧ, ಹಾಗೂ ಚಿಕ್ಕ ಗಾತ್ರದ ವೈದ್ಯಕೀಯ ಪರೀಕ್ಷೆಗಾಗಿ ಉಪಕರಣಗಳನ್ನು ಒದಗಿಸುವದಾಗಲಿ, ಕೃಷಿಕರು ಬೆಳೆದ ಕೃಷಿ ಉತ್ಪನ್ನಗಳ ಶೇಖರಣೆ ಹಾಗೂ ಸಾಗಾಣಿಕೆ, ಉತ್ಪನ್ನಗಳಿಗೆ ಯೋಗ್ಯ ಬೆಲೆ ಒದಗಿಸುವಲ್ಲಿ, ಮಾಹಿತಿ ತಂತ್ರಜ್ಞರೊಂದಿಗೆ ಇತರ ಇಂಜಿನಿಯರ್‌ಗಳೂ ಕೈಜೋಡಿಸಬೇಕಾಗುತ್ತದೆ. ಪರಿಸರ ಸ್ವಚ್ಛತೆ ಕಾಪಾಡಲು, ಪರಿಸರ ಸ್ನೇಹಿ ವಸ್ತುಗಳನ್ನು ಬಳಸಲು ಮತ್ತು ಬೆಳೆಸಲು, ಘನ ಮತ್ತು ದ್ರವ ತ್ಯಾಜ್ಯ ವಸ್ತುಗಳ ಶೇಖರಣೆ, ಶುದ್ಧೀಕರಣ ಮತ್ತು ಸಾಗಾಣಿಕೆ ಹೀಗೆ ಒಂದೇ, ಎರಡೇ, ನಾಗರಿಕರ ಜೀವನ ಸುಧಾರಿಸಲು ಅವಶ್ಯವಾಗಿರುವ ಪ್ರತಿಯೊಂದು ಬೇಡಿಕೆಯಲ್ಲಿಯೂ ವಿವಿಧ ಇಂಜಿನಿಯರ್‌ಗಳು ತಮ್ಮ ತಮ್ಮ ಕೊಡುಗೆ ಸಲ್ಲಿಸಲು ವಿಪುಲ ಅವಕಾಶಗಳಿವೆ.

**ಭಾವೀ ಇಂಜಿನಿಯರ್ ಆಗಬಯಸುವವರ ಮುಂದಿರುವ ಸವಾಲುಗಳು**

ಯಾವುದೇ ಇಂಜಿನಿಯರ್‌ಗಳ ಮುಂದೆ ಸಮಸ್ಯೆಗಳಿರುವದಿಲ್ಲ, ಸಮಸ್ಯೆಗಳನ್ನು ಸವಾಲಾಗಿ ಪರಿವರ್ತಿಸಿ, ಪರಿಹಾರ ಕಂಡುಹಿಡಿಯುವ ಕಲೆ ಅವರಿಗೆ ತಿಳಿದಿರುತ್ತದೆ. ಇಂಜಿನಿಯರಿಂಗ್ ಪದವಿ ಮುಗಿಯುವದರೊಳಗೆ ಈ ಜಾಣ್ಮೆಯನ್ನು ಗಳಿಸುವ ಅವಕಾಶಗಳು ಪಠ್ಯಕ್ರಮದಲ್ಲಿಯೇ ಅಳವಡಿಕೆಯಾಗಿ ಇರುತ್ತವೆ. ಆದರೆ, ಈ ಅವಕಾಶಗಳನ್ನು ಕೆಲವರು ಮಾತ್ರ ಗುರುತಿಸುತ್ತಾರೆ. ಅಂಥವರು ಮಾತ್ರ ಯಶಸ್ವೀ ಇಂಜಿನಿಯರ್ ಆಗಲು ಸಾಧ್ಯ. ಅವಕಾಶಗಳು ನಮ್ಮನ್ನು ಹುಡುಕಿಕೊಂಡು ಬರುವದಿಲ್ಲ, ಪ್ರತಿ ಕ್ಷಣ ನಮ್ಮ ಕಣ್ಮುಂದೆ ಸರಿಯುತ್ತ ಹೋಗುತ್ತಿರುತ್ತವೆ. ಇಂಜಿನಿಯರ್ ಆಗುವವನು ಅವುಗಳನ್ನು ಪ್ರಾರಂಭದಿಂದಲೇ ಗುರುತಿಸುವದನ್ನು ಕಲಿಯಬೇಕು. ವಿವಿಧ ಕ್ಷೇತ್ರಗಳಲ್ಲಿ, ವಿವಿಧ ಇಂಜಿನಿಯರಿಂಗ್ ವಿಭಾಗಗಳಲ್ಲಿ, ಭಾವೀ ಇಂಜಿನಿಯರ್‌ಗಳು ಎದುರಿಸಬಹುದಾದ ಸವಾಲುಗಳತ್ತ ಇಣುಕಿ ನೋಡಿದರೆ ಸಾಕು, ಅವಕಾಶಗಳ ಭವ್ಯತೆಯ ಅರಿವಾಗುವದು. ಅದು ಭಾವೀ ಇಂಜಿನಿಯರರಿಗೆ ದಿಕ್ಸೂಚಿಯೂ ಆಗಬಹುದು.

ಐವತ್ತರ ದಶಕದಲ್ಲಿ ಕೆಲವೇ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಸಿವಿಲ್, ಮೆಕ್ಯಾನಿಕಲ್ ಮತ್ತು ಇಲೆಕ್ಟ್ರಿಕಲ್ ವಿಷಯಗಳ ಬೋಧನೆಗೆ ಅವಕಾಶಗಳಿದ್ದವು. ಆಗ ಇಂಜಿನಿಯರ್‌ಗಳ ಬೇಡಿಕೆ ಇದ್ದರೂ ಹೆಚ್ಚು ಆಕಾಂಕ್ಷಿಗಳು ಅವಕಾಶವಂಚಿತರಾಗಿದ್ದು ನಮಗೆ ತಿಳಿದಿದೆ. ಆಗ ವಿಷಯ ಮತ್ತು ಕಾಲೇಜನ್ನು ಆರಿಸುವದು ಈಗಿನಷ್ಟು ಜಟಿಲವಾಗಿರಲಿಲ್ಲ. ಆದರೆ, ಈಗ ಸುಮಾರು ೩೦ಕ್ಕೂ ಹೆಚ್ಚು ಬಿಇ ವಿಷಯ ಬೋಧನೆಗೆ ಅವಕಾಶಗಳಿದ್ದು, ಕರ್ನಾಟಕದಲ್ಲಿ ನೂರೆಂಭತ್ತಕ್ಕೂ ಹೆಚ್ಚು ಕಾಲೇಜುಗಳಿದ್ದು, ಸುಮಾರು ಒಂದು ಲಕ್ಷ ಆಕಾಂಕ್ಷಿಗಳಿದ್ದು, ಕಾಲೇಜು ಮತ್ತು ಕೋರ್ಸಿನ ಆಯ್ಕೆಯ ಸಮಸ್ಯೆ ಒಡೆಯಲಾರದ ಕಬ್ಬಿಣದ ಕಡಲೆಯಂತೆ

## ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ ಪುರಸ್ಕೃತ ಕೃತಿಗಳು










ನವಕರ್ನಾಟಕ ಪ್ರಕಟಿಸಿರುವ **ವರ್ಣ ಮಾಯಾಜಾಲ** (ಡಾ|| ಎನ್. ಎಸ್. ಲೀಲಾ), **ಭೀಮಾಯಣ - ಅಸ್ಪೃಶ್ಯತೆಯ ಅನುಭವಗಳು** (ಶ್ರೀವಿದ್ಯಾ ನಟರಾಜನ್, ಎಸ್. ಆನಂದ್; ಅನು : ವಿ.ಎಸ್.ಎಸ್. ಶಾಸ್ತ್ರಿ) ಹಾಗೂ **ನ್ಯಾನೊಪ್ರಪಂಚ** (ಪ್ರೊ|| ಸಿ. ಎನ್. ಆರ್. ರಾವ್; ಅನು : ಇಂದುಮತಿ ರಾವ್) – ಈ ಮೂರು ಪುಸ್ತಕಗಳಿಗೆ ಭಾರತೀಯ ಪ್ರಕಾಶಕರ ಒಕ್ಕೂಟದ ೨೦೧೨ರ **ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ** ಲಭಿಸಿದೆ. ಸಂಸ್ಥೆಯ ನಿರ್ದೇಶಕರಾದ ಡಾ|| ಸಿದ್ದನಗೌಡ ಪಾಟೀಲ ಮತ್ತು ಶ್ರೀ ಪಿ. ವಿ. ಲೋಕೇಶ್ ಅವರು ೭-೯-೨೦೧೨ರಂದು ದೆಹಲಿಯಲ್ಲಿ ನಡೆದ ಸಮಾರಂಭದಲ್ಲಿ ಸಂಸ್ಥೆಯ ಪರವಾಗಿ ಪ್ರಶಸ್ತಿಗಳನ್ನು ಸ್ವೀಕರಿಸಿದರು.







ವಿದ್ಯಾರ್ಥಿಗಳ ಮತ್ತು ಪಾಲಕರ ತಲೆ ತಿನ್ನುತ್ತಿದೆ. ಜಟಿಲ ಸಮಸ್ಯೆಗೆ ಸುಲಭ ಪರಿಹಾರ ಒದಗಿಸುವದೂ ಇಂಜಿನಿಯರ್ ಆದವನಿಗೆ ತಿಳಿದಿರುತ್ತದೆ, ತಿಳಿದಿರಬೇಕು.

ಈಗಿರುವ ಬಿಇ ಬ್ರ್ಯಾಂಚ್‌ಗಳನ್ನು ಸಾಮಾನ್ಯವಾಗಿ, (ಅ) ಕೋರ್ ಬ್ರ್ಯಾಂಚ್‌ಗಳು, (ಆ) ಕೋರ್ ಬ್ರ್ಯಾಂಚ್‌ಗಳಿಗೆ ಹತ್ತಿರವಾದ ಬ್ರ್ಯಾಂಚ್‌ಗಳು ಮತ್ತು (ಇ) ವಿಶೇಷ ಬ್ರ್ಯಾಂಚ್‌ಗಳು ಎಂದು ಮೂರು ವಿಭಾಗಗಳಾಗಿ ವಿಂಗಡಿಸಬಹುದು. ಸಿವಿಲ್, ಇಲೆಕ್ಟ್ರಿಕಲ್ ಮತ್ತು ಮೆಕ್ಯಾನಿಕಲ್ ಕೋರ್ಸಗಳನ್ನು ಕೋರ್ ಬ್ರ್ಯಾಂಚ್‌ಗಳೆಂದು ವಿಭಜಿಸಿದರೆ, ಎನ್ವಾಯರ್ನಮೆಂಟಲ್ ಇಂಜಿನಿಯರಿಂಗ, ಆರ್ಕಿಟೆಕ್ಚರ್, ಕನಸ್ಟ್ರಕ್ಷನ್ ಇಂಜಿನಿಯರಿಂಗ, ಇವು ಸಿವಿಲ್ ಇಂಜಿನಿಯರಿಂಗಿಗೆ ಹತ್ತಿರವಾದವುಗಳು. ಇಲೆಕ್ಟ್ರಾನಿಕ್ಸ, ಟೆಲಿಕಮ್ಯುನಿಕೇಶನ್, ಕಂಪ್ಯೂಟರ್ ಸಾಯಿನ್ಸ, ಇನಫರ್ಮೇಶನ್ ಸಾಯಿನ್ಸ, ಇನಫರ್ಮೇಶನ್ ಟೆಕ್ನಾಲಜಿ, ಇನ್ಸ್ಟ್ರುಮೆಂಟೇಶನ್ ಟೆಕ್ನಾಲಜಿ ಇವೆಲ್ಲ ಇಲೆಕ್ಟ್ರಿಕಲ್ ಬ್ಯಾಂಚಿಗೆ ಹತ್ತಿರವಾದವುಗಳು. ಪ್ರೊಡಕ್ಷನ್ ಮ್ಯಾನೇಜಮೆಂಟ್, ಆಟೋಮೊಬಾಯಿಲ್ ಇಂಜಿನಿಯರಿಂಗ್, ಇವು ಮೆಕ್ಯಾನಿಕಲ್ ಬ್ರ್ಯಾಂಚಿಗೆ ಹತ್ತಿರವಾದವುಗಳು. ಇನ್ನು ಕೆಮಿಕಲ್ ಇಂಜಿನಿಯರಿಂಗ್, ಬಯೋಮೆಡಿಕಲ್ ಇಂಜಿನಿಯರಿಂಗ್, ಬಯೋಟೆಕ್ನಾಲಜಿ, ಟೆಕ್ಸ್‌ಟೈಲ್ ಟೆಕ್ನಾಲಜಿ, ರೊಬೊಟಿಕ್ಸ ಆಂಡ್ ಆಟೋಮೇಶನ್ ಮತ್ತು ಇತರ ಬ್ರ್ಯಾಂಚ್‌ಗಳನ್ನು ವಿಶೇಷ ಬ್ರ್ಯಾಂಚ್‌ಗಳೆಂದು ವಿಂಗಡಿಸಬಹುದು. ಕೋರ್ ಬ್ರ್ಯಾಂಚ್ ಮತ್ತು ಅವುಗಳಿಗೆ ಹತ್ತಿರವಾದ ಎಲ್ಲ ಬ್ರ್ಯಾಂಚ್‌ಗಳಿಗೂ ಸಮೀಪ ಸಂಬಂಧವಿದ್ದು, ನೌಕರಿ, ದೊರೆಯ ಬಹುದಾದ ಸಂಬಳ, ಮೊತ್ತ ಅಥವಾ ಸ್ವಯಂ ಉದ್ಯೋಗ ಸ್ಥಾಪಿಸುವುದಕ್ಕಾಗಲಿ, ಉನ್ನತ ವ್ಯಾಸಂಗಕ್ಕಾಗಲಿ ಸಮಾನ ಅವಕಾಶಗಳಿವೆ. ಎಲ್ಲರೂ ಕೋರ್ ಬ್ರ್ಯಾಂಚ್‌ಗಳನ್ನು ಮಾತ್ರ ಆಯ್ಕೆ ಮಾಡುವದಕ್ಕಾಗಿ ಮುಗಿಬೀಳುವದನ್ನು ನಾವು ಕಂಡಿದ್ದೇವೆ. ಇದಕ್ಕೇ ನಾನು ಸಮೂಹ ಸನ್ನಿ ಎಂದು ಹೇಳಿದ್ದು. ಮೇಲಾಗಿ ಪ್ರತಿಯೊಂದು ಕಾಲೇಜಿನಲ್ಲಿಯೂ ಈ ಕೋರ್ ಬ್ರ್ಯಾಂಚ್‌ಗಳ ಪ್ರವೇಶ ಸಂಖ್ಯೆ ನೋಡಿದರೆ ನಿಮಗದರ ಅರಿವಾಗುವದು. ಉದಾಹರಣೆಗೆ, ಇಲೆಕ್ಟ್ರಾನಿಕ್ಸ, ಮತ್ತು ಇತರ ಹತ್ತಿರದ ಬ್ರ್ಯಾಂಚ್‌ಗಳ ಪ್ರವೇಶಾನುಮತಿಯ ವೃದ್ಧಿದರ ಇತ್ತೀಚಿನ ವರ್ಷಗಳಲ್ಲಿ ೩.೭% ಇದೆ ಎಂದರೆ, ಪ್ರತಿ ವರ್ಷ ಈ ಕೋರ್ಸಗಳಿಂದ ಹೊರಬರುವ ಪದವೀಧರರ ಸಂಖ್ಯೆಯನ್ನು ಊಹಿಸಿ ನಿಮ್ಮ ಕೋರ್ಸಿನ ಆಯ್ಕೆ ಮಾಡಿಕೊಳ್ಳುವುದು ಉಚಿತ.

ವಿಶೇಷ ಬ್ರ್ಯಾಂಚ್‌ಗಳು ಕೆಲವೇ ಕಾಲೇಜಗಳಲ್ಲಿ ಇರುವದರಿಂದ ಪದವಿ ಪಡೆದು ಹೊರಬರುವವರ ಸಂಖ್ಯೆಯೂ ದೇಶದಲ್ಲಿ ಕಡಿಮೆ ಇರುವದರಿಂದ, ಉತ್ಪಾದನೆ ಉದ್ದಿಮೆಗಳಲ್ಲಿ, ಮಾರುಕಟ್ಟೆ, ಶಿಕ್ಷಣ ಮತ್ತು ಸ್ವಯಂಉದ್ಯೋಗ ಮುಂತಾದ ಕ್ಷೇತ್ರಗಳಲ್ಲಿ, ಆಂತರಿಕ ಮತ್ತು ಪರದೇಶಗಳಲ್ಲಿ ಅವಕಾಶಗಳು ವಿಪುಲವಾಗಿವೆ. ನಮ್ಮ ದೇಶದಲ್ಲಿ ಈ ವಿಶೇಷ ಬ್ರ್ಯಾಂಚಿನ ಪದವೀಧರರು ನಾಗರಿಕರ ಜೀವನಮಟ್ಟವನ್ನು ಹೆಚ್ಚಿಸುವದರಲ್ಲಿ ಮುಂಚೂಣಿಯಲ್ಲಿರಲು ಸಾಕಷ್ಟು ಅವಕಾಶಗಳಿವೆ. ಮೇಲಾಗಿ ಈ ವಿಶೇಷ ಬ್ರ್ಯಾಂಚ್‌ಗಳ ಪ್ರವೇಶಾನುಮತಿಯ ವಾರ್ಷಿಕ ವೃದ್ಧಿದರ ಇತ್ತೀಚಿನ ವರ್ಷಗಳಲ್ಲಿ ಕೇವಲ ೬%ಕ್ಕಿಂತಲೂ ಕಡಿಮೆ ಇದೆ. ಈ ಕೋರ್ಸಗಳನ್ನು ಆಯ್ಕೆಮಾಡಲು ಇದೂ ಒಂದು ಪುಷ್ಟಿ ಕೊಡುವ ಸಂಗತಿ. ಅಮೇರಿಕಾದಲ್ಲಿ ಅತೀ ಹೆಚ್ಚು ವಾರ್ಷಿಕ ವೃದ್ಧಿದರವಿದ್ದ ಕೋರ್ಸು ಬಯೋಮೆಡಿಕಲ್ ಬ್ರ್ಯಾಂಚ್ ಎಂಬುದು ನಿಮಗೆ ತಿಳಿದಿರಲಿ. ಅಲ್ಲಿ ಅದರ ವಾರ್ಷಿಕ ವೃದ್ಧಿದರ ೧೬.೩%.

**ಕೋರ್ಸ ಆಯ್ಕೆಗೆ ಮಾನದಂಡ**

ಕೋರ್ಸ ಆಯ್ಕೆಗಾಗಿ ಎಲ್ಲರಿಗೂ ಅನ್ವಯವಾಗುವ ಮಾನದಂಡದ ಪಟ್ಟಿಯನ್ನಿಲ್ಲಿ ಕೊಡುವದು ಸಾಧ್ಯವಾಗದು ಮತ್ತು ಅದು ಉಚಿತವೂ ಅಲ್ಲ ಎಂಬುದು ನನ್ನ ಅನಿಸಿಕೆ. ಏಕೆಂದರೆ ವ್ಯಕ್ತಿ ಮತ್ತು ವ್ಯಕ್ತಿತ್ವ ಬೇರೆ ಬೇರೆಯಾಗಿರುತ್ತದೆ. ವ್ಯಕ್ತಿ ಹೊರಗೆ ಕಾಣುವದಾದರೆ, ವ್ಯಕ್ತಿತ್ವ ಒಳಗಿನದು. ವ್ಯಕ್ತಿಯ ರೂಪಕ್ಕೆ, ವ್ಯಕ್ತಿತ್ವ ಸ್ವರೂಪ ಕೊಡುವ ಸಾಧನ. ವ್ಯಕ್ತಿ ಹೊರಗಣ್ಣಾದರೆ, ವ್ಯಕ್ತಿತ್ವ ಒಳಗಣ್ಣು. ಕೋರ್ಸ ಆಯ್ಕೆಯಲ್ಲಿ ಇಂಜಿನಿಯರ್ ಆಗುವ ಕನಸು ಕಾಣುವ ಪ್ರತಿಯೊಬ್ಬನೂ ತನ್ನ ಒಳಗಣ್ಣನ್ನು ತೆರೆದು ನೋಡಿ ಕೋರ್ಸಿನ ಆಯ್ಕೆಯ ನಿರ್ಧಾರ ತೆಗೆದುಕೊಳ್ಳಬೇಕಾಗುತ್ತದೆ. ಪ್ರತಿಯೊಬ್ಬನಿಗೂ ಅವನದೇ ಆದ ಮನೋವೃತ್ತಿಯೊಂದಿರುತ್ತದೆ. ಅದು ಅವನ ಅಂತರಾತ್ಮದ ಕೂಗು, ಹೃದಯದಿಂದ ಹೊರಬರುವ ವೈಚಾರಿಕ ತುಮುಲ. ಇದಕ್ಕೆ ನಾವು ಇಂಗ್ಲಿಷ್‌ನಲ್ಲಿ ಆ್ಯಟಿಟ್ಯೂಡ್ ಮತ್ತು ಆ್ಯಪ್ಟಿಟ್ಯೂಡ್ ಅನ್ನುವದು. ತಮಗೆ ಒಳಮನಸ್ಸೊಂದಿದೆ ಎನ್ನುವದು ಕೆಲವರಿಗೆ ಮಾತ್ರ ತಿಳಿದಿರುತ್ತದೆ. ಇದನ್ನು ತಿಳಿದವರು ಮಾತ್ರ ತಮ್ಮ ಒಳಮನಸ್ಸಿನೊಂದಿಗೆ ಸಂವಾದ ಮಾಡುವದನ್ನು ಅರಿತಿರುತ್ತಾರೆ. ಆದರೆ, ಪಾಲಕರಾಗಲಿ, ಶಿಕ್ಷಕರಾಗಲಿ, ಆಯ್ಕೆಯ ವಿಷಯದಲ್ಲಿ ಉಪದೇಶ ಕೊಡುವ ಹಿರಿಯರಾಗಲಿ, ನಮ್ಮ ಶಿಕ್ಷಣ ವ್ಯವಸ್ಥೆಯಾಗಲಿ ಇಷ್ಟು ಪ್ರಧಾನವಾದ ಅಂಶವನ್ನು ಕಡೆಗಣಿಸಿರುವದು ವಿಷಾದದ ಸಂಗತಿ.

ಇದಲ್ಲದೆ ಪ್ರತಿ ವಿದ್ಯಾರ್ಥಿಯ ಹಿನ್ನೆಲೆ, ಕಲಿತ ವಿಷಯಗಳಲ್ಲಿ ಗಳಿಸಿದ ಜ್ಞಾನದ ಆಳ, ಇದಕ್ಕಿಂತ ಮಿಗಿಲಾಗಿ ಆಂತರಿಕ ಆಸಕ್ತಿಯ ಮೇರೆಗೆ ಕೋರ್ಸಿನ ಆಯ್ಕೆಮಾಡಿದರೆ ಒಳ್ಳೆಯ ಯಶ ಕಾಣುವ ಪ್ರತಿಶತ ಹೆಚ್ಚಾಗಬಹುದು. ಒಂದು ಕಾಲೇಜು ಮತ್ತು ಒಂದು ಕೋರ್ಸನ್ನು ಆಯ್ಕೆಮಾಡುವಾಗ, ಆಯಾ ಕಾಲೇಜಿನಲ್ಲಿಯ ಮೂಲಭೂತ ಸೌಕರ್ಯಗಳು, ಬೋಧಕ ಸಿಬ್ಬಂದಿಯ ಶೈಕ್ಷಣಿಕ ಅರ್ಹತೆ ಮತ್ತು ಬೋಧನಾ ಸಾಮರ್ಥ್ಯ, ಬೋಧನಾ ಕ್ರಮದಲ್ಲಿ ಅಳವಡಿಸಿದ ಮಾರ್ಪಾಡುಗಳು, ಕಲಿಕೆಯಲ್ಲಿ ಮೌಲ್ಯವರ್ಧನೆಗೆ ಅವಕಾಶಗಳು, ಕಾಲೇಜಿನ ವಾರ್ಷಿಕ ಪರಿಣಾಮದ ಪ್ರತಿಶತ ದರ, ಕ್ಯಾಂಪಸ್ ಪ್ಲೇಸಮೆಂಟ್‌ಗೆ ಇರುವ ಅವಕಾಶಗಳು ಹಾಗೂ ವಾರ್ಷಿಕ ಪ್ರತಿಶತ ಪ್ಲೇಸಮೆಂಟ್ ಇತಿಹಾಸ, ಕ್ರೀಡೆ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ಇರುವ ಸವಲತ್ತುಗಳು ಹಾಗೂ ಪ್ರೋತ್ಸಾಹ, ಎಲ್ಲಕ್ಕೂ ಮಿಗಿಲಾಗಿ ಸಂಪೂರ್ಣ ವ್ಯಕ್ತಿತ್ವ ವಿಕಸನಕ್ಕೆ ಬೇಕಾಗಿರುವ ಕಲಿಕೆಯ ವಾತಾವರಣವನ್ನು ಗಮನಿಸಿ ಆಯ್ಕೆಯ ನಿರ್ಧಾರ ತೆಗೆದುಕೊಳ್ಳುವದು ಉತ್ತಮ. ಇದನ್ನೆಲ್ಲ ಗಮನಿಸದೆ ಕೋರ್ಸಿನ ಆಯ್ಕೆಮಾಡಿಕೊಂಡರೆ, ಪರಿಣಾಮ, ಜಯ ಅಥವಾ ಅಪಜಯ ಆಕಸ್ಮಿಕವಾಗಿ ಜರುಗಬಹುದು.





**ಪ್ರೊ॥ ಆರ್. ಪಿ. ಪುಸಗಿನ**
ನಿವೃತ್ತ ಪ್ರಾಚಾರ್ಯರು,
ಕೆಎಲ್‌ಇ ಡಾ॥ ಎಮ್. ಎಸ್. ಶೇಷಗಿರಿ ಅಭಿಯಾಂತ್ರಿಕ ಮತ್ತು ತಾಂತ್ರಿಕ ಮಹಾವಿದ್ಯಾಲಯ
ಬೆಳಗಾವಿ - ೫೯೦ ೦೦೮

## ಮಾಯಕಾರತಿ

*ಶರಣಪ್ಪ ವಡಿಗೇರಿ*

**ಪುಟ : xvi + ೬೦**

**ಬೆಲೆ : ರೂ. ೫೦**

**ಲಡಾಯಿ ಪ್ರಕಾಶನ,**
ನಂ. ೨೧, ಪ್ರಸಾದ್ ಹಾಸ್ಟೆಲ್,
ಗದಗ - ೫೮೨ ೧೦೧

ಜನಪದ ಶೈಲಿಯ ಇಲ್ಲಿನ ಕಥೆಗಳು ಹೈದರಾಬಾದ್ ಕರ್ನಾಟಕದ ಜವಾರಿ ಭಾಷೆಯಿಂದ ಕೂಡಿದ್ದು, ಆತ್ಮೀಯವೆನಿಸುತ್ತವೆ. ಸ್ವತಂತ್ರ ಭಾರತದ ಹಳ್ಳಿಗಳ ನೈಜಸ್ಥಿತಿಯನ್ನು ಚಿತ್ರಿಸುವ ಈ ಕಥೆಗಳು ಗ್ರಾಮಗಳಲ್ಲಿ ಅಲುಗಾಡದೆ ಸ್ತೂಪಗಳಂತೆ ನಿಂತಿರುವ ಜಾತಿಪದ್ಧತಿ, ಭೂ ಒಡೆಯರ ಯಜಮಾನಿಕೆ, ದರ್ಪ, ಶೋಷಣೆ, ಹಾದರ, ಮೌಢ್ಯಗಳ ವಿರಾಟ್ ಸ್ವರೂಪವನ್ನು ಬಿಡಿಸಿಡುತ್ತವೆ. ಅಷ್ಟೇ ಅಲ್ಲದೆ ಕುಟುಂಬ ಹಿಂಸೆ, ದಾಯಾದಿ ಕಲಹ, ಸ್ತ್ರೀಶೋಷಣೆ, ದೇವದಾಸಿ ಪದ್ಧತಿ, ಗುಳೆ ಹೋಗುವ ಅನಿವಾರ್ಯತೆಗಳನ್ನು ಬಂಡಾಯ ದಿಂದಲ್ಲದೆ, ಸೌಮ್ಯವಾಗಿಯೆ ನಿರ್ವಹಿಸುವ ಇಲ್ಲಿನ ಕಥೆಗಳು ಪ್ರತಿಭಟನೆಯ ಇನ್ನೊಂದು ಆಯಾಮವನ್ನೇ ತೆರೆಯುತ್ತವೆ. ನಿರ್ಲಕ್ಷಕ್ಕೆ ಒಳಗಾಗಿ ಚುನಾವಣೆಯ ಸಂದರ್ಭದಲ್ಲಿ ಮಾತ್ರ ನೆನಪಾಗುವ ಹೈದರಾಬಾದ್ ಕರ್ನಾಟಕದ ಜನತೆಯ ಒಡಲೊಳಗಿನ ಸಂಕಟಗಳನ್ನು ಎಳೆ ಎಳೆಯಾಗಿ ಬಿಡಿಸಿಡುವಲ್ಲಿ ಕಥೆಗಳು ಬಹು ಮುಖ್ಯ ಪಾತ್ರವಹಿಸುತ್ತವೆ.

ನೈಸರ್ಗಿಕವಾಗಿ ಸಂಪದ್ಭರಿತವಾಗಿದ್ದರೂ ಬಡತನ, ಹಸಿವು, ದಾರಿದ್ರ್ಯಗಳಿಂದ ತುಂಬಿ ತುಳುಕುತ್ತಿರುವ ಭಾರತೀಯ ಹಳ್ಳಿಗಳ ನಿಜಸ್ಥಿತಿಯನ್ನು ಕಟ್ಟಿಕೊಡುವುದರ ಜೊತೆಗೆ ಒಂದು ಸರ್ಕಾರ ಮಾಡಬೇಕಾದ ಗ್ರಾಮಗಳ ಸಮೀಕ್ಷೆಯ ಕೆಲಸವನ್ನು ಇಲ್ಲಿನ ಕಥೆಗಳು ಮಾಡುತ್ತವೆ ಎಂದರೆ ಅತಿಶಯೋಕ್ತಿಯಲ್ಲ, ಏಕೆಂದರೆ, ಇಲ್ಲಿನ ಕಥೆಗಳ ಮೂಲಧಾತು ಸಮಾಜವಿಮರ್ಶೆಯಾಗಿದೆ. ಬಹುಪಾಲು ಕಥೆಗಾರರು ನಗರ ಬದುಕಿನ ಹಿಂಸೆಯನ್ನೇ ವೈಭವೀ ಕರಿಸುತ್ತಾ ಗ್ರಾಮ ಬದುಕನ್ನು ಸ್ವರ್ಗವೆಂಬಂತೆ ಭಾವಿಸುತ್ತಿರುವ ಈ ಸಮಯದಲ್ಲಿ ಗ್ರಾಮಗಳ ನಿಜಬದುಕನ್ನು ಕಟ್ಟಿಕೊಡುವ ಮೂಲಕ ಇವು ಜೀವಂತಿಕೆಯನ್ನು ಪಡೆಯುತ್ತವೆ.

## ನಡೆದಷ್ಟೂ ನಾಡು (ತಿರುಗಾಟದ ಕಥನಗಳು)

*ರಹಮತ್ ತರೀಕೆರೆ*

**ಪುಟ : ೨೪೦** **ಬೆಲೆ : ರೂ. ೧೬೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ,
ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧

ಸಮಾಜದ ಕುರಿತಾದ ತೀವ್ರ ಚಿಂತನೆಗೆ ನಮ್ಮನ್ನು ಕೊಂಡೊಯ್ಯುವ ರಹಮತ್‌ರವರ ''ನಡೆದಷ್ಟೂ ನಾಡು'' ಕೃತಿ ಅವರ ಸಾಮಾಜಿಕ ಕಾಳಜಿಗೆ ಸಂಕೇತವಾಗಿದೆ. ಸಮಕಾಲೀನ ಸಂಗತಿಗಳಿಗೆ ಸಾಂಸ್ಕೃತಿಕ ಆಯಾಮ ನೀಡಿ ಅವನ್ನು ಸಾಮಾನ್ಯರಿಗೂ ತಲುಪಿಸುವ ಶಕ್ತಿ ಈ ಕೃತಿಯ ಲೇಖನಗಳಿಗಿದೆ. ನಾಡಿನ ಉದ್ದಗಲಕ್ಕೂ ವ್ಯಾಪಿಸಿರುವ ನಮ್ಮ ವಿಶಿಷ್ಟ ಪರಂಪರೆ, ಮೌಲ್ಯ, ಸಾಧುಸಂತರ ಸತ್ವವನ್ನು ಪರಿಚಯಿಸುತ್ತಾ, ಆಧುನಿಕತೆ ಮತ್ತು ಅದರೊಳಗಿನ ಪಲ್ಲಟಗಳನ್ನು ಕಾಣಿಸುವಲ್ಲಿ ಕೃತಿ ಯಶ ಕಂಡಿದೆ. ನೆಲಸಂಸ್ಕೃತಿಯ ದಾರ್ಶನಿಕರ ಜಾಡನ್ನು ಸ್ಥಳೀಯ ಹಿರಿಯರಿಂದ ಕಲೆಹಾಕುತ್ತಾ, ಅದನ್ನು ಕುರುಡಾಗಿ ನಂಬದೆ ಅದರ ವಾಸ್ತವ-ಅವಾಸ್ತವದ ಚಿಂತನೆಯನ್ನೂ ಸಹ ಈ ಕೃತಿಯ ಲೇಖಕರು ಮಾಡುತ್ತಾರೆ. ಇದು ದೇಸಿ ಸಂಸ್ಕೃತಿಯ, ವಿವಿಧ/ವಿಶಿಷ್ಟ ಪರಂಪರೆಗಳನ್ನು ಕಟ್ಟಿಕೊಡುವ ಕೃತಿ. ಅಷ್ಟೇ ಅಲ್ಲದೆ ಇಂದಿನ ಪ್ರಭುತ್ವಗಳು ಅಭಿವೃದ್ಧಿಯ ನೆಪದಲ್ಲಿ ನಡೆಸುತ್ತಿರುವ ದಬ್ಬಾಳಿಕೆ ಹಾಗೂ ಅತಿರೇಕಗಳನ್ನೂ ದಳ್ಳಾಳಿತನಗಳನ್ನೂ ಕಟ್ಟಿಕೊಡುವ ಕೃತಿ. ರೈತರ ಆತ್ಮಹತ್ಯೆಗಳು, ನಿರ್ಗತಿಕರಾಗುತ್ತಿರುವ ಭೂ ಒಡೆಯರು, ಲಾಭ ಗಳಿಸುತ್ತಿರುವ ಉದ್ದಿಮೆದಾರರು, ಇದರಿಂದ ಸಮಾಜದಲ್ಲಾಗುತ್ತಿರುವ ಅಸಮತೋಲನ, ಇದರ ಮುಂದಿನ ಅಪಾಯಗಳನ್ನು ಕೃತಿ ಮನಗಾಣಿಸುತ್ತಲೆ ಪ್ರಜಾಪ್ರಭುತ್ವದ ಹೆಸರಲ್ಲಿ ನಮ್ಮ ರಾಜಕಾರಣಿಗಳು ಸ್ವಾರ್ಥ ಪರವಾದ ಕಾನೂನುಗಳನ್ನು ರೂಪಿಸಿ ನೈಸರ್ಗಿಕ ಪರಿಸರವನ್ನು ಲೂಟಿ ಮಾಡುತ್ತಿರುವ ಪರಿಯನ್ನು ತುಂಬ ಕಾಳಜಿಯಿಂದ ಹಾಗೂ ವಿಷಾದದಿಂದ ಚಿತ್ರಿಸುತ್ತದೆ.

## ನಾನೊಂದು ಪ್ರಶ್ನೆ ಕೇಳಲೇ ?

*ವಿ. ಕೆ. ತಾಳಿತ್ತಾಯ*

**ಪುಟ : ೯೬** **ಬೆಲೆ : ರೂ. ೫೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ,
ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧

ವಿವಿಧ ಸಂಗತಿಗಳ ಬಗ್ಗೆ ಪ್ರಬಂಧಗಳನ್ನು ಬರೆಯುವುದು, ಮಾಹಿತಿಯನ್ನು ನೀಡುವುದು ಸುಲಭ. ಆದರೆ ವಿಷಯ-ಸಂಗತಿಗಳು ಕೇವಲ ಪ್ರಬಂಧದ ರೂಪದಲ್ಲಿದ್ದರೆ ಓದುಗರಿಗೆ ರುಚಿಸುವುದಿಲ್ಲ. ಅದರ ಬದಲು ಕಥೆಯ ಹಂದರವನ್ನು ಪಡೆದುಕೊಂಡರೆ ವಿಷಯವು ಸುಲಭವಾಗಿ ಗ್ರಾಹ್ಯ ಆಗುತ್ತದೆ. ಆ ಮೂಲಕ ಓದುವ ಕುತೂಹಲವನ್ನು ಹೆಚ್ಚಿಸುತ್ತಾ ಓದುಗರ ಮನಸ್ಸನ್ನು ಹಿಡಿದಿಟ್ಟು ಕೊಳ್ಳುವ ಶಕ್ತಿ ಕಥೆಗಳಿಗೆ ಬಂದುಬಿಡುತ್ತದೆ. ಈ ಕೃತಿಯ ವಿಶಿಷ್ಟತೆ ಇರುವುದೇ ಇಲ್ಲಿ. ತತ್ವಶಾಸ್ತ್ರ, ಆಧ್ಯಾತ್ಮ, ಜೀವನ ಮೌಲ್ಯಗಳು – ಹೀಗೆ ಹಲವು ಸಂಗತಿಗಳನ್ನು ನಿರೂಪಿಸಲಾಗಿರುವ ಇಲ್ಲಿನ ಬರಹಗಳು ಲೇಖನಗಳೂ ಹೌದು, ಕಥೆಗಳೂ ಹೌದು, ಸಂವಾದಗಳೂ ಹೌದು. ಈ ಮೂರರ ಗುಣಗಳೂ ಇಲ್ಲಿನ ಬರಹಗಳಿಗೆ ಇವೆ. ಪ್ರಶ್ನೆಗಳು ಮತ್ತು ಆ ಪ್ರಶ್ನೆಗಳಿಗೆ ತಕ್ಕ ಉತ್ತರಗಳ ರೂಪದ ಸಂವಾದದಂತೆ ಸಾಗುವ ಈ ಬರಹಗಳನ್ನು ವಯೋಮಾನದ ಹಂಗಿಲ್ಲದೆ ಎಲ್ಲರೂ ಓದಬಹುದಾಗಿದೆ. ತತ್ವಜ್ಞಾನಿಯಾಗಿದ್ದ ಸಾಕ್ರಟೀಸನ ವಿಚಾರಗಳು ಹೆಚ್ಚು ಜನಪ್ರಿಯತೆಯನ್ನು ಪಡೆದುಕೊಂಡದ್ದೇ ಅವು 'ಸಂವಾದ'ಗಳ ರೂಪಗಳಿಂದಾಗಿ. 'ದ ಡೈಲಾಗ್ಸ್ ಆಫ್ ಸಾಕ್ರಟೀಸ್' ಎಂತಲೇ ಆತನ ಕೃತಿಗಳು ಪ್ರಚುರಗೊಂಡವು. ಗುರು-ಶಿಷ್ಯರ ನಡುವಿನ ಪ್ರಶ್ನೋತ್ತರಗಳ ಮಾದರಿಯಲ್ಲಿ ಅಲ್ಲಿ ಸಂವಾದ ಸಾಗುತ್ತದೆ. ಪ್ರಸ್ತುತ ಕೃತಿಯಲ್ಲಿ ಅಜ್ಜ ಮತ್ತು ಮೊಮ್ಮಕ್ಕಳ ನಡುವೆ ನಡೆಯುವ ಹಲವು ಸಂವಾದಗಳು ನಮ್ಮಲ್ಲಿನ ಎಷ್ಟೋ ಪ್ರಶ್ನೆಗಳಿಗೆ ಉತ್ತರವನ್ನು ಕಾಣಿಸುತ್ತದೆ. ವಿಷಯದಿಂದ ವಿಷಯಕ್ಕೆ ಜಿಗಿಯುವ ಚರ್ಚೆ, ಸರಳವಾದ ನಿರೂಪಣಾ ಶೈಲಿ, ಮುಗ್ಧತೆ ಮತ್ತು ಜಾಣತನ ಬೆರೆತ ಪ್ರಶ್ನೋತ್ತರಗಳು – ಇಲ್ಲಿನ ಬರಹಗಳ ಹೈಲೈಟ್ಸ್. ಇವು ಬಹಳ ಭಾರವೆನಿಸುವುದಿಲ್ಲ; ತೀರ ಹಗುರವೂ ಅಲ್ಲ.

## ಮಹಿಳೆ (ದಲಿತತ್ವ ಮತ್ತು ರಾಜಕೀಯ ಪ್ರಜ್ಞೆ)

*ಡಾ// ಎಚ್. ಎಸ್. ಅನುಪಮಾ*

**ಪುಟ : ೧೫೨** **ಬೆಲೆ : ರೂ. ೧೨೦**

**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ - ೫೮೨ ೧೦೧

ಎಲ್ಲ ಬಗೆಯ ಮಹಿಳಾ ಚಳುವಳಿಗಳ ಉದ್ದೇಶ ಪುರುಷಪ್ರಧಾನವಾದ ಸಮಾಜವನ್ನು ಪ್ರಶ್ನಿಸುವುದು ಮತ್ತು ಸ್ತ್ರೀ-ಪುರುಷ ಸಮಸಮಾಜವನ್ನು ಸ್ಥಾಪಿಸುವುದು. ಆದರೆ ದುರಂತ ಸತ್ಯವೆಂದರೆ ಭಾರತದಲ್ಲಿ ಮಹಿಳಾ ಚಳುವಳಿಗಳು ಮತ್ತು ಸ್ತ್ರೀವಾದ ಹುಟ್ಟಿಕೊಂಡಿದ್ದೇ ಸುಧಾರಣಾವಾದಿ ಪುರುಷರಿಂದ. ಈ ಚಳುವಳಿಗಳೆಲ್ಲವೂ ಮೇಲುವರ್ಗಗಳನ್ನು ಪ್ರತಿನಿಧಿಸುತ್ತಿದ್ದವೇ ಹೊರತು ಕೆಳವರ್ಗದ ಹಳ್ಳಿಗಾಡಿನ ಮಹಿಳೆಯರನ್ನು ಅದರಲ್ಲಿಯೂ ದಲಿತರನ್ನು ಪ್ರತಿನಿಧಿಸಲೇ ಇಲ್ಲ. ಹಾಗಾಗಿ, ದಲಿತ ಮಹಿಳೆಯರು 'ದಲಿತ ಸ್ತ್ರೀವಾದ'ವನ್ನು ರೂಪಿಸಿಕೊಳ್ಳಬೇಕಾದ ಅನಿವಾರ್ಯತೆ ಸೃಷ್ಟಿಯಾಯಿತು. ಪ್ರಸ್ತುತ ಕೃತಿ ಸ್ತ್ರೀವಾದಕ್ಕಿರುವ ಹಲವು ಕೊರತೆಗಳನ್ನು ನೀಗಿಸುವಂಥದ್ದು ಮತ್ತು ಕನ್ನಡದಲ್ಲಿ 'ದಲಿತ ಸ್ತ್ರೀವಾದ'ವನ್ನು ರೂಪಿಸಲೆಳಸುವ ಅಪರೂಪದ ಕೃತಿ. ಮಹಿಳೆ, ರಾಜಕಾರಣ, ಪುರುಷಪ್ರಧಾನ ಸಮಾಜ, ಸ್ತ್ರೀಭ್ರೂಣಹತ್ಯೆ, ವಧುದಹನ, ಮಹಿಳಾ ವಿಮೋಚನೆ ಮತ್ತು ರಾಜಕೀಯ ವಿಮೋಚನಾ ಚಳುವಳಿಗಳು – ಹೀಗೆ ಹಲವು ಸಂಗತಿಗಳ ಬಗೆಗೆ ಚರ್ಚಿಸುವ, ವಿಶ್ಲೇಷಿಸುವ, ಯೋಚನೆಗೆ ಹಚ್ಚುವ ಚಿಂತನಶೀಲ ಲೇಖನಗಳ ಸಂಗ್ರಹವಿದು. ಈ ಕೃತಿಯ ಲೇಖಕಿ ಅನುಪಮಾ ಅವರು ವೃತ್ತಿಯಲ್ಲಿ ವೈದ್ಯರಾಗಿದ್ದರೂ, ಸಮಾಜಶಾಸ್ತ್ರಜ್ಞೆಯಲ್ಲಿ ಇರಬೇಕಾದ ವಿವೇಕ, ಸಾಹಿತಿಯಲ್ಲಿ ಇರಬೇಕಾದ ತಹತಹ, ಶಾಸನಶಾಸ್ತ್ರ ಪಂಡಿತರಲ್ಲಿರಬೇಕಾದ ಕುತೂಹಲ, ರಾಜಕೀಯ ಮೀಮಾಂಸಕರಲ್ಲಿ ಇರಬೇಕಾದ ರಾಜಕೀಯ ಪ್ರಜ್ಞೆ, ಇತಿಹಾಸಕಾರರಲ್ಲಿ ಇರಬೇಕಾದ ಕಾಲಪ್ರಜ್ಞೆ, ನಿಜವಾದ ಸ್ತ್ರೀವಾದಿಯಲ್ಲಿ ಇರಬೇಕಾದ ಕಾಳಜಿ ಮತ್ತು ಹೋರಾಟಗಾರ್ತಿಯಲ್ಲಿ ಇರಬೇಕಾದ ತೀವ್ರವಾಗಿ ಮಿಡಿಯುವ ಗುಣ ಹಾಗೂ ಸಾಮಾಜಿಕ ಬದ್ಧತೆ – ಈ ಎಲ್ಲಾ ಗುಣಗಳನ್ನೂ ಇವರ ಬರವಣಿಗೆಯಲ್ಲಿ ಒಟ್ಟಿಗೆ ಕಾಣಬಹುದು.

## ಗೃಹಪ್ರವೇಶ

*ಮೂಲ : ರವೀಂದ್ರನಾಥ ಠಾಕೂರ್;      ಅನು: ಶ್ರೀನಿವಾಸ್ ವಿ. ಸುತ್ರಾವೆ*

**ಪುಟ : xvi + ೬೬      ಬೆಲೆ : ರೂ. ೬೦**

**ದರ್ಪಣ ಪ್ರಕಾಶನ,** ಧಾರವಾಡ

*ಕನ್ನಡ ಸಾಹಿತ್ಯವು ಬೇರೆ ಬೇರೆ ಕಾಲಘಟ್ಟಗಳಲ್ಲಿ ಹೊಸ ಚೈತನ್ಯವನ್ನು ಪಡೆದುಕೊಂಡಿದ್ದೇ ಸೃಜನಶೀಲ ಭಾಷಾಂತರಗಳಿಂದ. ಈ ಸಂದರ್ಭದಲ್ಲಿ ನಮಗೆ ಪಂಪ, ರನ್ನ, ಕುಮಾರವ್ಯಾಸ, ಬಿ.ಎಂ.ಶ್ರೀ., ಬೇಂದ್ರೆ, ಕುವೆಂಪು – ಇವರೆಲ್ಲರೂ ನೆನಪಾಗುತ್ತಾರೆ. ಬಿ.ಎಂ.ಶ್ರೀ.ಯವರಂತೂ ಭಾಷಾಂತರದ ಶಕ್ತಿ ಸಾಮರ್ಥ್ಯಗಳನ್ನು ಸಾಬೀತುಗೊಳಿಸಿದವರು. ಇವರು ಸ್ವತಃ ಬರೆದದ್ದಕ್ಕಿಂತ ಭಾಷಾಂತರಿಸಿದ್ದೇ ಹೆಚ್ಚು. ಈ ಕೃತಿಯ ಮೂಲಕ ಶ್ರೀನಿವಾಸ ವಿ. ಸುತ್ರಾವೆಯವರೂ ಅಷ್ಟೇ ಸೃಜನಶೀಲ ಲೇಖಕರಾಗಿ ನಿಷ್ಠಾವಂತ ಅನುವಾದಕರಾಗಿ ಗುರುತಿಸಿಕೊಂಡವರು. ಈ ಕೃತಿಯು ಸೃಜನಶೀಲ ಭಾಷಾಂತರವಾಗಿದ್ದೂ ಮೂಲಕ್ಕೆ ನಿಷ್ಠತೆಯನ್ನು ಕಾಯ್ದುಕೊಂಡಿದೆ. ನಾಟಕದ ಒಳಗಿನ ವಿವರಗಳನ್ನು ಬಿ.ಎಂ.ಶ್ರೀ. ಮತ್ತು ಕುವೆಂಪು ಅವರ ಹಾಗೆ ಕನ್ನಡದ ಜಾಯಮಾನಕ್ಕೆ ಅಪ್ಯಾಯಮಾನ ಅನ್ನಿಸುತ್ತದೆ. ವಸ್ತುವಿನ ದೃಷ್ಟಿಯಿಂದ ನೋಡಿದಾಗ ದುರಂತದ ಛಾಯೆ ಉಳ್ಳ ವಿಷಾದಗೀತೆಯಿದು. ಓದುತ್ತಿದ್ದರೆ. ಕನಸುಗಾರನೊಬ್ಬನ ಹೃದಯಗೀತೆಯನ್ನು ಕೇಳುವಂತಿದೆ. ನಾಟಕದ ಉದ್ದಕ್ಕೂ ಮರಣಮೃದಂಗ ಮಿಡಿಯುತ್ತಿರುವುದು ಅನುಭವಕ್ಕೆ ಬರುತ್ತದೆ. ಇಲ್ಲಿನ ನಾಯಕ ಜತಿನ್ ತನ್ನ ಸುಂದರ ಹೆಂಡತಿಗಾಗಿ ಮಹಲನ್ನು ಕಟ್ಟಿಸುವ ಕನಸು ಕಂಡವನು. ಇವನು ಮರಣಶಯ್ಯೆಯಲ್ಲಿದ್ದರೂ ತನ್ನ ಆರೋಗ್ಯದ ಬಗ್ಗೆ ಕಾಳಜಿ ವಹಿಸುವುದಕ್ಕಿಂತಲೂ, ತನ್ನ ಕನಸಿನ ಮನೆಯ ಬಗ್ಗೆ ತಲೆಕೆಡಿಸಿಕೊಳ್ಳುವುದೇ ಹೆಚ್ಚು. ನಾವು ಹೆಚ್ಚು ಪ್ರೀತಿಸುವುದು ನಮ್ಮನ್ನು ಕಡೆಗಣಿಸಿದವರನ್ನೇ ಎಂಬುದು ನಮ್ಮ ಬದುಕಿನಲ್ಲಿ ಹೇಗೆ ದಿಟವೋ ಹಾಗೆಯೇ ಇಲ್ಲಿನ ಜತಿನ್ ವಿಷಯದಲ್ಲೂ ದಿಟವೆನಿಸುತ್ತದೆ. ಇದನ್ನು ಓದುತ್ತಿದ್ದರೆ ಷೇಕ್ಸ್‌ಪಿಯರ್‌ನ 'ಕಿಂಗ್‌ಲಿಯರ್' ನಾಟಕ ನೆನಪಾಗುತ್ತದೆ. ಮನುಷ್ಯನ ಬದುಕಿನ ದುರಂತದ ಬಗ್ಗೆ ಗಾಢವಾಗಿ ಯೋಚಿಸುವಂತೆ ಮಾಡಿದ ಶ್ರೇಷ್ಠ ನಾಟಕದ ಅನುವಾದಿತ ರೂಪ ಗೃಹಪ್ರವೇಶ.*




## ಗಣಿತ – ಮಕ್ಕಳಿಗಾಗಿ ಪದ್ಯ, ಪ್ರಬಂಧ, ಪರಿಕಲ್ಪನೆ




*ವಿ. ಎಸ್. ಎಸ್. ಶಾಸ್ತ್ರಿ*

**ಪುಟ : ೮೦ + viii      ಬೆಲೆ : ರೂ. ೪೦**

**ಕೆ. ಪ್ರಹ್ಲಾದರಾವ್, ಡಿವಿಜಿ ಪ್ರತಿಷ್ಠಾನ, ಕೋಲಾರ**

*ಕಲಿಕೆಯೆನ್ನುವುದು ಯಾಂತ್ರಿಕವಾಗುತ್ತಾ ತ್ರಾಸದಾಯಕವಾಗಿ ಪರಿಣಮಿಸಿರುವ ಇಂದಿನ ಆಧುನಿಕ ಶಿಕ್ಷಣ ವ್ಯವಸ್ಥೆಯಲ್ಲಿ ಮಕ್ಕಳು ಸಂತೋಷದ ಕಲಿಕೆಗಿಂತ ಒತ್ತಾಯಪೂರ್ವಕವಾಗಿ ಕಲಿಯುವ ಸ್ಥಿತಿ ಬಂದೊದಗಿರುವುದು ದುರಂತವೇ ಸರಿ. ಇದು ಮಕ್ಕಳ ಕಲಿಕೆ ಮತ್ತು ಮನಸ್ಸಿನ ಮೇಲೆ ದುಷ್ಪರಿಣಾಮ ಬೀರಿ ಅವರು ಮನೋವಿಕಲರಾಗಲು ಕಾರಣವಾಗುತ್ತಿದೆ. ಅದರಲ್ಲೂ ಗಣಿತ ವಿಷಯ ಕಬ್ಬಿಣದ ಕಡಲೆಯಂತಾಗಿ ಪರೀಕ್ಷಾ ದೃಷ್ಟಿಯ ಓದು ಮಾತ್ರವಾಗಿ ಉಳಿಯುವಂತಾಗಿದೆ. ಮಕ್ಕಳು ತಾವು ಕಲಿತದ್ದನ್ನು ತಮ್ಮ ಸುತ್ತಮುತ್ತಲಿನ ಪರಿಸರದಲ್ಲಿ ಕಾಣುವಂತಾಗಬೇಕು. ಪ್ರಾಯೋಗಿಕವಾಗಿ ಅನುಭವಿಸುವಂತಾಗಬೇಕು. ಕಲಿಕೆ ಉಲ್ಲಾಸದಾಯಕವಾಗಿದ್ದರೆ, ಆಟದಿಂದ ಪಾಠ ಎಂಬಂತಿದ್ದರೆ ಆ ಕಲಿಕೆ ಸದಾ ನೆನಪಲ್ಲಿ ಉಳಿಯುತ್ತದೆ. ಇಂತಹ ಉದ್ದೇಶಗಳನ್ನು ಇಟ್ಟುಕೊಂಡು ಈ ಕೃತಿ ರಚಿಸಲಾಗಿದೆ. ಇದೊಂದು ಪ್ರಯೋಗಶೀಲ ಕೃತಿ. ಗಣಿತದ ಆಸಕ್ತರಿಗೆ ಸಾಹಿತ್ಯದ ಮೂಲಕ ಕಲಿಸುವ ಪ್ರಯತ್ನ ಈ ಕೃತಿಯಲ್ಲಿದೆ. ಕಠಿಣ ವಿಷಯವೆಂದು ಭಾವಿಸಿರುವ ಗಣಿತ ವಿಷಯವನ್ನು ಆಟದ ಮೂಲಕ ಕಲಿಯುವ ಕಲಿತದ್ದನ್ನು ತಮ್ಮ ಮನೆ ಹಾಗೂ ಸುತ್ತಲಿನ ಪರಿಸರದಲ್ಲಿ ಪ್ರಯೋಗ ನಡೆಸಿ ಇನ್ನಷ್ಟು ಪರಿಣಾಮಕಾರಿಯಾಗಿಸಿಕೊಳ್ಳುವುದು ಹೇಗೆಂಬುದಕ್ಕೆ ಈ ಕೃತಿ ಕೈಗನ್ನಡಿಯಾಗಿದೆ. ಪದ್ಯ, ಪ್ರಬಂಧ, ಕಥೆ ಮುಂತಾದ ಪ್ರಕಾರಗಳ ಮೂಲಕ ಅಂಕಿಗಳ ಜ್ಞಾನವನ್ನು ಇಲ್ಲಿ ನೀಡಲಾಗಿದೆ. ಕೂಡುವ, ಕಳೆಯುವ, ಭಾಗಿಸುವ ಹಾಗೂ ಬೆಸ ಸಂಖ್ಯೆ, ಸಮ ಸಂಖ್ಯೆಗಳ ಜ್ಞಾನವನ್ನು ಆಟ ಆಡುತ್ತಲೇ ಕಲಿಯುವ ವಿಧಾನಗಳನ್ನು ಈ ಪುಸ್ತಕ ತಿಳಿಸುತ್ತದೆ. ಇದು ಮಕ್ಕಳಷ್ಟೇ ಅಲ್ಲದೆ ಶಿಕ್ಷಕರು, ಪೋಷಕರೂ ಸಹ ಓದಲೇಬೇಕಾದ ಅಮೂಲ್ಯ ಪುಸ್ತಕ.*

**– ರಮೇಶ ಕೋಲಾರ**

*ಪ್ರಥಮ ದರ್ಜೆ ಸಹಾಯಕರು, ಕರ್ನಾಟಕ ಲೋಕಾಯುಕ್ತ, ಕೋಲಾರ - ೫೬೩ ೧೦೧*

---

## ಸಾದರ ಸ್ವೀಕಾರ

**ನೆನಪು** (ಕವನ ಸಂಕಲನ)      ಮುನಿಯಪ್ಪ ಹುಬ್ಬಳ್ಳಿ
**ಪುಟ : xvi + ೫೪ = ೭೦      ಬೆಲೆ : ರೂ. ೫೦**
**ಮಹಾಮನೆ ಪ್ರಕಾಶನ,** ಯಲಬುರ್ಗಾ, ಕೊಪ್ಪಳ ಜಿಲ್ಲೆ

**ಸಂಕಲ್ಪ**      *ಪ್ರೀತೀಶ*
**ಪುಟ : ೨೪೮      ಬೆಲೆ : ರೂ. ೧೫೦**

**ಹಳ್ಳಿಹಾದಿ** ('ಪ್ರಜಾವಾಣಿ' ಅಂಕಣ ಲೇಖನಮಾಲೆ)
*ಜಿ. ಎಸ್. ಜಯದೇವ*
**ಪುಟ : ೨೪೮      ಬೆಲೆ : ರೂ. ೧೫೦**

**ಗೂಬಜ್ಜಿಯ ಗೊರಕೆ**      *ಎನ್. ಶ್ರೀನಿವಾಸ ಉಡುಪ*
**ಪುಟ : ೮೦      ಬೆಲೆ : ರೂ. ೪೦**

**ಆಮ್ಲ, ಪ್ರತ್ಯಾಮ್ಲ ಮತ್ತು ಲವಣಗಳು**      *ಬಿ. ವಿ. ಸುಭದ್ರಾ*
**ಪುಟ : ೧೩೬      ಬೆಲೆ : ರೂ. ೬೦**

**ವಿದ್ಯುನ್ಮಾನ ವಿದ್ಯಮಾನಗಳು**      *ಎಸ್. ಕ್ಷಮಾ*
**ಪುಟ : ೧೧೨      ಬೆಲೆ : ರೂ. ೬೦**

**ಪರಮಾಣು ನ್ಯೂಕ್ಲಿಯಸ್**      *ಪ್ರೊ|| ಡಿ. ಆರ್. ಬಳೂರಗಿ*
**ಪುಟ : ೧೦೮      ಬೆಲೆ : ರೂ. ೬೦**

**ದಿನನಿತ್ಯದ ಕನ್ನಡ**      *ದಿವ್ಯಜ್ಯೋತಿ, ಜೇನ್‌ಸಾಹಿ*
**ಪುಟ : ೧೩೬      ಬೆಲೆ : ರೂ. ೧೦೦**

*ಮೇಲಿನ ಏಳು ಪುಸ್ತಕಗಳ ಪ್ರಕಾಶಕರು*
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧.

**ಸಿಂಧೂ ನಾಗರಿಕತೆ**      *ಇರ್ಫಾನ್ ಹಬೀಬ್*
*ಕನ್ನಡಕ್ಕೆ : ಪ್ರದೀಪ್ ಬೆಳಗಲ್, ಹೆಚ್. ಎಸ್. ಜೈಕುಮಾರ್*
**ಪುಟ : ೧೭೮ + ೪      ಬೆಲೆ : ರೂ. ೧೨೦**
**ಚಿಂತನ ಪುಸ್ತಕ,** ನಂ. ೪೦೫, ೧ನೇ ಅಡ್ಡರಸ್ತೆ, ೧೦ನೇ ಮುಖ್ಯರಸ್ತೆ, ಡಾಲರ್ಸ್ ಕಾಲೋನಿ, ಜೆ. ಪಿ. ನಗರ, ೪ನೇ ಫೇಸ್, ಬೆಂಗಳೂರು - ೫೬೦ ೦೭೮

**ಕನ್ನಡ ಉಪನಿಷತ್ತುಗಳು**
*ಡಾ|| ವೃಷಭೇಂದ್ರಾಚಾರ್ ಅರ್ಕಸಾಲಿ*
**ಪುಟ : ೨೦೭      ಬೆಲೆ : ರೂ. ೧೧೦**
**ವಿದ್ಯಾನಿಧಿ ಪ್ರಕಾಶನ,** ಸ್ಟೇಷನ್ ರೋಡ್ ಮಹೇಂದ್ರಕರ ಸರ್ಕಲ್ ಹತ್ತಿರ, ೧ನೆಯ ಅಡ್ಡರಸ್ತೆ, ಗದಗ - ೫೮೨ ೧೦೧

**ಪುರುಷ ಅಹಂಕಾರಕ್ಕೆ ಸವಾಲ್**
*ಮೂಲ : ತಾರಾಬಾಯಿ ಶಿಂಧೆ,*
*ಕನ್ನಡಕ್ಕೆ : ಬಿ. ಸುಜ್ಞಾನ ಮೂರ್ತಿ*
**ಪುಟ : xvi + ೧೦೬      ಬೆಲೆ : ರೂ. ೮೦**
**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ - ೫೮೨ ೧೦೧

**ಬಳಪದ ಚೂರು** (ಕವನ ಸಂಕಲನ)      *ರೇಣುಕಾ ಕೋಡಗುಂಟಿ*
**ಪುಟ : ೧೦ + ೬೦      ಬೆಲೆ : ರೂ. ೪೦**

**ಕನ್ನಡ ಭಾಷಾ ವಿಜ್ಞಾನ ಸಂಶೋಧನೆ : ಇಂದು** (ಲೇಖನಗಳ ಸಂಕಲನ)      *ಸಂ. ರೇಣುಕಾ ಕೋಡಗುಂಟಿ*
**ಪುಟ : xii + ೧೨೪ = ೧೩೬      ಬೆಲೆ : ರೂ. ೧೦೦**

*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು*
**ಬಂಡಾರ ಪ್ರಕಾಶನ, ಪರಶುರಾಮ ಕೋಡಗುಂಟಿ,** ಮಸ್ಕಿ - ೫೮೪ ೧೨೪, ರಾಯಚೂರು ಜಿ.

**ತಕ್ಕ ಮಣ್ಣಿನ ತೇವಕ್ಕಾಗಿ** (ಸಾಹಿತ್ಯ ಕುರಿತ ಟಿಪ್ಪಣಿಗಳು)
*ಎನ್. ಸುರೇಶ್ ನಾಗಲಮಡಿಕೆ*
**ಪುಟ : ೧೩೮      ಬೆಲೆ : ರೂ. ೧೦೦**
**ಪ್ರಜ್ಞೆ ಪ್ರಕಾಶನ,** ಕುರಿಹಟ್ಟಿ, ಸಿರುಗುಪ್ಪ ರಸ್ತೆ, ಬಳ್ಳಾರಿ - ೫೮೩ ೧೦೩

**ನನ್ನೊಳಗಿನ ನಾನು** (ಕವನ ಸಂಕಲನ)      *ದಾಕ್ಷಾಯಿಣಿ ರಮೇಶ*
**ಪುಟ : x + ೪೪ = ೫೪      ಬೆಲೆ : ರೂ. ೩೫**

**ತಾಯಿ** (ಕವನ ಸಂಕಲನ)      *ದಾಕ್ಷಾಯಿಣಿ ರಮೇಶ*
**ಪುಟ : viii + ೨೮ = ೩೬      ಬೆಲೆ : ರೂ. ೩೦**

*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು*
**ಭೂಮಿ ಪೂಜಾ ಪ್ರಕಾಶನ,** ದರಬಾರ ಗಲ್ಲಿ, ಬಿಜಾಪುರ

**ಯಾವ ನಾಳೆಯೂ ನಮ್ಮದಲ್ಲ** (ಆತ್ಮಕಥನ)      *ಕೆ. ಉಷಾ ಪಿ. ರೈ*
**ಪುಟ : ೩೭೨      ಬೆಲೆ : ರೂ. ೨೦೦**
**ಪ್ರಿಯದರ್ಶಿನಿ ಪ್ರಕಾಶನ,** ನಂ. ೧೩೮, ೭ನೇ 'ಸಿ' ಮುಖ್ಯರಸ್ತೆ, ಹಂಪಿನಗರ, ಬೆಂಗಳೂರು - ೫೬೦ ೧೦೪

**ದೇಶದ ಇಂದಿನ ಸ್ಥಿತಿಗತಿ** (ಪ್ರಬಂಧಗಳು)
*ಎಂ. ವಿ. ಭಟ್ (ಶ್ರೀಮಿತ್ತೂರು)*
**ಪುಟ : xii + ೨೦೩      ಬೆಲೆ : ರೂ. ೧೨೫**
**ಯುಗಪುರುಷ ಪ್ರಕಟಣಾಲಯ,** ಕಿನ್ನಿಗೋಳಿ, ದಕ್ಷಿಣ ಕನ್ನಡ - ೫೭೪ ೧೫೦

**ಗೊಂದಲಿಗ್ಯಾ**      *ಎ. ಎಂ. ಮದರಿ*
**ಪುಟ : ೨೪೦      ಬೆಲೆ : ರೂ. ೧೨೫**
**ಲೋಹಿಯಾ ಪ್ರಕಾಶನ,** 'ಕ್ಷಿತಿಜ' ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩ ೧೦೩

## ಎಸ್. ನಟರಾಜ ಬೂದಾಳು

ಬ್ರಾಹ್ಮಣನನ್ನು ಬ್ರಾಹ್ಮಣತ್ವದಿಂದಲೂ, ಚಾಂಡಾಲನನ್ನು ಚಾಂಡಾಲತ್ವದಿಂದಲೂ ಒಮ್ಮೆಗೇ ಬಿಡುಗಡೆಗೊಳಿಸಬಲ್ಲ ಪ್ರಜ್ಞೆಯೆಂದರೆ ಅವಧೂತ ಪ್ರಜ್ಞೆ. ಬಿಡುಗಡೆಯು ಚಾಂಡಾಲನಿಗೆ ಮಾತ್ರವಷ್ಟೇ ಅಲ್ಲ, ಬ್ರಾಹ್ಮಣನಿಗೂ ಅದು ಅಷ್ಟೇ ಮುಖ್ಯ. ಬ್ರಾಹ್ಮಣತ್ವ ಮತ್ತು ಚಾಂಡಾಲತ್ವ ಎಷ್ಟೇ ದೊಡ್ಡ ಸಂರಚನೆಗಳಾದರೂ ಅವು ಅಷ್ಟೇ ಪೊಳ್ಳು ಎಂಬುದೂ ಸತ್ಯ. ಎಲ್ಲವನ್ನೂ ಒಂದೇ ಪಟ್ಟಿಗೆ ದಾಟಿ 'ಏನೂ ಅಲ್ಲದವರಾಗಿ' ನಿಂತ ಅವರನ್ನು 'ಇಂಥವರು' ಎಂದು ಕರೆಯಲು ಸಾಧ್ಯವಾಗುವುದಿಲ್ಲ. ಹಾಗೆ ಕರೆಯಲು ಸಾಧ್ಯವಾಗುವುದಾದರೆ ಅವರು ಅವಧೂತರಲ್ಲ. ಧರ್ಮ, ಕಾಲ-ದೇಶಮುಕ್ತರಾದ ಅವಧೂತರನ್ನು ಸೀಮಿತ ಭೌಗೋಳಿಕ ದೃಷ್ಟಿಯಿಂದಾಗಲೀ, ಜಗದ್ಗುರುಗಳೆಂದಾಗಲೀ ನೋಡುವುದು ಸಾಧುವಲ್ಲ. ಸಮೂಹವು ಇಂತಹವುಗಳಿಂದ ಮುಕ್ತವಾಗಿಯೇ ಅವರನ್ನು ನೋಡಿದೆ. ಸಮೂಹದ ಪಾಲಿಗೆ ಅವಧೂತ ಗದ್ದುಗೆಗಳು ಎಂದಿಗೂ ಜೀವಂತ ಗದ್ದುಗೆಗಳೇ. ಅಲ್ಲಿ ಜಾತಿ, ಧರ್ಮ, ದರ್ಶನಗಳ ಯಾವ ತಡೆಗೋಡೆಗಳೂ ಇಲ್ಲ. ನಿರಂತರವಾಗಿ ಹರಿಯುತ್ತಿರುವ ನದಿಗೆ ಎಲ್ಲಿಂದ ಪ್ರವೇಶಿಸಲಿ ಎನ್ನುವುದೆಲ್ಲ ತಾತ್ವಿಕರ ತೊಡಕುಗಳು. ಅದು ನದಿಯ



# ಬಯಲುಸೀಮೆಯ ಅವಧೂತರು

ಸಮಸ್ಯೆಯಲ್ಲ. ಕೇವಲ ಭಾಷಿಕ ಅನುಸಂಧಾನಕ್ಕೆ ಅವಧೂತರು ಎಂದೂ ದೊರಕುವುದಿಲ್ಲ. ಇದು ಕೇವಲ ಒಂದು ಭಾಷಿಕ ಪ್ರಯತ್ನವಾಗಿರುವುದರಿಂದ ಅಂತಹ ಎಲ್ಲ ಮಿತಿಗಳೂ ಈ ಬರೆಹಕ್ಕೆ ಇವೆ. ಈ ಅಕ್ಷರದ ಉದ್ಯೋಗಕ್ಕೆ ಇರುವ ಮಿತಿಗಳನ್ನು ಸೂಚಿಸುವ ಅಲ್ಲಮನ ವಚನದಿಂದಲೇ ಮಾತಿಗೆ ತೊಡಗಬಹುದೆನ್ನಿಸುತ್ತದೆ :

*ಹಿಂದಣ ಕವಿಗಳೆನ್ನ ತೊತ್ತಿನ ಮಕ್ಕಳು;*
*ಮುಂದಣ ಕವಿಗಳೆನ್ನ ಕರುಣದ ಕಂದಗಳು*
*ಹಿಂದೆಮುಂದೆಯಾಡುವ ಕವಿಗಳೆನ್ನ ಲೆಂಕಡಿಂಗರಿಗರು*
*ಹರಿ, ಬ್ರಹ್ಮ, ರುದ್ರ ಈ ಮೂವರೂ ಎನ್ನ ಕಕ್ಷೆಯ ಒಕ್ಕಲು*
*ಗೋಗೇಶ್ವರ ನೀನಳಿಯ ನಾ ಮಾವ*

ಇದುವರೆಗೆ ಸುಮಾರು ಮೂರು ನಾಲ್ಕು ಸಾವಿರ ವರ್ಷಗಳಲ್ಲಿ ನಾವು ಸಂಗ್ರಹಿಸಿಕೊಂಡು ಬಂದಿರುವ, ಜ್ಞಾನವೆಂದು ಕರೆದುಕೊಂಡಿರುವ ಮಾಹಿತಿಕೋಶವನ್ನು, ಕೌಶಲ್ಯವನ್ನು 'ಉತ್ಪಾದಿತ ಜ್ಞಾನವೆಂದು' ಅಲ್ಲಮ ಹಗುರವಾಗಿ ಕರೆಯುತ್ತಿದ್ದಾನೆ. ಹೀಗೆ ಕರೆವ ಉದ್ದೇಶ ಅದನ್ನು ಅಪಮಾನಿಸಬೇಕೆಂದೇನೂ ಅಲ್ಲ. ಆದರೆ ಅದೆಷ್ಟೇ ಪ್ರಾಚೀನವೆಂದರೂ ಸುಲಭವಾಗಿ ಅದನ್ನು ದಾಟಬಹುದು ಎಂದು ಸೂಚಿಸುತ್ತಿದ್ದಾನೆ – ಇದು ಈ ವಚನಕ್ಕೆ ಇರಬಹುದಾದ ಅನೇಕ ಓದುಗಳಲ್ಲಿ ಒಂದು. ಒಂದೇ ಪಟ್ಟಿಗೆ ಹೀಗೆ ದಾಟಿದವರನ್ನು ಅವಧೂತರೆನ್ನಬಹುದೇನೋ. ಅವಧೂತ ಪದವನ್ನು ವ್ಯಾಖ್ಯಾನಿಸಿಕೊಳ್ಳುವುದಕ್ಕೆ ಕೆಲವು ತೊಡಕುಗಳಿವೆ. ಮೊದಲನೆಯದಾಗಿ, ಅವಧೂತ ಎಂದರೆ ಏನು ಎನ್ನುವುದಕ್ಕಿಂತ ಏನಲ್ಲ ಎಂದು ವಿವರಿಸಿಕೊಳ್ಳುವುದು ನಿರಾಳವೆನಿಸುತ್ತದೆ. ಎಲ್ಲವನ್ನೂ ದಾಟಿ ತಾಕ್ಷಣಿಕತೆಯಲ್ಲಿ ಮಾತ್ರ ಬದುಕುವವರನ್ನು ವ್ಯಾಖ್ಯಾನಿಸಿ ಹೆಸರಿಡುವ ಹೊತ್ತಿಗೆ ಅವರು ಅದನ್ನು ದಾಟಿ ಮುಂದಕ್ಕೆ ಹೋಗಿರುತ್ತಾರೆ. ಅದೊಂದು ಸದಾ ದಾಟಿದ ಅವಸ್ಥೆಯೇ ಆಗಿರುವುದರಿಂದ, ಅದನ್ನು ನಿಲ್ಲಿಸಿ ವ್ಯಾಖ್ಯಾನಿಸುವ ಪ್ರಯತ್ನ ಫಲಕಾರಿಯಲ್ಲ.



ಅವಧೂತರು ಎಂದು ಕರೆಯಬಹುದಾದ, ಒಂದು ಪಂಥ, ದರ್ಶನ, ಸಂಪ್ರದಾಯ ಇಲ್ಲ. ಬದಲಿಗೆ ಅದೊಂದು ಅವಸ್ಥೆ, ಅದೊಂದು ಪ್ರಜ್ಞೆ. ಯಾವ ನಿಯಮ ಬಂಧಗಳಿಗೂ ಒಳಪಡದ ಮತ್ತು ಆಶಿಸದ ಸ್ವಭಾವವೇ ಅವಧೂತ ಪ್ರಜ್ಞೆ. ಇಲ್ಲಿ ಯಾವ ಬಂಧವೂ ಸಹ್ಯವಲ್ಲ. ಬಂಧಮುಕ್ತ ಸ್ಥಿತಿಯೇನಾದರೂ ದೀರ್ಘವಾದರೆ ಅದೂ ಇವರಿಗೆ ಬಂಧನದಂತೆಯೇ ಕಾಣಿಸಲಾರಂಭಿಸುತ್ತದೆ! ಹಾಗಾಗಿ ಇದೊಂದು ತಾಕ್ಷಣಿಕತೆಯ ಅವಸ್ಥೆ. ಅವಧೂತ ಪದಕ್ಕೆ ಭಿನ್ನ ಆಕರಗಳಿಂದ ದೊರೆತ ಕೆಲವು ವಿವರಣೆಗಳಿವು :

**ಗೋರಕ್ಷ ಸಿದ್ಧಾಂತ ಸಂಗ್ರಹ**

*ಕ್ವಚಿದ್ಭೋಗೀ ಕ್ವಚಿತ್ಯಾಗೀ ಕ್ವಚಿನ್ನಗ್ನ: ಪಿಶಾಚವತ್*
*ಕ್ವಚಿದ್ರಾಜಾ ಕ್ವಚಾಚಾರೀ ಸೋವಧೂತೋ ವಿಧೀಯತೇ*

**ಸಿದ್ಧ ಸಿದ್ಧಾಂತ ಪದ್ಧತಿ**

ಯೋಗಿ ಮತ್ತು ಅವಧೂತ ಎಂಬೆರಡು ಪರಿಕಲ್ಪನೆಗಳನ್ನು ಒಟ್ಟಿಗೇ ಅರ್ಥೈಸಿಕೊಳ್ಳಬೇಕು. ಯೋಗಿ ಪದಕ್ಕೆ 'ಮನಸ್ಸನ್ನು ಮೂಲದೊಂದಿಗೆ ಐಕ್ಯಗೊಳಿಸಿಕೊಳ್ಳುವವನು' ಎಂಬರ್ಥವಿದ್ದರೆ, ಅವಧೂತನೆಂದರೆ 'ದೂರ ಪ್ರಯಾಣದಿಂದಾಗಿ ಧೂಳು ಹಿಡಿದ ಕುದುರೆಯು ಹೇಗೆ ಮೈಯನ್ನೊಮ್ಮೆ ಝಾಡಿಸಿ ಧೂಳನ್ನು ಕೊಡವಿಬಿಡುವುದೋ ಹಾಗೆ ದೇಹ ಸಂಬಂಧದ ಎಲ್ಲ ಸಂರಚನೆಗಳನ್ನು ಒಮ್ಮೆಲೇ ಝಾಡಿಸಿಬಿಡುವವನು ಅವಧೂತನೆನಿಸಿಕೊಳ್ಳುವವನು.

**ಅವಧೂತ ಗೀತೆ**

'ಬ್ರಹ್ಮನಿಂದ ಮೊದಲ್ಗೊಂಡು ಸ್ಥಾವರ ಪರ್ಯಂತವಾದ ಸಮಸ್ತ ಜಗತ್ತನ್ನೂ ನಾನು ನನ್ನ ಆತ್ಮದಲ್ಲಿ ಭಿನ್ನಾಭಿನ್ನವಿಲಕ್ಷಣ ರೂಪವಾಗಿ ಕಾಣುತ್ತಿದ್ದೇನೆ. ಭೇದಾಭೇದಗಳು ಪರಸ್ಪರ ವಿರೋಧವಾಗಿರುವುದರಿಂದ ಎರಡೂ ಇರಲು ಸಾಧ್ಯವಿಲ್ಲ. ಆದುದರಿಂದಲೇ ಉಭಯ ವಿಲಕ್ಷಣವೆಂದು ಹೇಳುವುದಾಗಿದೆ. ನಾನು ಅದನ್ನು ನೋಡುವ ಪಂಚಮಾತ್ರಮೀ ಅವಧೂತನಾಗಿರುವೆನು.'

ಅವಧೂತ ಆತ್ಮವಾದಿಯೂ ಅಲ್ಲ, ಅನಾತ್ಮವಾದಿಯೂ ಅಲ್ಲ. ಅವನು ಯಾವುದಕ್ಕೂ ಅಂಟದವನು. ಏನನ್ನೂ ಅಂಟಿಸಿಕೊಳ್ಳದವನು. ಅವಧೂತ ಎಂದರೆ 'ತೊಳೆದುಕೊಂಡವನು', 'ತೊರೆದವನು' ಎನ್ನುವುದು ಅವಯವಾರ್ಥ ಮತ್ತು ಸಹಜಾರ್ಥ. ಅವಧೂತ ಇದ್ದ ಕಡೆ ಧರ್ಮ ಕಾಲು ಮುರಿದುಕೊಂಡು ಬಿದ್ದಿರುತ್ತದೆ. ಅದಕ್ಕೆ ಅಲ್ಲಿ ಕೆಲಸವಿಲ್ಲ. ಆದರೆ ಅವರಿರುವ ಕಡೆ ಧರ್ಮಮೇಘ ಎನ್ನುವ ಒಂದು ಸಮಾಧಿಸ್ಥಿತಿ ಇರುತ್ತದೆ. ಈ ಧರ್ಮಮೇಘ ಅವಧೂತನಿಗೆ ಸಹಜವಾಗಿಯೇ ಇರುತ್ತದೆ. ಎಲ್ಲವನ್ನೂ ಬಾಳಿಸುವ, ಎಲ್ಲವನ್ನೂ ಸಾತ್ವಿಕಗೊಳಿಸುವ ಶಕ್ತಿ ಧರ್ಮಮೇಘಕ್ಕೆ ಇದೆ. ಅವಧೂತ ಜ್ವಲನವೆಂಬ ಕರ್ಮವುಳ್ಳ ಜ್ಯೋತಿಸ್ವರೂಪನಾಗಿರುತ್ತಾನೆ. ಈ ಜ್ವಲನಜ್ಯೋತಿ ಆರ್ದ್ರಜ್ಯೋತಿಯೇ ಸರಿ. ಈ ಆರ್ದ್ರಜ್ಯೋತಿ ಇತರರನ್ನು ಸುಡದೆ ತಾನೇ ತಾನಾಗಿ ಬೆಳಗುವ ಜ್ಯೋತಿ. ಇಂತಹ ಜ್ಯೋತಿಸ್ವರೂಪವೇ ಅವಧೂತನಾಗಿರುವುದು. ಈತ ಭೇದವಿಲ್ಲದ ಪ್ರಕಾಶಸ್ವರೂಪ (ಮಲ್ಲೇಪುರಂ ಜಿ. ವೆಂಕಟೇಶ - ಅವಧೂತ ಒಂದು ತಾತ್ವಿಕ ಚಿಂತನೆ). ಮಂಟೇಸ್ವಾಮಿ ಹೀಗೆ ಬೆಳಕಿನ ಹುಳುವಾಗಿ ಲೋಕಕ್ಕೆ ಪ್ರವೇಶಿಸುತ್ತಾನೆ. ಅವನೇ ಒಂದು ಜ್ಯೋತಿ. ಹಿಂದಿನಿಂದ ಏನನ್ನೂ ತಾರದ, ಮುಂದಕ್ಕೆ ಏನನ್ನೂ ಉಳಿಸಿಹೋಗದ ನಿರನ್ವಯೋತ್ಪತ್ತಿ ವಿನಾಶ ತತ್ವದ ಬೆಳಕಿನ ರೂಪ. ಅದನ್ನು ಹಾದಿ ಬೀದಿಯಲ್ಲಿಟ್ಟು, ತಿಪ್ಪೆಯ ಮೇಲಿಟ್ಟು, ಸಮಾಧಿಯ ಮೇಲಿಟ್ಟು ಭಿನ್ನ ಭೇದವಿಲ್ಲದಂತೆ ಉರಿಸುತ್ತಾನೆ. ಅಲ್ಲಮನ ನುಡಿಯಲ್ಲಾದರೆ ಕಿಚ್ಚಿನ ಕೈಲಿ ಕರಡವ ಕೊಯಿಸಿದಂತೆ, ಹಿಂದೆ ಮೆದೆಯಿಲ್ಲ ಮುಂದೆ ಉರಿಯಿಲ್ಲ. ಹೀಗೆ ನಿರಂತರ ವರ್ತಮಾನದಲ್ಲಿ ಬದುಕಬಲ್ಲವನು ಅವಧೂತ.

**ದತ್ತಾತ್ರೇಯ ಪಂಥ**

ದತ್ತಾತ್ರೇಯ ಪಂಥವು ನಾಥ ಮತ್ತು ಸೂಫಿಗಳ ಒಂದು ಸಂಕರ ರೂಪ. ಇದರಲ್ಲಿ ಎರಡು ಶಾಖೆಗಳಿವೆ. ಒಂದು, ಜನಾರ್ದನಸ್ವಾಮಿಯಿಂದ ಸುರುವಾಗುವ ಮರಾಠಿ ದತ್ತಮಾರ್ಗ. ಇನ್ನೊಂದು, ಗಾಣಗಾಪುರದ ನೃಸಿಂಹ ಸರಸ್ವತಿಯಿಂದ ಸುರುವಾಗುವ ಕರ್ನಾಟಕದ ದತ್ತಮಾರ್ಗ. ಮರಾಠಿ ದತ್ತಮಾರ್ಗ ಹೆಚ್ಚು ಸೂಫೀಕರಣಗೊಂಡಿದೆ. ಶಂಬಾ ಜೋಶಿಯವರ ಪ್ರಕಾರ ಇದು ಅವೈದಿಕ ಯತಿಪಂಥಗಳಿಗೂ ವೈದಿಕ ಋಷಿಪಂಥಗಳಿಗೂ ನಡೆದ ಸಂಘರ್ಷ ರೂಪ. ಈ ಯತಿಮಾರ್ಗಕ್ಕೆ ಅವಧೂತ, ಆರೂಢ, ಸೂಫಿ, ನಾಥ, ಸಿದ್ಧ, ಪ್ರಭು, ರಾವೂಲ ಎಂದು ಗುರುತಿಸುವ ಅನುಭಾವಿಗಳೆಲ್ಲ ಸೇರುತ್ತಾರೆ. ಋಷಿಪಂಥ ವೇದಪ್ರಮಾಣವನ್ನು ನಂಬುತ್ತದೆ. ಯತಿಪಂಥ ಪ್ರಮಾಣಗಳನ್ನು ನಂಬುವುದಿಲ್ಲ; ಅದು ಗುರುವನ್ನು ಮಾತ್ರ ನಂಬುವ ಗುರುಮಾರ್ಗ.

**ದೇಸೀ ಪರಂಪರೆಗಳ ವಿವರಣೆಗಳನ್ನು ಗಮನಿಸಿದರೆ ಅವಧೂತ ಲಕ್ಷಣಗಳೆಂದು ಕೆಳಗಿನವುಗಳನ್ನು ಗುರುತಿಸಬಹುದು**

೧. ವರ್ಣಧರ್ಮವನ್ನು ಉಲ್ಲಂಘಿಸುವುದೇ ಅವಧೂತನಾಗಲು ಇರುವ ಪ್ರಥಮ ಅರ್ಹತೆಯಾಗಿದೆ.

೨. ಗುರುವೇ ಪರ್ಯಾಯ ದೇವರಾಗುವ ಕಾರಣದಿಂದ ಗುರುಪಂಥಗಳು ದೇವರ ಬಗ್ಗೆ ಚರ್ಚೆಯನ್ನೇ ಮಾಡುವುದಿಲ್ಲ.

೩. ಈ ಬಹುತೇಕ ಗುರುಪಂಥಗಳ ಹಿಂದೆ ಗೋರಖನಾಥ ಇದ್ದಾನೆ.

೪. ದೇಹ ಮತ್ತು ಮನಸ್ಸುಗಳ ಸಮನ್ವಯ ಸಾಧನೆ ಒಂದು ಗುರಿಯಾಗಿದೆ.

೫. ಅವಧೂತರು ಸಮೂಹದ ಸಂಕಟ ಪರಿಹಾರಕ್ಕೆ ಬದ್ಧರಾಗಿರುತ್ತಾರೆ.

೬. ಬೌದ್ಧರ ಅನಾತ್ಮವಾದ ಮತ್ತು ಶೂನ್ಯವಾದ ಅವರ ಪ್ರಮುಖ ನಿಲುವು.

೭. ಅವಧೂತ ದೀಕ್ಷೆಯು ಬ್ರಾಹ್ಮಣನನ್ನು ಬ್ರಾಹ್ಮಣ್ಯದಿಂದಲೂ, ಚಂಡಾಲನನ್ನು ಚಂಡಾಲತ್ವ ದಿಂದಲೂ, ಮುಸ್ಲಿಮನನ್ನು ಇಸ್ಲಾಮಿನಿಂದಲೂ ಏಕಕಾಲಕ್ಕೆ ಬಿಡುಗಡೆಗೊಳಿಸುತ್ತದೆ.

೮. ದ್ವೈತಾದ್ವೈತವನ್ನು ನಿರಾಕರಿಸುತ್ತದೆ.

೯. ಶಬ್ದ ಪ್ರಮಾಣವನ್ನು ನಿರಾಕರಿಸುತ್ತದೆ.

೧೦. ಇದೊಂದು ದೀಕ್ಷಾ ಪಂಥ. ಯಾರಾದರೂ ಇಚ್ಛೆಪಟ್ಟು ಆಗಬೇಕಾದದ್ದು - (ಆಗಬೇಕಾದದ್ದಲ್ಲ! ಇರುವುದೆಲ್ಲವನ್ನೂ ಬಿಡಬೇಕಾದದ್ದು!).

ಆದರೆ ಮಧ್ಯಯುಗೀನ ಸಂಸ್ಕೃತ ಪಠ್ಯಗಳು ಈ ತಾತ್ವಿಕತೆಯನ್ನು ದೊಡ್ಡ ಪ್ರಮಾಣದಲ್ಲಿ ತಿರುಚುವ ಪ್ರಯತ್ನ ಮಾಡಿದವು. ಸಂಸ್ಕೃತದ 'ತತ್ಸಮ' ಚರಿತ್ರೆಕಾರರು ಸಂಸ್ಕೃತ ಪ್ರಸ್ಥಾನಗಳ ಮೂಲಕ ಮತ್ತು ರಾಷ್ಟ್ರೀಯವಾದಿ ಪ್ರಸ್ಥಾನಗಳ ಮೂಲಕ ಈ ಪರಂಪರೆಗಳನ್ನು ವ್ಯಾಖ್ಯಾನಕ್ಕೊಳಪಡಿಸಿ ಅಂತಿಮವಾಗಿ ದ್ವೈತಾದ್ವೈತದ ಎರಕದಲ್ಲಿ ಬಂಧಿಸಿಬಿಟ್ಟವು. ಸಂಸ್ಕೃತ ವ್ಯಾಖ್ಯಾನಗಳಿಗೀಡಾದ ಅವಧೂತ ಗೀತೆ, ಸಿದ್ಧ ಸಿದ್ಧಾಂತ ಪದ್ಧತಿ, ಅಮನಸ್ಕ ಯೋಗ, ಗೋರಕ್ಷ ಸಿದ್ಧಾಂತ ಸಂಗ್ರಹ, ಅಮರೌಘಶಾಸನಂ, ಗೋರಕ್ಷ ಪದ್ಧತಿ – ಮುಂತಾದುವು ವೈದಿಕ ವ್ಯಾಖ್ಯಾನಗಳಿಂದ ತಮ್ಮ ಸ್ವಂತ ಚಹರೆಗಳನ್ನು ಕಳೆದುಕೊಂಡವು. ಈ ವ್ಯಾಖ್ಯಾನಗಳು ದೇಹ ಮೀಮಾಂಸೆಯನ್ನು ಆತ್ಮ ಮೀಮಾಂಸೆಗೆ, ಅನಾತ್ಮವಾದವನ್ನು ಆತ್ಮವಾದಕ್ಕೆ, ಅಮನಸ್ಕತೆಯನ್ನು ಚಿತ್ತಮಾತ್ರಕ್ಕೆ, ಪ್ರಮಾಣ ನಿರಾಕರಣೆಯನ್ನು ಶಬ್ದ ಪ್ರಮಾಣಕ್ಕೆ, ಭಿನ್ನಾಭಿನ್ನ ನಿರಾಕರಣೆಯನ್ನು ಅದ್ವೈತಕ್ಕೆ, ಆಕಾರ ನಿರಾಕಾರಗಳನ್ನು ದಾಟಿದ ಬಯಲನ್ನು ಸಗುಣೋಪಾಸನೆಗೆ, ಪರಿವರ್ತಿಸಿದವು. ಪಂಚಭೂತಗಳೆಂಬ ಕೇವಲ ಅವಸ್ಥೆಗಳನ್ನು ಮೂಲ ಕಾರಣಗಳನ್ನಾಗಿಸಲಾಯಿತು. ಈ ತಾತ್ವಿಕತೆಗಳೇ ಭಾರತೀಯ ಬದುಕನ್ನು ನಿಯಂತ್ರಿಸುತ್ತಿರುವ ನಿರ್ಣಾಯಕ ಅಂಶಗಳಾಗಿವೆ.

ಇದೊಂದು ಅತ್ಯಂತ ಸೂಕ್ಷ್ಮ ತಾತ್ವಿಕ ಸಮರ. ಸುಮಾರು ಒಂದು ಸಾವಿರದೈನೂರು ವರ್ಷಗಳ ಈಚೆಗೆ ಭಾರತದಲ್ಲಿನ ಜಾತ್ಯತೀತ ದರ್ಶನಗಳನ್ನು/ಪಂಥಗಳ ತಾತ್ವಿಕತೆಯನ್ನು ಭ್ರಷ್ಟಗೊಳಿಸಲು ನಡೆದ ಸಾಂಸ್ಕೃತಿಕ ರಾಜಕಾರಣದ ಬೇರುಗಳು ಇದರ ಆಳದಲ್ಲಿವೆ. ಮಧ್ಯಯುಗೀನ ಭಾರತೀಯ ತಾತ್ವಿಕ ಆವರಣವು ನಮ್ಮ ಚರಿತ್ರೆಯ ಅತ್ಯಂತ ಆಯಕಟ್ಟಿನ ಭಾಗ. ಇದು ಈ ನೆಲದ ಅಸಲಿ ಸಮೂಹದ ಎಲ್ಲ ಸ್ವಂತ ಚಹರೆಗಳನ್ನು ವಿರೂಪಗೊಳಿಸಿದ, ಅಪಹರಿಸಿದ, ಅನುಮಾನಕ್ಕೀಡುಮಾಡಿದ ಕಾಲ. ಇದರ ನಾಡಿಮಿಡಿತವನ್ನು ಆಲಿಸಬೇಕಾದರೆ ನಾಥ, ಸಿದ್ಧ, ಸೂಫಿ ಮುಂತಾದ ಶ್ರಮಣಧಾರೆಗಳಿಗೇ ಹೋಗಬೇಕು. ಇವುಗಳೊಡನೆ ಮಾತಿಗೆ ತೊಡಗಲು ಇರಬೇಕಾದ ಮೊದಲ ಅರ್ಹತೆಯೆಂದರೆ ಜಾತ್ಯತೀತ, ಪಂಥಾತೀತ ಮತ್ತು ಧರ್ಮಮುಕ್ತ ಮನಸ್ಸು. ಇಲ್ಲೊಂದು ಮಾರಣಾಂತಿಕ ತಾತ್ವಿಕ ಸೆಣಸಾಟವಿದೆ. ಅದರ ತೀವ್ರತೆಯ ಅರಿವಿಲ್ಲದೆ ಇಲ್ಲಿಗೆ ಪ್ರವೇಶಿಸಿದರೆ ವೈರಿಯ ಗಾಳವನ್ನು ನಾವಾಗಿ ನುಂಗಿದಂತೆ. ಸಿದ್ಧ, ನಾಥ, ಬೌದ್ಧ ಮುಂತಾದ ಶ್ರಮಣ ಧಾರೆಗಳ ಜಾತ್ಯತೀತ, ಧರ್ಮಾತೀತ ಪಂಥಗಳನ್ನು ಬ್ರಹ್ಮಬಂಧದಿಂದ ಹೆಡೆಮುರಿಗೆ ಕಟ್ಟಿ ದ್ವೈತಕ್ಕೋ, ಅದ್ವೈತಕ್ಕೋ ಅರ್ಪಿಸಿಬಿಡುವ ಸಾಂಸ್ಕೃತಿಕ ರಾಜಕಾರಣವೊಂದು ನಿರಂತರವಾಗಿ ಕ್ರಿಯಾಶೀಲವಾಗಿದೆ. ಈ 'ತತ್ಸಮ' ರಾಜಕಾರಣದ ಅರಿವಿಲ್ಲದೆ ಇಲ್ಲಿ ಕಾಲಿಡಲಾಗದು. ಇದು ಬೌದ್ಧ ತಾತ್ವಿಕತೆಯನ್ನು ಸ್ವತಃ ಎದುರಾಗಲು ಸಾಧ್ಯವಾಗದೆ ನಿಸ್ಸಹಾಯಕರಾದ ವೈದಿಕರು ಹೂಡಿದ ಬೃಹತ್ ಸಾಂಸ್ಕೃತಿಕ ರಾಜಕಾರಣ. ನಾಥ ಪಂಥದ ಸಂಕಲನಾನುಸಂಧಾನಕ್ಕೆ ತೊಡಗಿದ ವೈದಿಕರು ಮತ್ಸ್ಯೇಂದ್ರನಾಥನ ಹೆಸರಿನಲ್ಲಿ, ಗೋರಖನಾಥನ ಹೆಸರಿನಲ್ಲಿ, ಚರ್ಪಟನಾಥನ ಹೆಸರಿನಲ್ಲಿ ಹತ್ತಾರು

ಕೃತಿಗಳನ್ನು ನುಗ್ಗಿಸಿ ಅದೇ ಬ್ರಹ್ಮವಾದವನ್ನು, ಆತ್ಮವಾದವನ್ನು, ಅಸ್ತಿತ್ವವಾದವನ್ನು, ಮಾಯಾ ವಾದವನ್ನು, ದ್ವೈತಾದ್ವೈತಗಳನ್ನು ಒಳಸೇರಿಸಿದರು. ಹಾಗಾಗಿ ಈಗ ಈ ತಾತ್ವಿಕತೆಯನ್ನು ವಿಂಗಡಿಸಿ ಕೊಳ್ಳಲು ಸಾಧ್ಯವಾಗದಷ್ಟು ಕಲಸಿಹೋಗಿದೆ.



ಅವಧೂತರನ್ನು ಕಾಣಲು ಸಮೂಹದೊಳಗೇ ಹೋಗಬೇಕು. ಅವರೆಲ್ಲ ಜನಸಾಮಾನ್ಯರ ಅಂತಃಕರಣ ಮುಟ್ಟಿದವರು. ಸಮೂಹವು ಇಂದಿಗೂ ಎಲ್ಲವನ್ನು ದಾಟಿಹೋಗಿ ಅವಧೂತರಿಗೆ ಶರಣಾಗಿದೆ. ಸಾವಿರ ಸಾವಿರ ಅವಧೂತರು ಭಾರತದ ಉದ್ದಗಲಕ್ಕೂ ಇಂದಿಗೂ ಜನಮನವನ್ನು ಆವರಿಸಿಕೊಂಡಿದ್ದಾರೆ. ಕರ್ನಾಟಕದ ಮಟ್ಟಿಗೆ ಇಂತಹ ಧಾರೆಗಳೇ ಇವೆ. ಕೊಡೇಕಲ್ ಬಸವಣ್ಣನ ಪರಂಪರೆ, ಶಿರಹಟ್ಟಿ ಫಕೀರೇಶನ ಪರಂಪರೆ, ಸಾವಳಗಿ ಶಿವಯೋಗಿ ಪರಂಪರೆ, ತಿಂತಿಣಿ ಮೋನಪ್ಪಯ್ಯನ ಪರಂಪರೆ, ಮಳೆಯ ಮಲ್ಲೇಶನ ಪರಂಪರೆ, ಕಾಡಸಿದ್ದೇಶನ ಪರಂಪರೆ, ಮಂಟೇಸ್ವಾಮಿ ಪರಂಪರೆ, ಮಲೆಮಾದೇಶ್ವರನ ಪರಂಪರೆ... ಇತ್ಯಾದಿ. ದೇವಿಮಹಾತ್ಮೆ, ಜ್ಞಾನಸಿಂಧುವಿನ ಕರ್ತೃವಾದ ಚಿದಾನಂದಾವಧೂತರು ಕರ್ನಾಟಕದ ಮನಸ್ಸನ್ನು ದೊಡ್ಡ ಪ್ರಮಾಣದಲ್ಲಿ ಪ್ರಭಾವಿಸಿದ ಅವಧೂತರು. ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿ, ಮಂಟೇದಲ್ಲಮ, ರಾಚಪ್ಪಾ ಜಿ., ಬಾಬಾ ಬುಡನ್ ಗಿರಿಯ ದಾದಾ ಹಯಾತ್ ಮೀರ್ ಖಲಂದರ್, ಚಿಕ್ಕನಾಯಕನಹಳ್ಳಿಯ ಮೊದ್ದೀನ್ ಶಾ ಖಾದ್ರಿ, ತಿಂತಿಣಿ ಮೋನಪ್ಪಯ್ಯ, ಶಿಶುನಾಳ ಶರೀಫ, ವೆಂಕಾವಧೂತ, ಮುಕುಂದೂರು ಸ್ವಾಮಿ, ಮಹದೇವ ತಾತ ಇಂತಹ ನೂರಾರು ಹೆಸರುಗಳನ್ನು ಇಲ್ಲಿ ದಾಖಲಿಸುತ್ತ ಹೋಗಬಹುದು. ಕರ್ನಾಟಕದ ಸಾವಿರಾರು ಹಳ್ಳಿಗಳಲ್ಲಿ ಇಂದಿಗೂ ಸಮೂಹ ಆರಾಧಿಸುತ್ತಿರುವ ಅವಧೂತರು ಅವರ ಕಷ್ಟಕ್ಕೆ ಆಗುವವರು ಎಂಬ ನಂಬಿಕೆಯೇ ದೊಡ್ಡದು. ಕನ್ನಡ ಮನಸ್ಸಿಗೆ ಇಂದಿಗೂ ಇಷ್ಟವಾಗುವ ಕವಿ-ಅವಧೂತನೆಂದರೆ ಚಿದಾನಂದಾವಧೂತನೆ. ಅವನ 'ಶ್ರೀ ದೇವಿ ಮಹಾತ್ಮೆ' ಕನ್ನಡ ಜನರಿಂದ ಅತ್ಯಂತ ಹೆಚ್ಚು ಜನರಿಂದ ಓದಿಸಿಕೊಂಡಿರುವ ಮತ್ತು ಅಕೆಡೆಮಿಕ್ ವಲಯದಿಂದ ನಿರ್ಲಕ್ಷ್ಯಕ್ಕೀಡಾಗಿರುವ ಕೃತಿ. ಅದರ ಸಾಂಸ್ಕೃತಿಕ ರಾಜಕಾರಣದ ಸ್ವರೂಪ ಬೇರೆಯೇ ಇದೆ.

ಬಯಲು ಸೀಮೆಯ ಅವಧೂತ ಪರಂಪರೆ ಅತ್ಯಂತ ಹೆಚ್ಚು ವ್ಯಕ್ತವಾಗಿ ಗೋಚರಿಸುವುದು ತತ್ವಪದಕಾರರಲ್ಲಿ, ಅದೊಂದು ವಿಚಾರ ಮತ್ತು ಆಚರಣಾ ಪಂಥ ಎರಡೂ ಆಗಿರುವುದರಿಂದ ಸಮೂಹದ ಜೀವನ ಮೀಮಾಂಸೆಯನ್ನು ನೇರವಾಗಿ ಅನುಸಂಧಾನ ಮಾಡುತ್ತದೆ. ಸಮೂಹದ ಸಂಕಟವನ್ನು ತನ್ನ ಸಂಕಟ ವಾಗಿಸಿಕೊಳ್ಳುವ ಅವಧೂತ ಪರಂಪರೆಯು ಜನರ ನಡುವೆ ಜೀವಂತವಾಗಿ ಇರುವುದಕ್ಕೆ ಕಾರಣ ಅದು ದುಃಖದ ಅನುಸಂಧಾನದಲ್ಲಿ ತೊಡಗುವುದರಿಂದ. ಮೌಢ್ಯವನ್ನು ಎಂದೂ ಪೋಷಿಸದ, ತಾತ್ವಿಕ ಎಚ್ಚರವನ್ನು ಸದಾ ಜೀವಂತವಾಗಿ ಇಡುವ ಅವಧೂತರಿಗೆ ವಂದಿಸುತ್ತೇನೆ.

**ಎಸ್. ನಟರಾಜ ಬೂದಾಳು**
'ಗೌರಿ', ಸಪ್ತಗಿರಿ ಬಡಾವಣೆ, ನಳಂದ ಶಾಲೆ ಹಿಂಭಾಗ
ತುಮಕೂರು - ೫೭೨ ೧೦೨

# ಆತ್ಮಸಾಕ್ಷಿಯ ಮಾಡಿಕೋ ನಿನ್ನ ಬಾಳಕುಂಚ !



ಏವೆಯಿಕ್ಕದೆ ಹೀಗೆ ಎನ್ನ ನೋಡುವೆಯೇಕೆ ?
ಬಾಳ ಖಾಲಿ ಪುಟಗಳಿವು ನಿನ್ನವು ಕಂದಾ...
ಬರೆ, ಬಣ್ಣದೋಕುಳಿಗಳ ಚಿತ್ತಾರ.
ಚಿಂತೆ ಮಾಡದೆ ಬರೆ, ಚಿತ್ತಕೆ ಬಂದುದ ಬರೆ
ಸರಿತಪ್ಪು ವಿಚಾರ ಬೇಡವಿಲ್ಲಿ ಕಂದಾ...
ಮಾಡಿಕೋ ನಿನ್ನ ಕನಸ ಸಾಕಾರ.

ರೀತಿನೀತಿಗಳ ಬೇಲಿ ನಿನಗೆ ನಾ ಹೆಣೆಯಲೇಕೆ ?
ಕಲಿಕಾಲವಿದು ನೋಡು ನನ್ನ ಕಂದಾ...
ದಕ್ಕಿಸಿಕೋ ನೀ ನಿನ್ನ ಪಾಲ.
೧೯೪೭ರಿಂದ ''ಏಕೆ'' - ೪೭ರ ಕಡೆಗೆ
ಬೆಳೆದಿಹುದಿಲ್ಲಿ ಸಂಸ್ಕಾರ ! ನೋಡು ಕಂದಾ...
''ಜಾಣರ ಜಾಣ''ರಿಗಿದು ಸುಗ್ಗಿ ಕಾಲ.

ಗಾಂಧಿ ತಾತನ ಕಥೆ, ಹರಿಶ್ಚಂದ್ರನ ವ್ಯಥೆ ಬೇಕೇಕೆ ?
ಕೈಗಳಿಗವು ಕೋಳ ! ತೊಡಿಸಲಾರೆ ನಿನಗದನು ಕಂದಾ...
ಕಟ್ಟಿಕೋ ನಿನ್ನಯ ಭವ್ಯ ಪ್ರಪಂಚ.
ಅಪ್ಪ ನೆಟ್ಟ ಆಲದಮರ ನಿನಗೆ ನಾ ತೋರಿಸಲಾರೆ
ನಿನ್ನ ಬದುಕು ಹಸನಾಗಲಿ ನನ್ನ ಮುದ್ದು ಕಂದಾ...
ಆತ್ಮಸಾಕ್ಷಿಯ ಮಾಡಿಕೋ ನಿನ್ನ ಬಾಳಕುಂಚ !

ಮಾದರಿಗೆಂದು ಅಲ್ಲಿಲ್ಲಿ ಹುಡುಕುವೆಯೇಕೆ ?
ಹಳೇ ಕಂದಾಚಾರ !... ಬೇಡವೋ ನನ್ನ ಕಂದಾ...
ನಿನ್ನವಾಗಿರಲಿ ನಿನ್ನೆಲ್ಲಾ ವಿಚಾರ.

ಭಯಪಡದೆ ಬರೆ, ಭಲೇ ! ಎಂಬಂತೆ ಬರೆ
ಹೊಸತನವ ಮೆರೆ ಬಾಳಲ್ಲಿ ಕಂದಾ...
ಮಾಡಿಕೋ ನಿನ್ನ ಬದುಕ ಬಂಗಾರ.

**ಡಾ|| ವೀಣಾ ಪ್ರಸಾದ್**
ವಿಜ್ಞಾನಿ, ಮೃದು ವಸ್ತುಗಳ ಸಂಶೋಧನಾ ಕೇಂದ್ರ
ಅಂಚೆ ಪೆಟ್ಟಿಗೆ ಸಂಖ್ಯೆ ೧೩೨೯, ಜಾಲಹಳ್ಳಿ
ಬೆಂಗಳೂರು - ೫೬೦ ೦೧೩.

# ಕಾಮನಬಿಲ್ಲು

**ವಿನಯಾ ಭಟ್**

**ಕ**ರಾವಳಿಯ ದಕ್ಷಿಣ ಕನ್ನಡ ಮತ್ತು ಕಾಸರಗೋಡು ಎರಡೂ ಜಿಲ್ಲೆಗಳು ವಿಚ್ಛೇದಿತ ದಂಪತಿಗಳ ಎರಡು ಅಮಾಯಕ ಮಕ್ಕಳಿದ್ದಂತೆ. ಕರ್ನಾಟಕ ಮತ್ತು ಕೇರಳ ರಾಜ್ಯಗಳ ನಡುವೆ ಹರಿದು ಹಂಚಿಹೋಗಿದ್ದರೂ ಇವೆರಡರ ನಡುವಿನ ಬಂಧನ ಸ್ವಲ್ಪವೂ ಸಡಿಲವಾಗಿಲ್ಲ. ಹೊರನೋಟಕ್ಕೆ ಪ್ರಶಾಂತವಾಗಿ ಕಂಡುಬರುವ ಅಗ್ನಿಪರ್ವತದಂತಿರುವ ಈ ಎರಡು ಕಡಲ ಕಿನಾರೆಯ ಊರುಗಳು, ಕೋಮು-ದ್ವೇಷವೆಂಬ ಕುದಿಯುವ ಕೆಂಡವನ್ನು ತಮ್ಮ ಒಡಲಲ್ಲಿ ಸರ್ವಕಾಲಕ್ಕೂ ಬಚ್ಚಿಟ್ಟಿರುತ್ತವೆ. ಕ್ಷುಲ್ಲಕವೆನ್ನಿಸುವಂತಹ ಘಟನೆಗಳೂ ಕೂಡ ಪರಿಸ್ಥಿತಿಯನ್ನು ಕಲ್ಲೆಸೆದ ಕೊಳದಂತೆ ರಾಡಿ ಮಾಡಿಬಿಡಬಲ್ಲವು. ಜನರ ಮನದೊಳಗೆ ಸುಪ್ತವಾಗಿರುವ ಕೋಮುದ್ವೇಷದ ಭಾವನೆಗಳನ್ನು ಪ್ರೇರೇಪಿಸುವ ಸನ್ನಿವೇಶಗಳಿಗೂ, ನೀರುಣಿಸಿ ಪೋಷಿಸುವಂತಹ ವ್ಯಕ್ತಿಗಳಿಗೇನೂ ಕೊರತೆಯಿಲ್ಲ. ಇವೆಲ್ಲದರ ಪರಿಣಾಮವಾಗಿ ಹರತಾಳ, ಬಂದ್, ನಿಷೇಧಾಜ್ಞೆ, ಕರ್ಫ್ಯೂಗಳಿಂದ ಕೂಡಿದ ಜೀವನಕ್ರಮಕ್ಕೆ ಜನರು ಒಗ್ಗಿಹೋಗಿದ್ದಾರೆ. ಕಾಸರಗೋಡು ಜಿಲ್ಲೆಯು ಗಡಿನಾಡು ಜಿಲ್ಲೆಯೆಂಬ ಕಾರಣಕ್ಕೆ ರಾಜ್ಯ ಸರ್ಕಾರದ ನಿರ್ಲಕ್ಷ್ಯಕ್ಕೊಳಪಟ್ಟು ಅಭಿವೃದ್ಧಿ ಕನಸಿನ ಮಾತಾಗಿದೆ. ವಿದ್ಯಾರ್ಥಿಗಳು, ಉದ್ಯೋಗಾರ್ಥಿಗಳು, ಭಾಷೆ, ಶಿಕ್ಷಣ ಮಾಧ್ಯಮ, ರಾಜ್ಯಗಳ ತೊಡಕಿನಿಂದಾಗಿ 'ಎಲ್ಲಿಯೂ ಸಲ್ಲದವರಂತೆ' ಆಗುವುದೂ ಇದೆ.

ಮಂಗಳೂರಿನಲ್ಲಿ ನೆಲೆ ಕಂಡ ತಂದೆತಾಯಿಯರೊಂದಿಗೆ ಬೆಚ್ಚಗಿನ ಜೀವನ ನಡೆಸುತ್ತಿದ್ದರೂ ನನ್ನ ಮನಸ್ಸು ಹೆಚ್ಚಾಗಿ ತುಡಿಯುತ್ತಿದ್ದುದು ಕಾಸರಗೋಡಿನಲ್ಲಿರುವ ನನ್ನ ಅಜ್ಜನ ಮನೆಯ ಕಡೆಗೇ ಆಗಿತ್ತು. ಸೀತಾಂಗೋಳಿಯ ಸಮೀಪ ಇರುವ ಎಂಭತ್ತು ವರ್ಷಗಳಷ್ಟು ಹಳೆಯದಾದ 'ತರವಾಡು' (ಮೂಲಮನೆ, ಹಿರಿಯರಿಂದ ಪರಂಪರೆಯಿಂದ ಬಂದಂತಹ ಮನೆ) ಮನೆಯಲ್ಲಿ ಇರುತ್ತಿದ್ದುದು ನನ್ನ ಕೃಷ್ಣ ಮಾವ, ಅತ್ತೆ ಹಾಗೂ ಅವರ ಏಕಮಾತ್ರ ಪುತ್ರಿ ಜಾನಕಿ ಮಾತ್ರವೇ. ವಿಶಾಲವಾದ ಚಾವಡಿ, ದೇವರ ಮನೆ, ಊಟದ ಮನೆ, ಉಗ್ರಾಣ ಹಾಗೂ ಅಡಿಕೆ, ಅಕ್ಕಿಮುಡಿ, ಕಾಳುಮೆಣಸು ಮುಂತಾದವುಗಳನ್ನು ಸಂಗ್ರಹಿಸಿಡುತ್ತಿದ್ದ ದೊಡ್ಡದಾದ ಅಟ್ಟ, ಇವೆಲ್ಲವುಗಳನ್ನು ಹೊಂದಿದ ವಿಶಾಲವಾದ ಮನೆ. ಅಡಿಗೆ ಮನೆಯ ಮೇಲೆ ಇರುವ ಪ್ರತ್ಯೇಕವಾದ ಹೊಗೆ ಅಟ್ಟದಲ್ಲಿ ದೊಡ್ಡದಾದ ಭರಣಿಗಳಲ್ಲಿ ಮಿಡಿ ಉಪ್ಪಿನಕಾಯಿ, ಹಲಸಿನಕಾಯಿ ಹಪ್ಪಳ, ಮೆಣಸಿನ ಸಂಡಿಗೆ, ಮುಂತಾದುವುಗಳನ್ನು ಸಂಗ್ರಹಿಸಿಡುತ್ತಿದ್ದರು. ಮನೆಯ ಹಿಂದೆ ಇದ್ದ ದೊಡ್ಡದಾದ ಹಟ್ಟಿಯಲ್ಲಿ ಮೂರು ನಾಲ್ಕು ಹಾಲು ನೀಡುವ ಹಸುಗಳು, ಎಮ್ಮೆಗಳು ಹಾಗೂ ಎರಡು-ಮೂರು ಕರುಗಳು ಎಲ್ಲಾ ಕಾಲದಲ್ಲೂ ಇರುತ್ತಿದ್ದವು. ಮನೆಯ ಮುಂದಿನ ಹೂದೋಟದಲ್ಲಿ ಮುತ್ತುಮಲ್ಲಿಗೆ, ನಿತ್ಯಪುಷ್ಪ, ಗುಲಾಬಿ, ಮಲ್ಲಿಗೆ, ದಾಸವಾಳ ಮುಂತಾದ ಗಿಡಗಳು ಹೂಗಳಿಂದ ನಳನಳಿಸುತ್ತಿದ್ದವು. ಮನೆಗೆ ಹೊಂದಿಕೊಂಡಂತೆ ಐದು ಎಕರೆಯ ಅಡಿಕೆ ತೋಟವಿದ್ದು ಅಲ್ಲಿ ಹಲಸು, ಸೀಬೆ, ಚಿಕ್ಕು, ಮಾವು, ಸೀತಾಫಲ, ನಕ್ಷತ್ರನೇರಳೆ ಮುಂತಾದ ಹಣ್ಣಿನ ಮರಗಳೂ ಇದ್ದವು. ಮರಗಳ ನೀರಿನ ಪೂರೈಕೆಗಾಗಿ ಒಂದು ದೊಡ್ಡದಾದ ಕೆರೆಯೂ ಇತ್ತು. ಗೇರುಮರದಿಂದ ಕೂಡಿದ ಗುಡ್ಡವೂ ಇತ್ತು.

ಮನೆಯಿಂದ ಎರಡು ಕಿಲೋ ಮೀಟರ್ ದೂರದಲ್ಲಿ ನನ್ನ ಮಾವನ ಹೋಟೆಲ್ ಇತ್ತು. ಅವರು ಮುಂಜಾವಿನಲ್ಲೇ ಕೊರೆಯುವ ಚಳಿಗೆ ಎದ್ದು, ಬಾವಿಯಿಂದ ಎರಡು ಮೂರು ಕೊಡ ನೀರು ಸೇದಿ, ಮೈಮೇಲೆ ಸುರಿದುಕೊಂಡು, ಸ್ನಾನ ಮುಗಿಸಿ, ಸಂಧ್ಯಾವಂದನೆ ಮಾಡಿ, ಮೈಮೇಲೆಲ್ಲಾ ವಿಭೂತಿ ಬಳಿದುಕೊಂಡು, ಒಂದು ಬುಟ್ಟಿಯೊಂದಿಗೆ ತೋಟಕ್ಕೆ ಹೋಗುತ್ತಿದ್ದರು. ಬಿದ್ದಿರುವ ಅಡಿಕೆಯನ್ನೆಲ್ಲಾ ಹೆಕ್ಕಿ ತಂದು, ಅಂಗಳದಲ್ಲಿ ಒಣಹಾಕಿ, ನಂತರ ಉದ್ದವಾದ ಕುಂಕುಮ ನಾಮವನ್ನು ಬಳಿದುಕೊಂಡು, ಬನಿಯನ್, ಮೇಲೊಂದು ಅಂಗವಸ್ತ್ರ, ಕಾವಿ ಬಣ್ಣದ ಲುಂಗಿಯೊಂದನ್ನು ಉಟ್ಟುಕೊಂಡು, ಭಾರೀ ಠೀವಿಯಿಂದ ಹೋಟೆಲಿಗೆ ಹೊರಟುಬಿಡುತ್ತಿದ್ದರು. ಅವರ ವ್ಯಕ್ತಿತ್ವವಂತೂ ಅವರ ದಿನಚರಿಯಂತೆಯೇ ಆಸಕ್ತಿಕರ. ಕುಂಬ್ಳೆ, ಬದಿಯಡ್ಕದ ಸಮೀಪದ ಗ್ರಾಮಗಳಲ್ಲೇ ಅವರು ವರ್ಲ್ಡ್ ಫೇಮಸ್ ! 'ಹೋಟೆಲು ಕಿಟ್ಟಪ್ಪ' ಎಂದು ಹೇಳಿದರೆ, 'ಹೋ... ಅವರಾ !!!' ಎಂಬ ಉದ್ಗಾರ ಪ್ರತಿಯೊಬ್ಬರ ಬಾಯಿಯಿಂದಲೂ ಬಂದೇ ಬರುತ್ತದೆ. ಅವರ ಬಾಯಿಯ ಮುಂದೆ ನಿಲ್ಲುವ ತಾಕತ್ತು ಆಸುಪಾಸಿನಲ್ಲಿ ಯಾರಿಗೂ ಇರಲಿಲ್ಲ. ತಮ್ಮ ಹೋಟೆಲಿಗೆ ಬಂದ

ರಾತ್ರಿ ಅಂಗಳದ ಅಡಿಕೆ ರಾಶಿಯ ಮೇಲೆ ಕುಳಿತುಕೊಂಡು ಆಕಾಶವನ್ನು ನೋಡುತ್ತಾ , ನಾನು, ''ಜಾನು, ನಿಂಗೆ ಗೊತ್ತುಂಟಾ, ಈ ಭೂಮಿಯ ಮೇಲೆ ಎಷ್ಟು ಜನ ಇದ್ದಾರೋ ಅಷ್ಟು ನಕ್ಷತ್ರ ಉಂಟಂತೆ ಆಕಾಶದಲ್ಲಿ. ಭೂಮಿಯಲ್ಲಿ ಪ್ರತಿಯೊಂದು ಮಗು ಹುಟ್ಟುವಾಗ ಆಕಾಶದಲ್ಲಿ ಒಂದು ನಕ್ಷತ್ರ ಹುಟ್ಟುತ್ತದಂತೆ. ಹಾಗೇ ಪ್ರತಿಯೊಬ್ಬ ಮನುಷ್ಯ ಸಾಯುವಾಗ ಒಂದು ನಕ್ಷತ್ರ ಸಾಯ್ತದಂತೆ. ಅಕಾ... ಅಲ್ಲಿ ನೋಡು ಚಂದ್ರನ ಹತ್ರ ಒಂದು ದೊಡ್ಡ ನಕ್ಷತ್ರ ಉಂಟಲ್ಲಾ, ಅದು ನಂದು. ಅದ್ರ ಹತ್ರ ಫಳಫಳ ಹೊಳೀತದಲ್ಲ ಒಂದು ಚಿಕ್ಕ ನಕ್ಷತ್ರ, ಅದು ನಿಂದು'' ಎಂದು ನಾನು ಹೇಳುತ್ತಿದ್ದರೆ, ಅವಳು ಅದನ್ನೇ ಬೆರಗುಗಣ್ಣುಗಳಿಂದ ನೋಡುತ್ತಾ ''ಹೌದಾ ರಾಘು ಭಾವಾ, ನಂಗೆ ಗೊತ್ತೇ ಇರ್‍ಲಿಲ್ಲ! ಹಾಗಾದ್ರೆ ಅಪ್ಪ ಅಮ್ಮ ಯಾರು ? ಶ್ವೇತ, ರಾಣಿ, ವೀಣಾ ಎಲ್ಲ ಎಲ್ಲಿದ್ದಾರೆ ?'' ಎಂದು ಒಬ್ಬೊಬ್ಬರದೇ ಹೆಸರು ಹೇಳುತ್ತಾ ಹೋಗುತ್ತಿದ್ದಳು.



ಗಿರಾಕಿಗಳಿಗೆ ದೋಸೆ, ಪತ್ರೊಡೆ, ಸೇಮಿಗೆ-ಕಾಯಿಹಾಲು, ತೇಂಗೊಳಲು, ಇಡ್ಲಿ-ಸಾಂಬಾರು, ಗೋಳಿಬಜೆ-ಶುಂಠಿಚಟ್ನಿ, ಅಕ್ಕಿಉಂಡೆ-ಈರುಳ್ಳಿಚಟ್ನಿ, ನೀರುದೋಸೆ-ಕಾಯಿಬೆಲ್ಲ, ಹಲಸಿನಕಾಯಿ ದೋಸೆ-ತೆಂಗಿನಕಾಯಿ ಚಟ್ನಿಯ ಸೇವೆಯ ಜೊತೆಗೆ ಮಾತಿನ ಉಪಚಾರವೂ (?!!) ನಡೆದೇ ನಡೆಯುತ್ತಿತ್ತು. ''ನೀರ್ಚಾಲಿನ ರಾಧಕ್ಕನ ಮಗ ಎಸ್ಸೆಸ್ಸೆಲ್ಸಿಯಲ್ಲಿ ಆರನೇ ಸಲ ಫೇಲಾದನಂತೆ'', ''ಕೆನ್ನಪ್ಪಾಡಿಯ ರಾಮಣ್ಣನ ಮೂವತ್ತೆರಡು ವರ್ಷದ ಮಗಳನ್ನು ನೋಡಲು ಬಂದ ಹದಿನೆಂಟನೆಯ ಗಂಡು ಅವಳನ್ನು ತಿರಸ್ಕರಿಸಿ ಹೋದನಂತೆ'' ಎಂದೆಲ್ಲಾ ಹರಟೆ ಹೊಡೆಯುತ್ತಿದ್ದರು. ಅವರ ಮಾತಿಗೆ ಆಹಾರವಾದವರ ಪಾಡಂತೂ ಹೀನಾಯವಾಗಿರುತ್ತಿತ್ತು. ಅಂತಹವರೇನಾದರೂ ಎದುರಿಗೆ ಕಾಣಸಿಕ್ಕರೆ, ''ರಾಧಕ್ಕ, ನಿನ್ನ ಮಗ ಪಾಸ್ ಆಗ್ಬೇಕಾದ್ರೆ ಹೀಗೆ ಕೂತ್ಕೊಂಡ್ರೆ ಆಗುದಿಲ್ಲ, ಶೃಂಗೇರಿಯ ಶಾರದಾಂಬೆಗೆ ಹರಕೆ ಹೊರು. ಮುಂದಿನ ವರ್ಷ ಪಾಸಾಗದೆ ಎಲ್ಲಿಗೆ ಹೋಗ್ತಾನೆ ನೋಡ್ತೇನೆ ನಾನು'' ಎಂದೋ, ''ರಾಮಣ್ಣ, ನಿನ್ನ ಮಗಳಿಗೆ ಮದ್ವೆ ಆಗ್ಬೇಕಾದ್ರೆ, ಗುರುವಾಯೂರಪ್ಪನಿಗೆ ಹರಕೆ ಹೊರು. ನಾಲ್ಕು ತಿಂಗಳ ಒಳಗೆ ರಾಜಕುಮಾರನಂತಹ ಅಳಿಯ ಸಿಗ್ತಾನೆ ನೋಡು'' ಎಂದೋ ಪುಕ್ಕಟೆ ಸಲಹೆಯನ್ನಂತೂ ಕೊಟ್ಟೇ ಕೊಡುತ್ತಿದ್ದರು. ಕೆನ್ನೆ ತಟ್ಟಿಕೊಂಡು, ಭಕ್ತಿಯಿಂದ, ದೇವರಿಗೆ ಅಲ್ಲಿಂದಲೇ ಕೈ ಮುಗಿದುಬಿಡುತ್ತಿದ್ರು. ಗುರುವಾಯೂರಿನ ಶ್ರೀಕೃಷ್ಣ, ಶೃಂಗೇರಿಯ ಶಾರದಾಂಬೆ, ಇವರ ಪ್ರಾರ್ಥನೆಯನ್ನು ಸ್ವೀಕರಿಸಿ, ಕೃತಾರ್ಥರಾಗಿ, ಅಲ್ಲಿಂದಲೇ ಮನಃಪೂರ್ವಕವಾಗಿ ಆಶೀರ್ವಾದ ಮಾಡುತ್ತಿದ್ದರೋ ಏನೋ !!

ಇತರ ಧರ್ಮೀಯರ ನೆರಳು ಕಂಡರೂ ಉರಿದುಬೀಳುತ್ತಿದ್ದರು. ಕುಂಬ್ಳೆಯ ಬಸ್‌ಸ್ಟ್ಯಾಂಡಿನಲ್ಲಿ 'ಕರಾವಟ್ಟೆ... ಕರಾವಟ್ಟೆ... ' ಎಂದು ಕೂಗುತ್ತಾ ಪೇಪರ್ ಮಾರುವ ಇಮಾಮಿಯಿಂದ ಹಿಡಿದು, ಬದಿಯಡ್ಕದ ಗ್ಯಾರೇಜಿನಲ್ಲಿ ಕೆಲಸ ಮಾಡುವ ಅಂತೋಣಿಯವರೆಗೆ ಪ್ರತಿಯೊಬ್ಬರನ್ನೂ ಮಾತಿನಲ್ಲೇ ಗ್ರಹಚಾರ ಬಿಡಿಸಿಬಿಡುತ್ತಿದ್ದರು. ಅಪ್ಪಿತಪ್ಪಿಯೂ ಕೂಡಾ ಯಾರಾದರೊಬ್ಬರು, ''ಇದೇನು ಭಟ್ರೆ! ಹೀಗೆಲ್ಲಾ ಹೇಳ್ಬಾರ್ದು, ಅವರೂ ಕೂಡಾ ನಮ್ಮ ಹಾಗೆ ಮನುಷ್ಯರಲ್ವಾ'' ಎಂದು ಹೇಳಿದರೆ, ''ನಮ್ಮ ಗೋಮಾತೆಯನ್ನು ತಿನ್ನುವವ್ರು ಮನುಷ್ಯರು ಹೇಗೆ ಆಗ್ತಾರೆ, ರಕ್ಕಸರು ಅವರು'' ಎಂದು ಹೇಳಿ ಪ್ರಾರಂಭ ಮಾಡಿದರೆ ಸಹಸ್ರನಾಮಾರ್ಚನೆ ಮಾಡಿಯೇ ತೀರುತ್ತಿದ್ದರು. ಕೆಲವೊಮ್ಮೆ ಇಬ್ಬರ ನಡುವೆ ವಾದವಿವಾದಗಳು ತಾರಕಕ್ಕೇರುವುದೂ ಇದೆ. ಆಗ ಕೆಲವರಿಗೆ ಅದು ಬಿಟ್ಟಿ ಮನರಂಜನೆಯಾದರೆ, ಇನ್ನು ಕೆಲವರು ಹೋಟೆಲಿನ ತಿಂಡಿಯೆಲ್ಲವನ್ನು ತಿಂದು ದುಡ್ಡು ಕೊಡದೆ ಕಾಲ್ಕಿತ್ತ ಉದಾಹರಣೆಗಳೂ ಇವೆ.

ಮಾತಿಗೆ ಕುಳಿತರೆ ಪ್ರಳಯ ಆದರೂ ತಿಳಿಯುತ್ತಿರಲಿಲ್ಲ. 'ಹೆಂಗಸರಿಗೆ ಮಾತು ಜಾಸ್ತಿ' ಎಂದು ಹೇಳುವವರನ್ನು ಒಮ್ಮೆ ಇವರ ಮುಂದೆ ತಂದು ನಿಲ್ಲಿಸಬೇಕೆಂದು ನನಗೆ ಅನ್ನಿಸುತ್ತಿತ್ತು. ಅವರ ಧರ್ಮನಿಷ್ಠೆ ಎಲ್ಲಿಯವರೆಗೆ ಇತ್ತೆಂದರೆ, ಒಮ್ಮೆ ಅವರ ಮಗಳು ಜಾನುವಿಗೆ, ಕಾಸರಗೋಡು ಪೇಟೆಯ ಹಾಜಿ ಬ್ಯಾರಿಗಳ ಅಂಗಡಿಯಿಂದ ಒಂದು ಹೊಸ ಬಟ್ಟೆ ತಂದ ಕಾರಣಕ್ಕೆ ಕೆಂಡಾಮಂಡಲವಾದ ಮಾವ, ''ನಿನಗೆ ಈ ಬುರ್ನಾಸು ಅಂಗಿ ತರ್ಲಿಕ್ಕೆ ಆ ಬೇವರ್ಸಿ ಬ್ಯಾರಿಯ ಅಂಗಡಿಯೇ ಬೇಕಿತ್ತಾ'' ಎಂದು ಬೈಯ್ದು ಪುಟ್ಟ ಹುಡುಗಿಯ ಬೆನ್ನಿಗೆರಡು ಬಾರಿಸಿ ಹೊಸ ಬಟ್ಟೆಯನ್ನು ತೋಡಿಗೆ ಎಸೆದಿದ್ದರು. ಮರುದಿನವೇ ಶೆಟ್ಟಿ ಅಂಗಡಿಯಿಂದ ಎರಡು ಜೋಡಿ ಬಟ್ಟೆಯನ್ನು ತಂದಿದ್ದರು. ಕಾನ್ವೆಂಟ್ ಸ್ಕೂಲಿನಲ್ಲಿ ಕಲಿಯುತ್ತಿದ್ದ ನನ್ನನ್ನು ಕಂಡರೆ ಅವರಿಗೆ ಅಸಡ್ಡೆ. ''ಪರ್ಬುಗಳ ಶಾಲೆಯಲ್ಲಿ ಎಂತ ಉಂಟು ನಿನಗೆ? ಅಲ್ಲಿ ಎಲ್ಲಿಯೂ ನಮ್ಮವರ ಶಾಲೆ ಇಲ್ಲವಾ? ಎಂತ ಆಗಿದೆ ನಿನ್ನ ಅಪ್ಪನಿಗೆ? ಇರುವ ಒಬ್ಬ ಮಗನನ್ನೂ ಸರಿ ಬೆಳೆಸ್ಲಿಕ್ಕೆ ಆಗುದಿಲ್ವಾ?'' – ಎಂದು ಹೇಳಿ ಮೂಗು ಮುರಿಯುತ್ತಿದ್ದರು. ವಿಶ್ವ ಹಿಂದೂ ಸಮಾವೇಶಕ್ಕೆ ಹೋಗಿ ಬಂದರಂತೂ ಅಲ್ಲಿ ಮಾಡಿದ ಭಾಷಣವನ್ನೆಲ್ಲಾ ತಮ್ಮ ಹೋಟೆಲಿಗೆ ಬರುವ ಗಿರಾಕಿಗಳ ಮುಂದೆ ಕುಯ್ದು ಅವರನ್ನೆಲ್ಲಾ ಉದ್ಧಾರ ಮಾಡುವವರೆಗೂ ನಿದ್ದೆ ಬರುತ್ತಿರಲಿಲ್ಲ ಅವರಿಗೆ.

ನಮ್ಮ ಅತ್ತೆಯಂತೂ ಸ್ವಭಾವದಲ್ಲಿ ಮಾವನಿಗೆ ತದ್ವಿರುದ್ಧ. ಮಿತಭಾಷಿಣಿ. ಅಗಾಧ ತಾಳ್ಮೆ ಹೊಂದಿದ್ದ ಅವಳು ನಾನು ಮತ್ತು ಜಾನಕಿ ಮಾಡಿದ ಕಪಿಚೇಷ್ಟೆಗಳನ್ನೆಲ್ಲಾ ತನ್ನ ನಗುಮೊಗದಿಂದ ಕ್ಷಮಿಸಿಬಿಡುತ್ತಿದ್ದಳೇ ಹೊರತು ಒಮ್ಮೆಯೂ ಶಿಕ್ಷಿಸಿದವಳಲ್ಲ.

ಇಂತಹ ನಮ್ಮ ಅತ್ತೆ ಮಾವಂದಿರ ಏಕಮಾತ್ರ ಪುತ್ರಿಯೇ ನನ್ನ ಜಾನು. ನನಗಿಂತ ನಾಲ್ಕೈದು ವರ್ಷ ಚಿಕ್ಕವಳಾದ ಅವಳನ್ನು ಕಂಡರೆ ನನಗೆ ವಿಶೇಷವಾದ ಒಲವು. ನಾನು ಪ್ರತೀ ವರ್ಷವೂ ತಪ್ಪದೆ ರಜೆಯಲ್ಲಿ ಅಜ್ಜನ ಮನೆಗೆ ಹೋಗಲು ಅವಳೇ ಕಾರಣ. ಅವಳ ಉದ್ದವಾದ ಜಡೆಯನ್ನು ಎಳೆದು ಓಡಿಹೋದರೆ ಅವಳು ನನ್ನನ್ನು ಅಟ್ಟಿಸಿಕೊಂಡು ಬಂದು ಹೊಡೆಯುತ್ತಿದ್ದುದರಲ್ಲಿ ಅದೇನೋ ಒಂದು ರೀತಿಯ ಸುಖ ಇತ್ತು. ಅವಳು ಹೊಡೆಯಲೆಂದೇ ನಾನು ನಿಧಾನವಾಗಿ ಓಡಿ ಬೇಕೆಂದೇ ಅವಳ ಕೈಗೆ ಸಿಕ್ಕಿಬೀಳುತ್ತಿದ್ದೆ. ನಂತರ ಅವಳೂ ಕೈತಟ್ಟಿ ನಲಿದು ಸಂಭ್ರಮಿಸುವುದನ್ನು ಕಂಡು ನಾನು ಸಂತಸಪಡುತ್ತಿದ್ದೆ.

ಚಿಕ್ಕಂದಿನಲ್ಲಿ ಅವಳನ್ನು ಸೈಕಲ್ಲಿನಲ್ಲಿ ಹಿಂಬದಿಯಲ್ಲಿ ಕೂರಿಸಿಕೊಂಡು ಮಾನ್ಯದ ಆಟ (ಮಾನ್ಯ ಎಂಬ ಸ್ಥಳದಲ್ಲಿ ಪ್ರತೀ ವರ್ಷ ಜರುಗುವ ಯಕ್ಷಗಾನ ಬಯಲಾಟ), ಪೆರಡಾಲ ಆಯನ (ಪೆರಡಾಲ ದೇವಸ್ಥಾನ ಜಾತ್ರೆ), ಕುಂಬ್ಳೆ ಬೆಡಿ (ಕುಂಬ್ಳೆಯ ದೇವಸ್ಥಾನದಲ್ಲಿ ನಡೆಯುವ ಜಾತ್ರೆ), ನೀರ್ಚಾಲು ಶಾಲೆಯ ನಾಟಕ (ನೀರ್ಚಾಲಿನ ಶಾಲೆಯೊಂದರ ವಾರ್ಷಿಕೋತ್ಸವ) ಎಂದೆಲ್ಲಾ ಸುತ್ತಾಡುತ್ತಿದ್ದೆ. ಪ್ರತೀ ದಿನ ಸಂಜೆ ಗುಡ್ಡೆಗೆ ಹೋಗಿ ಹೆದುಮರದ ಕೊಂಬೆಯಲ್ಲಿ ಕುಳಿತು ಉಯ್ಯಾಲೆ ಆಡುವುದು, ಕುಂಟಾಂಗಿಲ ಮರದ ಹಣ್ಣನ್ನು ತಿನ್ನುವುದು, ತೋಟದ ಕೆರೆಯಲ್ಲಿ ಈಜು ಹೊಡೆಯುತ್ತಾ ಆಟವಾಡುವುದು ನಮ್ಮ ನೆಚ್ಚಿನ ಹವ್ಯಾಸಗಳಾಗಿದ್ದವು.

ರಾತ್ರಿ ಅಂಗಳದ ಅಡಿಕೆ ರಾಶಿಯ ಮೇಲೆ ಕುಳಿತುಕೊಂಡು ಆಕಾಶವನ್ನು ನೋಡುತ್ತಾ ನಾನು, ''ಜಾನು, ನಿಂಗೆ ಗೊತ್ತುಂಟಾ, ಈ ಭೂಮಿಯ ಮೇಲೆ ಎಷ್ಟು ಜನ ಇದ್ದಾರೋ ಅಷ್ಟು ನಕ್ಷತ್ರ ಉಂಟಂತೆ ಆಕಾಶದಲ್ಲಿ. ಭೂಮಿಯಲ್ಲಿ ಪ್ರತಿಯೊಂದು ಮಗು ಹುಟ್ಟುವಾಗ ಆಕಾಶದಲ್ಲಿ ಒಂದು ನಕ್ಷತ್ರ ಹುಟ್ಟುತ್ತದಂತೆ. ಹಾಗೇ ಪ್ರತಿಯೊಬ್ಬ ಮನುಷ್ಯ ಸಾಯುವಾಗ ಒಂದು ನಕ್ಷತ್ರ ಸಾಯ್ತದಂತೆ. ಅಕಾ... ಅಲ್ಲಿ ನೋಡು ಚಂದ್ರನ ಹತ್ರ ಒಂದು ದೊಡ್ಡ ನಕ್ಷತ್ರ ಉಂಟಲ್ಲಾ, ಅದು ನಂದು. ಅದ್ರ ಹತ್ರ ಫಳಫಳ ಹೊಳೀತದಲ್ಲ ಒಂದು ಚಿಕ್ಕ ನಕ್ಷತ್ರ, ಅದು ನಿಂದು'' ಎಂದು ನಾನು ಹೇಳುತ್ತಿದ್ದರೆ, ಅವಳು ಅದನ್ನೇ ಬೆರಗುಗಣ್ಣುಗಳಿಂದ ನೋಡುತ್ತಾ ''ಹೌದಾ ರಾಘು ಭಾವಾ, ನಂಗೆ ಗೊತ್ತೇ ಇರ್‍ಲಿಲ್ಲ! ಹಾಗಾದ್ರೆ ಅಪ್ಪ ಅಮ್ಮ ಯಾರು? ಶ್ವೇತ, ರಾಣಿ, ವೀಣಾ ಎಲ್ಲ ಎಲ್ಲಿದ್ದಾರೆ?'' ಎಂದು ಒಬ್ಬೊಬ್ಬರದೇ ಹೆಸರು ಹೇಳುತ್ತಾ ಹೋಗುತ್ತಿದ್ದಳು. ನಕ್ಷತ್ರಗಳಿಗೆ ನಾಮಕರಣ ಮಾಡುವ ನಮ್ಮ ಕಾರ್ಯ, ಮಾವ ಬಂದು, ''ಅಲ್ಲಿ ಎಂತ ಮಾಡುದು ನೀವು, ಕತ್ತಲೆಯಲ್ಲಿ? ಒಳಗೆ ಬರ್ತೀರೋ ಇಲ್ವೋ?'' ಎಂದು ಬಯ್ಯುವವರೆಗೂ ಮುಂದುವರಿಯುತ್ತಿತ್ತು. ನಮ್ಮನ್ನು ನೋಡಿ ಚಂದ್ರ ನಗುತ್ತಿದ್ದಾನೆ ಎಂದು ನನಗೆ ಭಾಸವಾಗುತ್ತಿತ್ತು.

ಮರದ ಗೊಂಬೆಯೊಂದಿಗೆ ಅಪ್ಪ-ಅಮ್ಮನ ಆಟ ಆಡುತ್ತಿದ್ದರೆ, ಅತ್ತೆ, ''ರಾಘು, ನಮ್ಮ ಜಾನುವನ್ನು ನಿಂಗೆ ಕೊಟ್ಟೇ ಮದ್ವೆ ಮಾಡ್ತೇನೆ. ಆಗ್ಬಹುದಾ, ಮದ್ವೆ ಆಗ್ತೀಯಾ ಅವಳನ್ನು?'' ಎಂದು ತಮಾಷೆ ಮಾಡಿದರೆ ನಾನು ನಾಚಿ ನೀರಾಗಿಬಿಡುತ್ತಿದ್ದೆ. ಆಗ ಜಾನು ಮರದ ಗೊಂಬೆಯನ್ನು ಎಸೆದು ನನ್ನನ್ನು ಗಟ್ಟಿಯಾಗಿ ಹಿಡಿದುಕೊಂಡು, ''ನಾನು ರಾಘು ಭಾವನನ್ನೇ ಮದ್ವೆ ಆಗ್ತೇನೆ!'' ಎಂದು ಕುಣಿಯಲು ಶುರು ಮಾಡುತ್ತಿದ್ದಳು. ಆಗ ನಾನು ಅವಳನ್ನು ದೂಡಿ, ''ಹೋಗೆ... ಹೋಗೆ... ನಿನ್ನಂತಹ ಶೂರ್ಪನಖಿಯನ್ನು ನಾನು ಮದ್ವೆ ಆಗುದಿಲ್ಲ, ನಂಗೆ ಅಪ್ಸರೆ ಹಾಗಿರುವ ಹೆಂಡ್ತಿ ಬೇಕು'' ಎಂದು ಹೇಳಿ ಅವಳನ್ನು ರೇಗಿಸುತ್ತಿದ್ದೆ. ಆಗ ಅವಳು ಕೋಪದಿಂದ, ''ನಿಂಗೆ ಮಂಗನ ಹಾಗಿರುವ ಹೆಂಡ್ತಿ ಸಿಗ್ತಾಳೆ ನೋಡು. ನಂಗೆ ಸಿನೆಮಾದಲ್ಲಿ ಇರ್‍ತಾನಲ್ಲಾ ಹೀರೋ, ಹಾಗಿರುವ ಗಂಡ ಬೇಕು'' ಎಂದು ಮುಖ ಊದಿಸಿಕೊಳ್ಳುತ್ತಿದ್ದಳು. ನಂತರ ಏನಾದರೂ ಹೇಳಿ ಅವಳನ್ನು ರಮಿಸಿ, ನಗಿಸುವುದರಲ್ಲಿ ನನಗೆ ಅವರ್ಣನೀಯ ಆನಂದ ಸಿಗುತ್ತಿತ್ತು.

ನಾನು ಪಿ.ಯು.ಸಿ. ಮುಗಿಸಿ ದೂರದ ಮುಂಬೈಯಲ್ಲಿ ಪ್ರತಿಷ್ಠಿತ ಐ.ಐ.ಟಿ.ಯಲ್ಲಿ ಪ್ರವೇಶ ಪಡೆದಿದ್ದಾಗ ನನ್ನ ಜಾನು ಎಂಟನೇ ತರಗತಿ ಮುಗಿಸಿ ಒಂಭತ್ತನೆಯ ತರಗತಿಗೆ ಕಾಲಿಡುವವಳಿದ್ದಳು. ವಯೋಸಹಜ ಬದಲಾವಣೆಗಳ ಕುರುಹು ಅವಳಲ್ಲಿ ಎದ್ದು ಕಾಣುತ್ತಿತ್ತು. ಬಾಲ್ಯದ ತುಂಟತನ ಮರೆಯಾಗಿ ಗಂಭೀರತೆ ಮನೆಮಾಡಿತ್ತು. ಇಮ್ಮಡಿಸಿದ ಸೌಂದರ್ಯದೊಂದಿಗೆ ಅತ್ತೆಯನ್ನೇ ಹೋಲುತ್ತಿದ್ದಳು. ಎಂದಿನಂತೆ ಅವಳ ಜಡೆ ಎಳೆದು, ''ಎಂತದೇ ಕೂಸೇ,

## ಮಕ್ಕಳಿಗೆ ಸುದಿನ ?

**ದುಡಿಮೆಗೆ ಬಿಡುವು ಸಿಕ್ಕಿದಾಗ –**
**ಅಮ್ಮಂದಿರ ದಿನ,**
**ದಿನ ನಿತ್ಯದ ಕುಡಿತವ ಬಿಟ್ಟಾಗ**
**ಅಪ್ಪಂದಿರ ದಿನ;**
**ಅಪ್ಪ – ಅಮ್ಮ ಕುಳಿತು ಪರಸ್ಪರ**
**ಮಾತಾಡಿದಾಗ –**
**ಕುಟುಂಬದ ದಿನ;**
**ಅದೇ ಮಕ್ಕಳಿಗೆ ಸುದಿನ !**

ಎಲ್ಲೆನ್
ತೊಂಡೋಟಿ, ತುಮಕೂರು



ತುಂಬಾ ಬದಲಾಗಿಬಿಟ್ಟಿದ್ದೀ!! ಎಂತ ಕಥೆ'' ಎಂದು ಕೇಳಿದಾಗ ಅವಳು ಎಂದಿನಂತೆ ನನ್ನನ್ನು ಹೊಡೆಯದೆ, ಮನೆಯೊಳಗೆ ಓಡಿಹೋಗಿ, ಬಾಗಿಲ ಹಿಂದೆ ಅಡಗಿದ್ದಳು. ಆಗ ಅತ್ತೆ, ''ಅಯ್ಯೋ ಮಾಣಿ, ಮುಟ್ಟಿದ್ಯಾ ಅವಳ್ನಾ!! ಅದು ಹಿರಗೆ. ನೀನು ಬೇಗ ಹೋಗಿ ಸ್ನಾನ ಮಾಡಿಕೊಂಡು ಬಾ'' ಎಂದು ಹೇಳಿದಾಗ ಅವಳು ಸಂಕೋಚದ ಮುದ್ದೆಯಾಗಿದ್ದಳು. ಕೆಂಪಾದ ಮುಖದೊಂದಿಗೆ ಕೋಣೆಯೊಳಗೆ ಹೋಗಿ ಕುಳಿತವಳು ಸಂಜೆಯವರೆಗೂ ಹೊರಬರಲೇ ಇಲ್ಲ. ''ಕಾಗೆ ಎಲ್ಲಿ ಮುಟ್ಟಿದ್ದು ನಿಂಗೆ? ಹೇಗೆ ಮುಟ್ಟಿದ್ದು? ಮುಟ್ಟುವವರೆಗೆ ನೀನು ಎಂತ ಮಾಡ್ತಿದ್ದೇ? ಓಡಿ ಬರ್‌ಬಹುದಿತ್ತಲ್ವಾ? ಕಾಗೆಯನ್ನು ಓಡಿಸ್ಬಹುದಿತ್ತಲ್ವ ?'' – ಎಂದೆಲ್ಲ ಸಾವಿರ ಪ್ರಶ್ನೆ ಕೇಳಿ ಅಮ್ಮನನ್ನು ಸತಾಯಿಸುತ್ತಿದ್ದ ಹುಡುಗಿ ಇವಳೇನಾ ಎಂದು ಬೆರಗಾದೆ.

ನಾನು ಐ.ಐ.ಟಿ.ಯ ವಿದ್ಯಾರ್ಥಿಯಾಗಿ ಮುಂಬೈ ಮಹಾನಗರಿ ಸೇರಿಕೊಂಡ ಮೇಲೆ ನನ್ನ ಜಗತ್ತೇ ಬದಲಾಯಿತು. ವರ್ಷಕ್ಕೆ ಎರಡು ಮೂರು ದಿನಗಳ ಮಟ್ಟಿಗೆ ಮಾತ್ರ ಅಜ್ಜನ ಮನೆಗೆ ಹೋಗಿಬರುತ್ತಿದ್ದೆ. ಈ ನಡುವೆ ನನ್ನ ಮತ್ತು ಜಾನುವಿನ ಸಂಬಂಧ ಕೂಡಾ ಪ್ರೌಢತೆಯನ್ನು ಪಡೆದುಕೊಂಡಿತ್ತು. ಜಾನು ತುಂಬಾ ಬದಲಾಗಿದ್ದಳು. ಪಿ.ಯು.ಸಿ. ದಾಟುವಷ್ಟರಲ್ಲೇ ದೊಡ್ಡ ವಿಚಾರವಾದಿಯಂತೆ, ಬುದ್ಧಿಜೀವಿಯಂತೆ ಮಾತನಾಡುತ್ತಿದ್ದಳು. ತುಂಬಾ ಓದುವ ಹವ್ಯಾಸವನ್ನು ಬೆಳೆಸಿಕೊಂಡಿದ್ದಳು. ಹಿಂದುತ್ವ, ಕೋಮುವಾದ ಮುಂತಾದ ವಿಚಾರಗಳಲ್ಲಿ ಅಪ್ಪನಿಗೆ ವಿರುದ್ಧವಾಗಿ, ಸರಿಸಮಾನಳಾಗಿ ಮಾತಾಡುವಷ್ಟು ಸಾಮರ್ಥ್ಯ ಪಡೆದಿದ್ದು, ನಾನು ಮೂಗಿನ ಮೇಲೆ ಬೆರಳಿಡುವಂತೆ ಮಾಡಿದ್ದಳು. ಹಠದಲ್ಲಂತೂ, ತಂದೆಯನ್ನೇ ಮೀರಿಸುತ್ತಿದ್ದಳು. ''ಅವರದ್ದೇ ಮಾತು ಆಗ್ಬೇಕು ಇಬ್ರಿಗೂ. ಎಂತ ಹಠವೋ, ನಾ ಬೇರೆ ಕಾಣೆ. ನಂಗೆ ಸಾಕಾಗಿಹೋಯ್ತು. ದಿನಕ್ಕೊಂದು ಜಗಳ ಮಾಡದಿದ್ರೆ ಇಬ್ರಿಗೂ ನಿದ್ದೆ ಬರುದಿಲ್ಲ'' ಎಂದು ಅತ್ತೆ ಪೆಚ್ಚುಮೋರೆ ಹಾಕಿಕೊಂಡು ಹೇಳುತ್ತಿದ್ದರು. ಜಾನುವಿನ ಬಳಿ ಈ ವಿಷಯ ಮಾತನಾಡಿದರೆ, ''ನಿಂಗೆ ಗೊತ್ತಿಲ್ಲ ಸುಮ್ನೆ ಇರು ರಾಘು ಭಾವ, ನಿಂಗೇ ಗೊತ್ತುಂಟು ಅವರ ಮನೋಭಾವ ಹೇಗೆ ಅಂತ. ಪೂರ್ವಗ್ರಹಪೀಡಿತರ ಹಾಗೆ ಮಾತಾಡ್ತಾರೆ. ಎಲ್ಲೆಲ್ಲಿಯೋ ಹೋಗುದು, ಯಾರ್‍ಯಾರೋ ಮಂಡೆ ಸರಿ ಇಲ್ಲದವರ ಭಾಷಣ ಕೇಳುದು, ಅವರು ಹೊಡಿ-ಬಡಿ-ಕಡಿ ಅಂತ ಹೇಳಿದ್ರೆ ಇವರು ಹೂಂಗುಟ್ಟುದು, ಅದನ್ನೇ ಹೋಟ್ಲಲ್ಲಿ ಕೂತು ಬೇರೆಯವ್ರಿಗೆ ಉಪದೇಶ ಮಾಡುದು.ಬೇರೆ ಕೆಲ್ಸ ಇಲ್ಲ. ಐ ಕಾಂಟ್ ಟಾಲರೇಟ್ ಸಚ್ ಆಟಿಟ್ಯೂಡ್'' ಎಂದು ಆವೇಶಭರಿತಳಾಗಿ ಮಾತನಾಡಿಬಿಡುತ್ತಿದ್ದಳು. ಚಿಕ್ಕಂದಿನಲ್ಲಿ ಬುರ್ಖಾ ಹಾಕಿದ ಮುಸ್ಲಿಂ ಹೆಂಗಸರನ್ನು ಕಂಡು ಹೆದರಿ, ಅಮ್ಮನ ಸೆರಗಿನ ಹಿಂದೆ ಅಡಗುತ್ತಿದ್ದ ಜಾನುವನ್ನು ಇವಳಲ್ಲಿ ಹುಡುಕಲು ಪ್ರಯತ್ನಿಸಿ ಸೋತುಹೋದೆ.

ಅವಳು ಪಿ.ಯು.ಸಿ. ಮುಗಿಸುವಷ್ಟರಲ್ಲಿ, ''ನಾನು ಡಿಗ್ರಿಗೆ ಮಂಗ್ಳೂರಿಗೆ ಹೋಗಿ ಸೇರ್‍ಕೋತೇನೆ'' ಎಂದು ಹೇಳಿದಳು. ''ನೀನು ಮೊದ್ಲೇ ಹಾಳಾಗಿ ಹೋಗಿದ್ದೀಯ. ಇನ್ನು ಅಲ್ಲಿ ಹೋಗಿ ಪರ್ಬುಗಳ ಶಾಲೆಗೆ ಹೋಗಿ ಎಂತ ಉದ್ಧಾರ ಆಗ್ತೀ ಅಂತ ನಂಗೆ ಗೊತ್ತುಂಟು. ಸುಮ್ನೇ ಮನೇಲಿ ಕೂತ್ಕೋ. ವೆಂಕಪ್ಪ ಭಟ್ರ ಮಗನಿಗೆ ಹುಡುಗಿ ನೋಡ್ತಾ ಇದಾರಂತೆ. ನಿನ್ನ ಜಾತಕ ಕೊಟ್ಟಿದ್ದೇನೆ. ಎಂತಾ ಮನೆ ಹೇಳ್ತಿ!? ಇಪ್ಪತ್ತು ಖಂಡಿ ಅಡಿಕೆ ಆಗ್ತದಂತೆ. ಎಲ್ಲಾ ಕೂಡಿ ಬಂದು ಮದ್ವೆ ಆದ್ರೆ ನಿನ್ನ ಅದೃಷ್ಟ ಅಂತ ಹೇಳ್ಬೇಕು. ಚಿನ್ನದಂಥಾ ಹುಡ್ಗ. ವರ್ಷಕ್ಕೊಮ್ಮೆ ತಪ್ಪದೇ ಮಾಲೆ ಹಾಕಿ ಶಬರಿಮಲೆಗೆ ಹೋಗಿಬರ್‍ತಾನಂತೆ. ಎಂತಾ ದೈವಭಕ್ತಿ! ಈಗಿನ ಕಾಲದಲ್ಲೂ ಇಂತಾ ಹುಡ್ಗರು ಸಿಗ್ತಾರೆ ಅಂದ್ರೆ ನಂಬ್ಲಿಕ್ಕೆ ಆಗುದಿಲ್ಲ'' ಎಂದರು ಮಾವ. ಇಬ್ಬರೂ ತಮ್ಮ ಪಟ್ಟುಬಿಡದೆ ಕುಳಿತರು. ಕೊನೆಗೆ ಅವಳ ಹೈಸ್ಕೂಲಿನ ಮೇಷ್ಟ್ರು ಬಂದು ಸಂಧಾನ ಮಾಡಿದರು. ''ನೋಡಿ ಭಟ್ರೆ, ನಿಮ್ಮ ಮಗಳು ಪ್ರತಿಭಾವಂತೆ. ಬೆಳೆಯುವ ಚಿಗುರಿಗೆ ನೀರು ಹಾಕಿ ಬೆಳೆಸ್ಬೇಕೇ ವಿನಃ ಚಿವುಟಿ ಹಾಕ್ಬಾರ್ದು. ಅವ್ಳಿಗೆ ಯಾವ ಕಾಲೇಜು ಇಷ್ಟವೋ ಅಲ್ಲೇ ಕಲೀಲಿ ಬಿಡಿ. ಕೊಡಿಯಾಲಕ್ಕೆ ಹೋದ್ರೆ ಹುಡ್ಗಿ ಹುಶಾರಾಗ್ತಾಳೆ. ಪ್ರಪಂಚಜ್ಞಾನ ಬೆಳೀತದೆ'' ಎಂದರು. ಒಲ್ಲದ ಮನಸ್ಸಿನಿಂದ ಮಾವ ''ಹ್ಞೂಂ...'' ಎಂದರು.

ಅಷ್ಟರಲ್ಲಿ ನನ್ನ ಇಂಜಿನಿಯರಿಂಗ್ ಮುಗಿದು ಕ್ಯಾಂಪಸ್ ರಿಕ್ರೂಟ್‌ಮೆಂಟ್‌ನಲ್ಲಿ ಇನ್ಫೋಸಿಸ್‌ನಲ್ಲಿ ಕೆಲಸವೂ ಸಿಕ್ಕಿತ್ತು. ''ಕಂಗ್ರಾಟ್ಸ್ ಭಾವಾ'' ಎಂದು ಕೈಕುಲುಕಿದವಳ ಕೈಗೆ ಟೈಟನ್ ವಾಚೊಂದನ್ನು ಉಡುಗೊರೆಯಾಗಿ ಕಟ್ಟಿ ಪಬ್ಬಾಸ್ ಕ್ರೀಂ ಪಾರ್ಲರ್‌ಗೆ ಕರೆದುಕೊಂಡು ಹೋಗಿ ಗಡ್‌ಬಡ್ ಕೊಡಿಸಿದ್ದೆ.

ನಂತರ ನಾನು ನನ್ನ ಕೆಲಸಗಳಲ್ಲಿ ಮುಳುಗಿಹೋಗಿದ್ದೆ. ಅವಳು ಕೂಡಾ ಅವಳ ಕಾಲೇಜು ಕೆಲಸದಲ್ಲಿ ತೊಡಗಿಕೊಂಡಳು. ಅವಳ ಮೇಷ್ಟ್ರ ಅಭಿಪ್ರಾಯ ತಪ್ಪಾಗಿರಲಿಲ್ಲ. ಮಂಗಳೂರಿನ ಪ್ರತಿಷ್ಠಿತ ಕಾಲೇಜೊಂದರಲ್ಲಿ ಬಿ.ಎ. ಜರ್ನಲಿಸಂನ ವಿದ್ಯಾರ್ಥಿನಿಯಾಗಿ ಪ್ರವೇಶ ಪಡೆದ ಜಾನು, ಪದವಿಯ ಮೂರು ವರ್ಷಗಳಲ್ಲಿ ಪ್ರತಿಯೊಂದು ನಿಮಿಷವನ್ನೂ ಸಂಪೂರ್ಣ ಸದುಪಯೋಗ ಮಾಡಿಕೊಂಡಳು. ಬರವಣಿಗೆ, ಚರ್ಚಾಸ್ಪರ್ಧೆ, ಭಾಷಣ, ಕ್ರೀಡೆ ಹೀಗೆ ಒಂದೇ ಎರಡೇ, ಪ್ರತಿಯೊಂದು ಕ್ಷೇತ್ರದಲ್ಲೂ ತನ್ನ ಹೆಜ್ಜೆಗುರುತು ಮೂಡಿಸಿದಳು. ವಿವೇಕಾನಂದ, ಬಸವಣ್ಣ, ಬುದ್ಧ, ಗಾಂಧಿ, ಅಂಬೇಡ್ಕರ್, ಯೇಸು, ಅಲ್ಲಾ ಎಂದೆಲ್ಲಾ ಏನೇನೋ ಓದಿಕೊಂಡು ಪ್ರೌಢಿಮೆ ಗಳಿಸಿಕೊಂಡಳು. ಕಾಲೇಜಿನ ಪ್ರತಿಯೊಬ್ಬ ಅಧ್ಯಾಪಕರ ಕಣ್ಮಣಿಯಾಗಿ ಒಳ್ಳೆಯ ಹೆಸರು ಪಡೆದಳು. ಯೂನಿವರ್ಸಿಟಿಗೆ ಪ್ರಥಮ ರ್‍ಯಾಂಕ್‌ನೊಂದಿಗೆ ಪದವಿ ಮುಗಿಸಿದಳು. ಅವಳ ಸಾಧನೆಯನ್ನು ಗಮನಿಸಿ ಕೊನೆಯ ವರ್ಷದಲ್ಲಿ ಕಾಲೇಜು 'ಬೆಸ್ಟ್ ಔಟ್‌ಗೋಯಿಂಗ್ ಸ್ಟೂಡೆಂಟ್', 'ಆಲ್‌ರೌಂಡರ್ ಆಫ್ ದ ಇಯರ್' ಎಂಬ ಬಿರುದುಗಳನ್ನು ನೀಡಿ ಗೌರವಿಸಿತು. ಮಾವನವರಂತೂ ಖುಷಿಯಿಂದ ಬೀಗಿಹೋದರು. ''ನನ್ನ ಮಗಳೂ ಕೊಡಿಯಾಲದಲ್ಲಿ ದೊಡ್ಡ ಕಾಲೇಜಿನಲ್ಲಿ ದೊಡ್ಡ ಹೆಸರು ಮಾಡಿದ್ದಾಳೆ. ಗಟ್ಟಿಗಿತ್ತಿ ಅವಳು. ಮಗಳಲ್ಲ ಅವಳು, ಮಗ'' ಎಂದು ಊರೆಲ್ಲಾ ಹೇಳಿಕೊಂಡು ತಿರುಗಿದರು. ನಂತರ ಅವಳು, ''ನಾನು ಕೋಣಾಜೆಯಲ್ಲಿ ಎಂ.ಸಿ.ಜೆ. ಮಾಡುತ್ತೇನೆ'' ಎಂದು ಹೇಳಿದಾಗ ಮರುಮಾತಾಡದೆ ಕಳುಹಿಸಿಕೊಟ್ಟರು ಮಾವ.

ಆತ್ಮವಿಶ್ವಾಸದಿಂದ, ಉತ್ಸುಕತೆಯಿಂದ ಮಂಗಳೂರು ವಿಶ್ವವಿದ್ಯಾಲಯ ಪ್ರವೇಶಿಸಿದ ಜಾನುವಿಗೆ, ಅಲ್ಲಿಯ ವಾತಾವರಣ ಬೇಗನೇ ಹಿಡಿಸಿಬಿಟ್ಟಿತು. ಸಮಾನ ಮನಸ್ಕರು, ಸಮಾನ ಆಸಕ್ತರ ಒಡನಾಟ, ಅನುಭವಿ ಪ್ರಾಧ್ಯಾಪಕರ ಮಾರ್ಗದರ್ಶನದೊಂದಿಗೆ ಚೆನ್ನಾಗಿ ಅಭ್ಯಾಸ ಮಾಡಲಾರಂಭಿಸಿದಳು. ತರಗತಿಯಲ್ಲಿ ಎಲ್ಲಾ ಚಟುವಟಿಕೆಗಳಲ್ಲೂ ಆಸಕ್ತಿಯಿಂದ ಭಾಗವಹಿಸುತ್ತಿದ್ದಳು. ಕೋಮುದ್ವೇಷದಂತಹ ವಿಚಾರಗಳಲ್ಲಿ ಚರ್ಚೆ ಆಗಾಗ ನಡೆಯುತ್ತಿದ್ದವು. ಇಂತಹ ಸಂದರ್ಭದಲ್ಲಿ ರಿಹಾನ್ ಎಂಬ ಅವಳ ಸಹಪಾಠಿಯೊಬ್ಬ ಅವಳ ವಿಚಾರಧಾರೆಗೆ ಸಹಮತ ಹೊಂದುವ ಚರ್ಚೆ ನಡೆಸುತ್ತಿದ್ದ. ಮುಸ್ಲಿಂ ಸಮುದಾಯದಲ್ಲಿರುವ ಮೂಢನಂಬಿಕೆ, ಅರ್ಥಹೀನ ಆಚರಣೆಗಳ ಬಗ್ಗೆ ಅವನು ಮಾತನಾಡುತ್ತಿದ್ದರೆ, ಹಿಂದೂ ಸಮುದಾಯದ ಕುರಿತು ಇವಳು ಮಾತನಾಡುತ್ತಿದ್ದಳು. ಇಬ್ಬರೂ ಸಾಮಾಜಿಕ ಸುಧಾರಣೆ, ಧರ್ಮಗಳ ನವೀಕರಣ, ಜನರ ದೃಷ್ಟಿಕೋನದಲ್ಲಿ ಉಂಟಾಗಬೇಕಾದ ಬದಲಾವಣೆ ಮುಂತಾದ ವಿಷಯಗಳ ಬಗ್ಗೆ ತಮ್ಮ ವಾದ ಮಂಡಿಸುತ್ತಿದ್ದರು. ಸಹಜವಾಗಿಯೇ ಇಬ್ಬರ ನಡುವೆ ಸ್ನೇಹ ಮೂಡಿತು. ಗಂಟೆಗಟ್ಟಲೆ ಕುಳಿತು ಗಹನವಾದ ಚರ್ಚೆ ನಡೆಸುವಷ್ಟು ಸಲುಗೆ ಬೆಳೆಯಿತು. ತಾವು ಓದಿದ ಪುಸ್ತಕಗಳ ಬಗ್ಗೆ ಚರ್ಚಿಸುವುದು, ಪುಸ್ತಕಗಳ ಕೊಡು-ಕೊಳ್ಳುವಿಕೆ ನಡೆದೇ ಇತ್ತು. ಎರಡನೇ ವರ್ಷದ ಕೊನೆಯಲ್ಲಿ ಇಬ್ಬರು ವಿದ್ಯಾರ್ಥಿಗಳು ಜೊತೆಯಾಗಿ ಮಾಡುವಂತಹ ಪ್ರಾಜೆಕ್ಟ್ ವರ್ಕ್ ಒಂದರಲ್ಲಿ ಜಾನು ಮತ್ತು ರಿಹಾನ್ ಕೆಲಸ ಮಾಡಿದರು.

ಈ ನಡುವೆ ನಾನು ಅವಳನ್ನು ಭೇಟಿ ಮಾಡಿದ್ದಾಗ, 'ರಿಹಾನ್... ರಿಹಾನ್' ಎಂದು ಸದಾಕಾಲ ಅವನ ವಿಷಯವನ್ನೇ ಹೇಳುತ್ತಿರುವುದನ್ನು ಗಮನಿಸಿದ್ದೆ. ''ಎಂತದೇ ಇದು? ಅವನಿಗೆ ಫುಲ್ ಫಿದಾ ಆದ ಹಾಗೆ ಕಾಣ್ತಾ ಉಂಟು!!'' ಎಂದು ರೇಗಿಸಿದ್ದಕ್ಕೆ ರಕ್ತವೆಲ್ಲಾ

ಅವಳ ಮುಖಕ್ಕೆ ನುಗ್ಗಿಬಂದು, ''ಎಂತದು ಭಾವಾ, ನೀನು ಹೀಗೆ ಹೇಳುದಾ ! ನಾವಿಬ್ರು ಒಳ್ಳೇ ಫ್ರೆಂಡ್ಸ್ ಅಷ್ಟೆ'' ಎಂದು ನಗುತ್ತಾ ಹೇಳಿದ್ದಳು. ''ಹ್ಹಾ... ಹ್ಹಾ... ಹ್ಹಾ... ಕೂಸೇ, ಮೊದಲು ಎಲ್ರೂ ಫ್ರೆಂಡ್ಸ್ ಆಗಿಯೇ ಇರ್ತಾರೆ, ಮತ್ತೆ ಇನ್ನೇನೋ ಆಗ್ತಾರೆ'' ಎಂದು ಹೇಳಿದ್ದಕ್ಕೆ ನಕ್ಕು ಸುಮ್ಮನಾಗಿದ್ದಳು.

ಜಾನುವಿನ ಎಂ.ಸಿ.ಜೆ.ಯ ಫಲಿತಾಂಶ ಪ್ರಕಟವಾಗಿತ್ತು. ಜಾನು ೬ ಚಿನ್ನದ ಪದಕಗಳೊಂದಿಗೆ ವಿಶ್ವವಿದ್ಯಾಲಯಕ್ಕೆ ಪ್ರಥಮ ರ್‍ಯಾಂಕ್ ಗಳಿಸಿದ್ದಳು. ೪ ಚಿನ್ನದ ಪದಕ ಪಡೆದ ರಿಹಾನ್ ದ್ವಿತೀಯ ರ್‍ಯಾಂಕ್ ಗಳಿಸಿದ್ದ. ಅವರಿಬ್ಬರೂ ಜೊತೆಯಲ್ಲಿ ಮಾಡಿದ ಪ್ರಾಜೆಕ್ಟ್ ವರ್ಕ್‌ಗೆ 'ಬೆಸ್ಟ್ ಇನ್ವೆಸ್ಟಿಗೇಟಿವ್ ರಿಪೋರ್ಟ್' ಎಂದು ಚಿನ್ನದ ಪದಕ ಕೂಡಾ ಬಂದಿತ್ತು. ಮಾವನಂತೂ ಹಿರಿ ಹಿರಿ ಹಿಗ್ಗಿದರು. ವಿಶ್ವವಿದ್ಯಾಲಯದ ಘಟಿಕೋತ್ಸವದಲ್ಲಿ ಮುಂದಿನ ಸಾಲಿನಲ್ಲಿ ಕುಳಿತು ಮಗಳು ರಾಜ್ಯಪಾಲರಿಂದ ಚಿನ್ನದ ಪದಕ ಪಡೆಯುವುದನ್ನು ನೋಡಿ ಅತ್ತೆ, ಮಾವ ಗಳಗಳನೇ ಅತ್ತೇ ಬಿಟ್ಟರು. ನನ್ನ ಕಣ್ಣುಗಳು ತೇವಗೊಂಡವು.

ಘಟಿಕೋತ್ಸವದ ಮರುದಿನ ಸಂಜೆ, ''ಭಾವಾ, ಫ್ರೀ ಇದೀಯಾ, ಸೋಮೇಶ್ವರ ಬೀಚ್‌ಗೆ ಹೋಗೋಣ್ವಾ ?'' ಎಂದು ಕೇಳಿದಳು. ನಾನು ಸಂತೋಷದಿಂದಲೇ ''ಆಗಲಿ'' ಎಂದೆ. ನಾವು ಸಮುದ್ರತೀರ ತಲುಪಿದಾಗ ರಿಹಾನ್ ಅಲ್ಲಿ ನಮಗಾಗಿ ಕಾಯುತ್ತಿರುವುದನ್ನು ನೋಡಿ ಆಶ್ಚರ್ಯವಾಯಿತು. ಅಷ್ಟರಲ್ಲಿ ಜಾನು, ''ಭಾವಾ, ನೀನು ಆವತ್ತೊಂದು ಮಾತು ಹೇಳಿದ್ದೆ, ರಿಹಾನ್‌ನ ಬಗ್ಗೆ. ಈಗ ಹೇಳ್ತಿದ್ದೇನೆ ಕೇಳು, ನಾನು ರಿಹಾನ್‌ನನ್ನು ಪ್ರೀತಿಸ್ತಾ ಇದ್ದೇನೆ. ಇಬ್ರೂ ಮದ್ವೆ ಮಾಡ್ಕೊಳ್ತೇವೆ. ನಿಂಗೆ ಈ ವಿಷಯ ಹೇಳ್ಬೇಕು ಅಂತ ಇಲ್ಲಿಗೆ ಕರ್‍ಕೊಂಡು ಬಂದೆ. ನಿನ್ನ ಸಹಕಾರ ಬೇಕು'' ಎಂದಳು. ನನಗೆ ಈ ಅನಿರೀಕ್ಷಿತ ಆಘಾತ ತಡೆದುಕೊಳ್ಳಲಾಗಲಿಲ್ಲ. ಚಿಕ್ಕಂದಿನಿಂದಲೇ ಅವಳು 'ನನ್ನವಳು' ಎಂಬ ಭಾವ ಬಲಿಯುವಂತೆ ಮಾಡಿದ ಘಟನೆಗಳ ಸ್ಲೈಡ್ ಶೋ ಸ್ಮೃತಿಪಟಲದಲ್ಲಿ ಮೂಡಲಾರಂಭಿಸಿತು. ನಾನು ಹೇಗೆ ಪ್ರತಿಕ್ರಿಯೆ ನೀಡಬೇಕೆಂಬ ಗೊಂದಲದಲ್ಲಿ ಮುಳುಗಿರುವಾಗಲೇ ರಿಹಾನ್ ಮಾತು ಮುಂದುವರಿಸಿದ, ''ಸಾರ್, ಎರಡೂ ಸಮುದಾಯದವರಿಂದ ಎದುರಾಗಬಹುದಾದ ತೊಡಕುಗಳ ಅರಿವು ಇದೆ ನಮ್ಗೆ. ಅದನ್ನು ಎದುರಿಸ್ತೇವೆ ಅಂತ ವಿಶ್ವಾಸ ಉಂಟು. ನೀವು ನಮ್ಮ ಜೊತೆ ಇದ್ದು ನೈತಿಕ ಬೆಂಬಲ ನೀಡಿದರೆ ಸಂತೋಷ. ವಿದ್ಯಾವಂತರಾದ ನೀವು ಕೀಳುಮಟ್ಟದ ಯೋಚನೆ ಮಾಡ್ಲಿಕ್ಕಿಲ್ಲ ಅಂತ ನಿಮ್ಮ ಮೇಲೆ ಭರವಸೆ ಉಂಟು'' ಎಂದು ಹೇಳಿದ.

ನಾನು ಜಾನುವಿನತ್ತ ತಿರುಗಿ, ''ಜಾನು, ನಿಂಗೆ ಗೊತ್ತುಂಟಲ್ಲ, ಮಾವ ಹೇಗೆ ಅಂತ. ಅವ್ರು ಜೀವ ಹೋದ್ರೂ ಈ ಮದ್ವೆಗೆ ಒಪ್ಪುದಿಲ್ಲ'' ಎಂದಷ್ಟೇ ಹೇಳಿದೆ. ಅದಕ್ಕೆ ಅವಳು, ''ಗೊತ್ತುಂಟು ಭಾವಾ. ಅವ್ರ ಒಪ್ಪಿಗೆ ಪಡೆದೇ ಮದ್ವೆ ಆಗ್ತೇವೆ ನೋಡೋಣ ಎಂತ ಆಗ್ತದಂತ. ಅದಕ್ಕೇ ನಿನ್ನ ಸಹಾಯ ಕೇಳಿದ್ದು'' ಎಂದಳು. ರಿಹಾನ್ ಮಾತು ಮುಂದುವರಿಸಿ, ''ಸರ್, ಅವಳಿಗೆ ಹಿಂದೂಧರ್ಮವನ್ನೇ ಪಾಲಿಸೋ ಸ್ವಾತಂತ್ರ್ಯ ಇದೆ. ಅವಳು ಸಸ್ಯಾಹಾರಿಯಾಗೇ ಉಳಿಯಲಿಕ್ಕೆ ಕೂಡಾ ನನ್ನ ಅಡ್ಡಿ ಇಲ್ಲ. ಆದ್ದರಿಂದ 'ಧರ್ಮ' ನಮ್ಮ ನಡುವೆ ಖಂಡಿತಾ ಅಡ್ಡಿ ಬರುದಿಲ್ಲ. ದಂಪತಿಗಳ ನಡುವೆ ಮುಖ್ಯವಾಗಿ ಇರ್ಬೇಕಾದದ್ದು ಪ್ರೀತಿ, ಹೊಂದಾಣಿಕೆ, ಗೌರವ ಮತ್ತು ಪರಸ್ಪರ ಅರ್ಥ ಮಾಡಿಕೊಂಡು ಇರ್ಬೇಕಾದದ್ದು. ನಮ್ಮಿಬ್ಬರ ಅಭಿಪ್ರಾಯಗಳು, ದೃಷ್ಟಿಕೋನ ಒಂದೇ ಆಗಿದೆ. ಸಮಾನ ಆಸಕ್ತಿ ಇದೆ. ಇದಕ್ಕಿಂತ ಇನ್ನೇನು ಬೇಕು ?'' ಎಂದು ಕೇಳಿದ.

ನನ್ನ ಮಾತೇ ಕಟ್ಟಿಹೋದಂತಾಗಿತ್ತು. ನನ್ನ ಪರಿಸ್ಥಿತಿಯನ್ನು ಅರಿತುಕೊಂಡ ಅವರಿಬ್ಬರೂ ವಿಷಯ ಬದಲಾವಣೆ ಮಾಡಿದರು. ರಿಹಾನ್ ಮೂಲತಃ ಉಪ್ಪಳದವನೆಂದೂ, ತಂದೆ ತಾಯಿಯರು ಮಂಗಳೂರಿನಲ್ಲಿ ನೆಲೆಸಿ ವರ್ಷಗಳೇ ಕಳೆದಿವೆಯೆಂದೂ ಹೇಳಿದ. ತಂದೆ ಪ್ರತಿಷ್ಠಿತ ವಕೀಲರಾಗಿದ್ದು, ವಿಚಾರವಾದಿಗಳೂ, ಚಿಂತಕರೂ ಆಗಿದ್ದರು. ಅಂತರ್ಧರ್ಮೀಯ ವಿವಾಹಕ್ಕೆ ಅವರ ಬೆಂಬಲ ಎಂದೆಂದಿಗೂ ಇದ್ದು, ತನ್ನ ಈ ನಿರ್ಧಾರದಿಂದ ಅವರು ಸಂತಸಗೊಂಡಿದ್ದಾರೆಂದು ರಿಹಾನ್ ತಿಳಿಸಿದ. ಅವನಿಗೆ ಒಬ್ಬಳು ಅಕ್ಕ ಇರುವಳೆಂದೂ, ಅವಳು ವೈದ್ಯೆ ಎಂದೂ ತಿಳಿಸಿದ. ಹಾಗೆಯೇ ಸ್ವಲ್ಪ ಹೊತ್ತು ಕಡಲ ಕಿನಾರೆಯ ಬಂಡೆಯ ಮೇಲೆ ಕುಳಿತಿದ್ದು ಮನೆಗೆ ಮರಳಿದೆವು.

ಮನದ ಭಾರವನ್ನೆಲ್ಲಾ ನನಗೆ ವರ್ಗಾಯಿಸಿದ ಜಾನು ನಿರುಮ್ಮಳವಾಗಿದ್ದಳು. ನಾನು ಮಾತ್ರ ವಿಚಿತ್ರ ಸಂಕಟ, ತೊಳಲಾಟದಲ್ಲಿ ಮುಳುಗಿದ್ದೆ. ನನ್ನ ಕನಸುಗಳ ಕನ್ನಡಿಗೆ ಕಲ್ಲೆಸೆದು, ಚೂರು ಚೂರು ಮಾಡಿದ್ದಳು. ಪ್ರತಿಯೊಂದು ಚೂರಿನಲ್ಲೂ ಬೇರೆ ಬೇರೆಯಾದ ಪ್ರತಿಬಿಂಬ ಕಾಣಿಸತೊಡಗಿ ಗಲಿಬಿಲಿಗೊಂಡಿದ್ದೆ. ರಾತ್ರಿಯಿಡೀ ಮನದೊಳಗೆ ಯೋಚನೆಗಳ ಹೋರಾಟ ನಡೆದಿತ್ತು. ಬೆಳಗ್ಗಿನ ಹೊತ್ತಿಗೆ ಒಂದು ದೃಢನಿರ್ಧಾರಕ್ಕೆ ಬಂದವನಂತೆ, ರಿಹಾನ್‌ನ ಪರವಾಗಿ ಮಾವನ ಜೊತೆ ಮಾತನಾಡಲು ಜಾನುವಿಗೆ ಒಪ್ಪಿಗೆ ಸೂಚಿಸಿದ್ದೆ. ಹೊಳೆಯುವ ಕಣ್ಣುಗಳೊಡನೆ ''ಥ್ಯಾಂಕ್ಯೂ ಸೋ ಮಚ್ ಭಾವಾ, ನಂಗೆ ಗೊತ್ತಿತ್ತು ನೀನು ಒಪ್ತೀಯಾ ಅಂತ'' ಎಂದು ಕೇಳಿದವಳಿಗೆ ನನ್ನ ಮನದಾಳದ ನೋವು ಅರ್ಥವಾಗಲೇ ಇಲ್ಲ.

ವಿಷಯ ತಿಳಿದ ಮಾವ ಭೂಮಿ-ಆಕಾಶ ಒಂದೇ ಮಾಡಿಬಿಡುವಂತೆ ಕೂಗಾಡಿದರು. ''ಆ ಮಾಪ್ಳೆ ಪಿಂಡನನ್ನು ಕಟ್ಟಿಕೊಳ್ತಾಳಂತೆ ! ಎಂತ ಮಂಡೆ ಸಮ ಉಂಟಾ ಇವಳಿಗೆ ? ಥೂ ! ನಾಯಿರಂಡೆ ! ನಿನ್ನನ್ನು ಕಲಿಸಿ ನಾನು ಕೆಟ್ಟೆ''

# ಅಪರಾಧಿ



ಬೀದಿಯಲಿ ಬಿದ್ದ
ರಕ್ತದ ಕಲೆಗಳನ್ನು
ಒರೆಸಲು ಬಂದೆ
ನನ್ನ ಕೈಗಳಿಗೆ ಬೇಡಿ ಬಿದ್ದವು.

ಜೈಲಿನ ಒಳಗಡೆಗೆ
ಹಲವಾರು ಖೈದಿಗಳು
ಬಿಟ್ಟುಹೋದ ಅಂಗೈ ಗೆರೆಯ
ಗುರುತುಗಳನ್ನು
ಮುಟ್ಟಿಮುಟ್ಟಿ ನೋಡಿದೆ
ಇಡೀ ಬಂಧಿಖಾನೆಯೇ
ನನ್ನಂತವರ ಅಂಗೈ ಗುರುತುಗಳಿಂದ
ತುಂಬಿ ಹೋಗಿದೆ.

ನನಗೆ ಯಾರಾದರೂ
ಜಾಮೀನು ನೀಡುತ್ತಾರೆಂದು
ಕಂಬಿಗಳ ಹಿಂದೆ ನಿಂತು ಕಾದೆ
ಯಾರೂ ಬರಲಿಲ್ಲ.
ಜಾಮೀನು ನೀಡುವವರು
ಬಿಜಿಯಾಗಿದ್ದಾರೆ
ನಾನು ವ್ಯಾಪ್ತಿ ಪ್ರದೇಶದ ಹೊರಗಿದ್ದೇನೆ.

ಜೂನ್ ೨೦ರಂದು ಜೈಲಿನಿಂದ
ಬಿಡುಗಡೆಯಾದಾಗ
ರಸ್ತೆಯಲಿ ಬಂದು ನಿಂತೆ
ನನ್ನ ಸಂಗಾತಿ ಬೀದಿಗಳು ಮಾತ್ರ
ನನ್ನ ಮಾತಾಡಿಸಿದವು

ನೋಡು,
ನನ್ನ ಜೊತೆ ಯಾರೂ ಮಾತಾಡ-
ಬಾರದೆಂದು ಅಘೋಷಿತ ಕರ್ಫ್ಯೂ
ಹೇರಲಾಗಿದೆ.
ಜನ ಬಂದೂಕಿನ ಅಂಗಡಿಗಳ ಮುಂದೆ
ಕ್ಯೂ ನಿಂತಿದ್ದಾರೆ.

ನನ್ನ ಮಾತು ನನ್ನ ಆಲೋಚನೆ
ನನ್ನ ಅಕ್ಷರ ಎಲ್ಲವನ್ನೂ
ಹದ್ದಿನ ಕಣ್ಣಿಟ್ಟು ಕಾಯಲಾಗುತ್ತಿದೆ.
ರಸ್ತೆಯಲಿ ಅಡ್ಡಾಡುವ ಜನಕ್ಕೂ
ನನ್ನ ಬಗ್ಗೆ ಅನುಮಾನ ಬಂದಿದೆ.

ನನ್ನ ಬಳಿ ಗಡಿಯಾರ ಇಲ್ಲ
ಗಂಟೆ ಹೊಡೆಯುವ ಬಗ್ಗೆ
ನಾನು ಕಾಯುವದಿಲ್ಲ
ಸೂರ್ಯ ತನ್ನ ಪಥ ಬದಲಿಸುವದಿಲ್ಲ
ನಾನು ಒಬ್ಬನೇ ಹೊರಟಿದ್ದೇನೆ.

**ಬಸವರಾಜ ಹೂಗಾರ**
ಸಹಾಯಕ ನಿರ್ದೇಶಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಜಿಲ್ಲಾ ರಂಗಮಂದಿರ, ಕಾಜುಬಾಗ ಕಾರವಾರ (ಉತ್ತರ ಕನ್ನಡ ಜಿಲ್ಲೆ)

ಎಂದೆಲ್ಲಾ ಒದರಿದರು. ವಕಾಲತ್ತು ವಹಿಸಲೆಂದು ಹೋದ ನಾನು ಮಾವನ ಕೋಪವನ್ನು ಶಮನ ಮಾಡುವ, ಸಮಾಧಾನ ಪಡಿಸುವ ಕೆಲಸ ಮಾಡಬೇಕಾಯಿತು. ಜಾನು ಅಸಹಾಯಕಳಂತೆ, ದಿಕ್ಕು ತೋಚದವಳಂತೆ ನಿಂತಿದ್ದಳು. ನಾನು ತಡೆಯದೇ ಹೋಗಿದ್ದರೆ ಮಾವ ಅವಳನ್ನು ಕೊಂದೇ ಬಿಡುತ್ತಿದ್ದರೋ ಏನೋ. ಅತ್ತೆ ಕೋಣೆಯೊಳಗೆ ಹೋಗಿ ಅಳುತ್ತಾ ಕೂತುಬಿಟ್ಟಳು.

ಇಂತಹ ಸಂದರ್ಭದಲ್ಲಿ ಜಾನು ಅಲ್ಲೇ ಇದ್ದರೆ ಪರಿಸ್ಥಿತಿಯು ಕಠಿಣವಾಗಬಹುದೆಂದು ಅವಳನ್ನು ಮಂಗಳೂರಿಗೆ ಕಳುಹಿಸಿಕೊಟ್ಟು, ನಾನು ಮಾವನ ಮನೆಯಲ್ಲೇ ಉಳಿದುಕೊಳ್ಳಲು ನಿರ್ಧರಿಸಿದೆ. ಇಲ್ಲವಾದಲ್ಲಿ ಅತ್ತೆ-ಮಾವ ಏನಾದರೂ ಅನಾಹುತ ಮಾಡಿಕೊಳ್ಳಬಹುದೆಂಬ ಭಯವೂ ಇತ್ತು. ''ಜಾನೂ, ದುಡುಕಿ ನನ್ನನ್ನು ಕೇಳದೇ ಎಂತದೂ ಮಾಡ್ಲಿಕ್ಕೆ ಹೋಗ್ಬೇಡ. ನಾನು ನೋಡ್ತೇನೆ. ಒಳ್ಳೆಯ ಸಮಯ ನೋಡಿ ಮಾತಾಡಿ ಒಪ್ಪಿಸ್ತೇನೆ ಆಯ್ತಾ'' ಎಂದೆ. ಅವಳು ಗೋಣಲ್ಲಾಡಿಸಿದಳು.

ಇದಾಗಿ ಎರಡು ಮೂರು ದಿನ ಕಳೆದಿರಬಹುದು. ಈ ವಿಷಯದ ಕುರಿತು ಪ್ರಸ್ತಾಪಿಸುವ ಪರಿಸ್ಥಿತಿಯಿನ್ನೂ ಬಂದೊದಗಿರಲಿಲ್ಲ. ಮರುದಿನ ವಿಷ್ಣುಮೂರ್ತಿನಗರದಲ್ಲಿ ಒತ್ತೆಕೋಲ (ಕಾಸರಗೋಡು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಮಾತ್ರ ಕಂಡುಬರುವ ವೈಶಿಷ್ಟ್ಯಪೂರ್ಣವಾದ ದೈವಾರಾಧನೆ). ನರಸಿಂಹಾವತಾರದಲ್ಲಿ ಹಿರಣ್ಯಕಶಿಪುವಿನ ಸಂಹಾರದ ಬಳಿಕವೂ ವಿಷ್ಣುವಿನ ಕೋಪ ಶಮನವಾಗಿರುವುದಿಲ್ಲ; ಇದಕ್ಕಾಗಿ, ಕೆಂಡದ ಮೇಲೆ ಹೊರಳಾಡಿದ ನಂತರವೇ ಕೋಪ ಶಮನವಾಗಿ, ಶಾಂತವಾಗುತ್ತಾನೆ ಎಂಬ ನಂಬಿಕೆ ಈ ಭಾಗದ ಜನರದ್ದು. ಈ ಹಿನ್ನೆಲೆಯಲ್ಲಿ ಆಚರಿಸುವ ದೈವಾರಾಧನೆಯೇ ಒತ್ತೆಕೋಲ. ಹಿಂದಿನ ದಿನ ಹದಿನೈದು-ಇಪ್ಪತ್ತು ಅಡಿಗಳ ಕಟ್ಟಿಗೆಗಳ ರಾಶಿಗೆ ಬೆಂಕಿ ಕೊಟ್ಟು ಕೆಂಡ ತಯಾರಿಸಲಾಗುತ್ತದೆ. ಈ ಕೆಂಡಕ್ಕೆ ಮರುದಿನ ಮುಂಜಾವಿನಲ್ಲಿ ದೈವದ ಪಾತ್ರಿಯು, ಹಾರುತ್ತಾ ವಾಲಗದ ಹಿಮ್ಮೇಳದೊಂದಿಗೆ ಲಯಬದ್ಧವಾಗಿ ಕುಣಿಯುತ್ತಾನೆ. ದೈವದ ಪಾತ್ರಿಯು ಎಳೆಯ ತೆಂಗಿನ ಮರದ ಗರಿಗಳಿಂದ ಮಾಡಿದ ದಿರಿಸನ್ನು ಹಾಕಿರುತ್ತಾನೆ. ಹಾಗೂ ಮುಖವಾಡವನ್ನು ಒಳಗೊಂಡ ಆಕರ್ಷಕವಾದ ವೇಷ-ಭೂಷಣವನ್ನು ಹಾಕಿಕೊಂಡಿರುತ್ತಾನೆ (ಇವನ್ನು ಭೂತಕೋಲಕ್ಕೆ ಸಮೀಕರಿಸಬಹುದಾದರೂ, ಕೆಂಡಸೇವೆಯು ಒತ್ತೆಕೋಲವನ್ನು ಭೂತಕೋಲದಿಂದ ಪ್ರತ್ಯೇಕಿಸುತ್ತದೆ). ನಾನು ಮಾವನವರನ್ನು ಕರೆದುಕೊಂಡು ಒತ್ತೆಕೋಲಕ್ಕೆ ಹೋಗಬೇಕೆಂದು ನಿರ್ಧರಿಸಿದೆ. ಏಕತಾನತೆಯಿಂದ ರೋಸಿಹೋಗಿದ್ದ ಮಾವನೂ ಕೂಡಲೇ ಒಪ್ಪಿದರು. ನಾವು ಅಲ್ಲಿಗೆ ತಲುಪುವಷ್ಟರಲ್ಲಿ ಹತ್ತಿಪ್ಪತ್ತು ಅಡಿಗಳ ಎತ್ತರಕ್ಕೆ ಕಟ್ಟಿಗೆಗಳನ್ನು ಅಚ್ಚುಕಟ್ಟಾಗಿ ರಾಶಿಮಾಡಿ ಇಡಲಾಗಿತ್ತು. ಬೆಳ್‌ಚಪ್ಪಾಡಗಳು (ದೈವದ ಪಾತ್ರಿಯೊಂದಿಗೆ ಕೆಂಡದ ಮೇಲೆ ನಡೆಯುವ ಜನ) ಕೈಯಲ್ಲಿ ಪಂಜು ಹಿಡಿದು ನಿಂತಿದ್ದರು. ದೈವಸ್ಥಾನದ ಬಳಿ ತೊಡಂಗಲು (ಬೆಂಕಿ ಕೊಡುವ ಪೂರ್ವತಯಾರಿ) ನಡೆಯುತ್ತಿತ್ತು. ಬೆಲುಂಬುವವರು (ದೈವದ ಪ್ರಧಾನ ಪೂಜಾರಿಗಳು, ವಿಧಿವಿಧಾನಗಳೆಲ್ಲವನ್ನೂ ನಡೆಸಿಕೊಡುವವರು) ವಿಧಿವಿಧಾನಗಳನ್ನು ನಡೆಸುತ್ತಿದ್ದರು. ವಾಲಗದ ಸದ್ದು ಜೋರಾಗಿಯೇ ಕೇಳಿಬರುತ್ತಿತ್ತು. ''ಭಕ್ತಾದಿಗಳಲ್ಲಿ ವಿನಂತಿ...'' ಎಂದು ಮುಂತಾಗಿ ಧ್ವನಿವರ್ಧಕಗಳಲ್ಲಿ ಪ್ರಕಟಣೆ ಕೇಳಿಬರುತ್ತಿತ್ತು. ಅಷ್ಟರಲ್ಲಿ ಮಾವನವರ ಮೊಬೈಲ್‌ಗೆ ಜಾನುವಿನ ಮೊಬೈಲ್‌ನಿಂದ ಕರೆಯೊಂದು ಬಂತು. ಅಲ್ಲಿ ಗದ್ದಲವಿದ್ದುದರಿಂದ ಮಾವನವರು ಮೊಬೈಲ್‌ನೊಂದಿಗೆ ದೂರ ಹೋದರು. ನಾನು ಆತಂಕಮಿಶ್ರಿತ ಕುತೂಹಲದೊಂದಿಗೆ ಅವರು ಹೋದ ದಾರಿಯನ್ನೇ ನೋಡುತ್ತಾ ನಿಂತೆ.

ಅಷ್ಟರಲ್ಲಿ ಕಟ್ಟಿಗೆಗಳ ರಾಶಿಗೆ ಅಗ್ನಿಸ್ಪರ್ಶ ಮಾಡಲಾಯಿತು. ಬೆಂಕಿಯ ಕೆನ್ನಾಲಗೆ ಕಟ್ಟಿಗೆಗಳ ರಾಶಿಗೆಲ್ಲಾ ವ್ಯಾಪಿಸಿ ಧಗಧಗನೆ ಹೊತ್ತಿ ಉರಿಯಲಾರಂಭಿಸಿತು. ಬೆಳ್‌ಚಪ್ಪಾಡಗಳು ಕೈಯಲ್ಲಿ ಕತ್ತಿ ಹಿಡಿದು ನರ್ತಿಸಲಾರಂಭಿಸಿದರು. ವಾಲಗದ ಸದ್ದು ತಾರಕಕ್ಕೇರಿತು. ಬೆಂಕಿಯ ಜ್ವಾಲೆಯ ಶಾಖದಿಂದ ವಾತಾವರಣವೆಲ್ಲಾ ಬಿಸಿಯಾಯಿತು. ಮಾವ ಸೋತ ಮುಖ ಹೊತ್ತು ಹಿಂತಿರುಗಿದರು. ನಾನು ಏನೆಂದು ಕೇಳುವ ಮೊದಲೇ ಅವರು, ''ಜಾನುವಿಗೆ ಮದ್ವೆ ಆಯ್ತಂತೆ ಕಣೋ! ರಿಜಿಸ್ಟ್ರಿ ಆಫೀಸಿನಲ್ಲಿ ಇವತ್ತು ಸಂಜೆ ಮದ್ವೆ ಆದ್ರಂತೆ! ಮಾನಗೆಟ್ಟವಳು!'' ಎಂದರು. ಅವರ ಸ್ವರ ಅವರಿಗೇ ಕೇಳಿಸದಷ್ಟು ಕ್ಷೀಣವಾಗಿತ್ತು. ಬೆಂಕಿಯ ಜ್ವಾಲೆ ಅವರ ಮುಖದಲ್ಲಿ ಪ್ರತಿಫಲನಗೊಳ್ಳುತ್ತಿರುವುದು ಕವಿದ ಹೊಗೆಯ ನಡುವೆಯೂ ಸ್ಪಷ್ಟವಾಗಿ ಗೋಚರವಾಗುತ್ತಿತ್ತು.

ದುಡುಕಿನ ನಿರ್ಧಾರ ತೆಗೆದುಕೊಂಡ ಜಾನುವಿನ ಬುದ್ಧಿಗೇಡಿತನಕ್ಕೆ ಅವಳನ್ನು ಮನದಲ್ಲೇ ಶಪಿಸಿದೆ. ಪರಿಸ್ಥಿತಿ ಕೈಮೀರಿಹೋಗಿತ್ತು. ಮುಂದೆ ಬಂದೊದಗಬಹುದಾದ ಅನಾಹುತ ನೆನೆದು, ಕೈಕಾಲೆಲ್ಲಾ ಶಕ್ತಿಹೀನವಾಯಿತು. ಸಾವರಿಸಿಕೊಂಡು ಮಾವನ ಜೊತೆಗೆ ಮನೆ ತಲುಪಿ, ಅತ್ತೆಗೆ ವಿಷಯ ತಿಳಿಸಿದ್ದೇ ಅತ್ತೆ ಕುಸಿದು ಕುಳಿತು ಅಳಲಾರಂಭಿಸಿದರು.

ಮರುದಿನ ಉದಯವಾಣಿ ದಿನಪತ್ರಿಕೆಯಲ್ಲಿ ''ವೈವಾಹಿಕ ಜೀವನಕ್ಕೆ ಕಾಲಿರಿಸಿರುವ ನೂತನ ದಂಪತಿಗಳಾದ ರಿಹಾನ್ ಮತ್ತು ಜಾನಕಿಯವರ ಜೀವನವು ಸುಖಮಯವಾಗಿರಲೆಂದು ಹಾರೈಸುವ...'' ಎಂದು ಉದ್ದನೆಯ ಹೆಸರುಗಳ ಪಟ್ಟಿಯೊಂದಿಗೆ ಮದುಮಕ್ಕಳ ನಗುಮೊಗದ ಭಾವಚಿತ್ರ ಅಚ್ಚಾಗಿತ್ತು.

ಮಧ್ಯಾಹ್ನದ ವೇಳೆಗಾಗಲೇ ಈ ವಿಷಯ ಕಾಸರಗೋಡು ಜಿಲ್ಲೆಯ ಜನರ ಬಾಯಿಯಲ್ಲಿ ಎಲೆಯಡಿಕೆಯಾಗಿತ್ತು. ''ಬೇರೆಯವರ ವಿಷಯಕ್ಕೆ ಪಬ್ಲಿಸಿಟಿ ಕೊಟ್ಟು ತಮಾಷೆ ಮಾಡ್ತಿದ್ದ ಕಿಟ್ಟಪ್ಪ ಭಟ್ರ ಮಗಳು ಬ್ಯಾರಿಯ ಜೊತೆ ಓಡಿ ಹೋದ್ಲಂತೆ'' ಎಂದು ಊರಿಗೆ ಊರೇ ಮಾತನಾಡಿಕೊಳ್ಳಲಾರಂಭಿಸಿತು. ''ಅವರಿಬ್ರು ಮಂಗ್ಳೂರು ಪೇಟೆ ಇಡೀ ಸುತ್ತಾಡ್ತಾ ಇದ್ರು. ನಾನೇ ನೋಡಿದ್ದೇನೆ. ಭಟ್ರಿಗೆ ಬೇರೆಯವ್ರ ಬಗ್ಗೆ ಸಾವಿರ ಮಾತಾಡ್ಲಿಕ್ಕೆ ಆಗ್ತದೆ. ಮಗಳನ್ನು ಹದ್ದುಬಸ್ತಿನಲ್ಲಿ ಇಡ್ಲಿಕ್ಕೆ ಆಗುವುದಿಲ್ಲ'' ಎಂದರು ಕೆಲವರು. ''ಅವಳು ಇವತ್ತು ಬೆಳಗ್ಗೆ ಬುರ್ಖಾ ಹಾಕಿಕೊಂಡು ಹಂಪನಕಟ್ಟೆಯಲ್ಲಿ ಹೋಗ್ತಾ ಇದ್ಲು. ನಾನೇ ನೋಡಿದ್ದೇನೆ'' ಎಂದ ಮತ್ತೊಬ್ಬ. ಹೀಗೆ ಅಂತೆಕಂತೆಗಳ ಪಟ್ಟಿಯೇ ಬೆಳೆಯಿತು. ''ಅದಕ್ಕೇ ಹೇಳುದು, ಹೆಣ್ಣುಮಕ್ಕಳನ್ನು ಹೆಚ್ಚು ಓದಿಸ್ಬಾರ್ದು ಅಂತ!'' ಎಂದು ಕೆಲವರು ಒಗ್ಗರಣೆ ಹಾಕಿದರು.

ಇತ್ತಕಡೆ ಮದುವೆಯಾದರೂ ತಮ್ಮ ಧರ್ಮ ಸ್ವೀಕರಿಸದೆ ಹಿಂದುವಾಗಿಯೇ ಮುಂದುವರಿಯುವ ಜಾನುವಿನ ನಿರ್ಧಾರ ಮತ್ತು ಅದಕ್ಕೆ ಬೆಂಬಲವಾಗಿರುವ ರಿಹಾನ್ ಹಾಗೂ ಅವನ ಕುಟುಂಬದವರ ನಿಲುವು ಮುಸ್ಲಿಂ ಸಮುದಾಯದ ಕೆಂಗಣ್ಣಿಗೆ ಗುರಿಯಾಯಿತು. ''ಮೊದ್ಲು ಅವಳು ಇಸ್ಲಾಂ ಧರ್ಮ ಸ್ವೀಕರಿಸ್ಬೇಕು. ನಂತ್ರ ನಮ್ಮವ್ರ ಹಾಗೆ ನಮ್ಮ ಹುಡ್ಗನನ್ನು ನಿಖಾ ಆಗ್ಬೇಕು. ಆಗ ಮಾತ್ರ ಈ ಸಂಬಂಧವನ್ನು ನಾವು ಒಪ್ತೇವೆ'' ಎಂದೆಲ್ಲಾ ಚರ್ಚಿಸಲಾರಂಭಿಸಿದರು. ಎರಡು ಕಡೆಯಿಂದಲೂ ವಿಷಯ ಚರ್ಚೆಯ ಕಾವು ಪಡೆದುಕೊಳ್ಳಲಾರಂಭಿಸಿತು.

ಆ ದಿನ ಸಂಜೆ ರಾಮಕೃಷ್ಣ ಭಟ್ರು ಕಾಸರಗೋಡು ಪೇಟೆಯಲ್ಲಿ ಮೊಬೈಲ್‌ನಲ್ಲಿ ಮಾತನಾಡುತ್ತಾ, ರಸ್ತೆ ದಾಟುತ್ತಾ ಇದ್ದಂತೆ, ವೇಗವಾಗಿ ಬರುತ್ತಿದ್ದ ಇಸ್ಮಾಯಿಲ್ ಸಾಬರ ಕಾರು ಢಿಕ್ಕಿ ಹೊಡೆದು, ಭಟ್ರು ಸ್ಥಳದಲ್ಲೇ ನಿಧನಹೊಂದಿದರು. ಮರುಕ್ಷಣವೇ ಸುದ್ದಿ ಕಾಡ್ಗಿಚ್ಚಿನಂತೆ ಹಬ್ಬಿ ಬದಿಯಡ್ಕದ ಮಸೀದಿಯ ಮೇಲೆ ಒಂದೆರಡು ಕಲ್ಲು ಬಿತ್ತು. ತಕ್ಷಣವೇ ಕುಮಾರಮಂಗಲ ದೇವಸ್ಥಾನದ ಪ್ರವೇಶದ್ವಾರಕ್ಕೆ ಹಸಿರು ಬಣ್ಣ ಬಳಿಯಲಾಯಿತು. ದೇವಸ್ಥಾನವೊಂದರ ಕೆರೆಗೆ ದನದ ಮಾಂಸ ಎಸೆಯಲಾಯಿತು. ಇದರ ಬಿಸಿ ಮಂಗಳೂರಿಗೂ ತಟ್ಟದೇ ಇರಲಿಲ್ಲ. ಹಂಪನಕಟ್ಟೆಯ ಬಳಿ ಎರಡು ಬಸ್ಸುಗಳಿಗೆ ಕಲ್ಲು ತೂರಾಟ ನಡೆದು ಟಯರ್‌ಗಳಿಗೆ ಬೆಂಕಿ ಹಾಕಲಾಯಿತು. ಕೂಡಲೇ ಕಾಸರಗೋಡು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳೆರಡರಲ್ಲೂ ಕರ್ಫ್ಯೂ ಹೊರಡಿಸಲಾಯಿತು. ಮುಂಜಾಗ್ರತಾ ಕ್ರಮವಾಗಿ ರಿಹಾನ್ ಮತ್ತು ಜಾನುವನ್ನು ಪೊಲೀಸ್ ರಕ್ಷಣೆಯೊಂದಿಗೆ ಬೆಂಗಳೂರಿಗೆ ಕಳುಹಿಸಲಾಯಿತು.

ಮರುದಿನದ ವಾರ್ತಾ ಪತ್ರಿಕೆಗಳಲ್ಲಿ 'ಹೊತ್ತಿ ಉರಿಯುತ್ತಿರುವ ಕರಾವಳಿಯ ಜಿಲ್ಲೆಗಳು', 'ಕೋಮುಗಲಭೆಗೆ ಕಾರಣವಾದ ಪ್ರೇಮವಿವಾಹ' ಎಂಬ ದೊಡ್ಡ ತಲೆಬರಹದೊಂದಿಗೆ, ಮುಖಪುಟದಲ್ಲಿ ಸುದ್ದಿ ಪ್ರಕಟವಾಗಿತ್ತು. ಟಿ.ವಿ. ನ್ಯೂಸ್ ಚಾನಲ್ ಒಂದು ರಿಹಾನ್, ಜಾನು, ಹಿಂದೂಪರ ಸಂಘಟನೆಗಳ ಪ್ರತಿನಿಧಿಯೊಬ್ಬರು, ಮುಸ್ಲಿಂ ಮುಖಂಡರೊಬ್ಬರು ಮತ್ತು ವಿಚಾರವಾದಿ ಲೇಖಕರೋರ್ವರನ್ನು ಒಟ್ಟಿಗೆ ಕೂರಿಸಿ ಚರ್ಚಾ ಕಾರ್ಯಕ್ರಮವನ್ನೂ ಬಿತ್ತರ ಮಾಡಿಯೇಬಿಟ್ಟಿತು. ''ಇದು ಲವ್‌ಜಿಹಾದ್‌ಗೆ ಒಂದು ಜೀವಂತ ಉದಾಹರಣೆ, ಮತಾಂತರದ ಹುನ್ನಾರ'' ಎಂದು ಹಿಂದೂವಾದಿಯೊಬ್ಬ ಹೇಳುತ್ತಿದ್ದರೆ, ''ನೋಡಿ, ಇಲ್ಲಿ ಯಾರೂ ಮತಾಂತರಗೊಂಡಿಲ್ಲ, ನಮಗೆ ಧಾರ್ಮಿಕ ವಿಚಾರದಲ್ಲಿ ನಮ್ಮದೇ ನಿರ್ಧಾರ ತೆಗೆದುಕೊಳ್ಳುವ ಹಕ್ಕಿದೆ'' ಎಂದು ರಿಹಾನ್ ಮತ್ತು ಜಾನು ಸಮರ್ಥಿಸಿಕೊಳ್ಳುತ್ತಿದ್ದರು. ''ಮದುವೆ ಆದ ಮೇಲೆ ನೀನು ನಮ್ಮ ಧರ್ಮ ಸ್ವೀಕರಿಸಬೇಕು. ಹಿಂದುವಾಗಿಯೇ ಮುಂದುವರಿಯಲು ಸಾಧ್ಯವಿಲ್ಲ'' ಎಂದು ಮುಸ್ಲಿಂ ಮುಖಂಡರೊಬ್ಬರು ಜಾನುವಿಗೆ ಹೇಳುತ್ತಿದ್ದರು. ವಾದ-ವಿವಾದಗಳು ಮುಂದುವರಿದೇ ಇತ್ತು. ಮನಸ್ಸಿಗೆ ಹಿಂಸೆಯೆನಿಸಿ, ವಾರ್ತಾಪತ್ರಿಕೆಯನ್ನು ದೂರ ಎಸೆದು, ಟಿ.ವಿ. ಆಫ್ ಮಾಡಿದೆ. ''ಜಾನೂ, ನೀನು ಒಂದಲ್ಲಾ ಒಂದು ದಿನ ದೊಡ್ಡ ಮಟ್ಟದಲ್ಲಿ ಸುದ್ದಿ ಮಾಡ್ತಿ ಅಂತ ಗೊತ್ತಿತ್ತು! ಆದ್ರೆ ಹೀಗೆ ಅಂತ ಗೊತ್ತಿರ್ಲಿಲ್ಲ!!'' ಎಂದುಕೊಂಡೆ.

**ವಿನಯಾ ಭಟ್**
'ಸುಕೃತಿ', ಕಿಂಗಲ್ ಪಾರ್ಕ್ ಲೇಔಟ್, ಮೇರಿ ಹಿಲ್, ಕಾವೂರು
ಮಂಗಳೂರು - ೫೭೫ ೦೧೫

# ಮಲೇರಿಯಾ : ಯಾರೂ ಅಮುಖ್ಯರಲ್ಲ !

**ಡಾ|| ಎಚ್. ಎಸ್. ಅನುಪಮಾ**

ವಿಶ್ವ ಆರೋಗ್ಯ ಸಂಸ್ಥೆಯ ಅಂದಾಜಿನ ಪ್ರಕಾರ ೨೦೧೦ರಲ್ಲಿ ವಿಶ್ವಾದ್ಯಂತ ಮಲೇರಿಯಾ ೨೧.೬ ಕೋಟಿ ಜನರನ್ನು ಬಾಧಿಸಿದ್ದು ೬.೫೫ ಲಕ್ಷ ಜನ ಮರಣ ಹೊಂದಿದ್ದಾರೆ. ೮೫% ಸಾವು ಆಫ್ರಿಕಾದಲ್ಲೇ ಸಂಭವಿಸಿದೆ. ಅವರಲ್ಲಿ ಅರ್ಧಕ್ಕಿಂತ ಹೆಚ್ಚಿನವರು ೫ ವರ್ಷದೊಳಗಿನ ಮಕ್ಕಳು. ರಕ್ತಹೀನತೆ (ಅನೀಮಿಯಾ) ಇರುವ ಗರ್ಭಿಣಿ ಮಹಿಳೆಯರಲ್ಲಿ ಸಾವು ಸಂಭವಿಸುವ ಸಾಧ್ಯತೆ ಹೆಚ್ಚು. ಆರ್ಥಿಕ ಹಿಂದುಳಿದಿರುವಿಕೆ ಮತ್ತು ಬಡತನ ಮಲೇರಿಯಾಗೆ ಕಾರಣವೂ, ಪರಿಣಾಮವೂ ಹೌದು. ಕಡುಬಡತನದ ಪ್ರದೇಶಗಳಲ್ಲಿ ಮಲೇರಿಯಾ ಸಾವು ಜಾಸ್ತಿ. ಆಫ್ರಿಕಾದ ಕೆಲ ದೇಶಗಳಲ್ಲಿ ಸಾರ್ವಜನಿಕ ಆರೋಗ್ಯಕ್ಕೆ ಖರ್ಚಾಗುವ ೪೦% ಹಣ ಮಲೇರಿಯಾಗೇ ಹೋಗುತ್ತದೆ. ೩೦-೫೦% ಆಸ್ಪತ್ರೆ ದಾಖಲಾತಿ ಮಲೇರಿಯಾಗಾಗಿಯೇ ಇರುತ್ತದೆ. ಗರಿಷ್ಠ ಫಲವತ್ತತೆ ಇದ್ದಾಗ್ಯೂ ಆಫ್ರಿಕಾದ ಜನಸಂಖ್ಯೆ ಏಷಿಯಾದಷ್ಟು ಏರದೇ ಇರಲು ಮಲೇರಿಯಾ ಸಾವೂ ಕಾರಣವಾಗಿದೆ. ಭಾರತದ ಈಶಾನ್ಯ ಮತ್ತು ಮಧ್ಯಭಾಗದ ಗುಡ್ಡಗಾಡು ಪ್ರದೇಶಗಳ ಪರಿಸ್ಥಿತಿ ಇದಕ್ಕಿಂತ ಭಿನ್ನವಾಗಿಲ್ಲ.



**ಎರಡನೇ ಮಹಾಯುದ್ಧ ಕಾಲದ ಪೋಸ್ಟರ್**

*'ಎಚ್ಚರಿಕೆ,*

*ನೀವೀಗ ಮಲೇರಿಯಾ ಪ್ರದೇಶವನ್ನು ಪ್ರವೇಶಿಸುತ್ತಿದ್ದೀರಿ. ನಿಮ್ಮನ್ನೂ, ನಿಮ್ಮ ಸಹವರ್ತಿಗಳನ್ನೂ ಮಲೇರಿಯಾ ವಿರುದ್ಧ ರಕ್ಷಿಸಿಕೊಳ್ಳಿ. ನಿಮ್ಮ ಕಮ್ಯಾಂಡಿಂಗ್ ಆಫೀಸರ್ ಸೂಚಿಸಿದ ಎಲ್ಲ ಮುನ್ನೆಚ್ಚರಿಕೆ ಕ್ರಮಗಳನ್ನೂ ತೆಗೆದುಕೊಳ್ಳಿ.*
*ಮಲೇರಿಯಾ ಶತ್ರುಗಳಿಗಿಂತಲೂ ಹೆಚ್ಚು ಜನರನ್ನು ಕೊಂದುರುಳಿಸಬಲ್ಲದು.*
*ಈ ಗಂಡಾಂತರದ ವಿರುದ್ಧ ಹೋರಾಡಿ.'*

ಮನುಷ್ಯ ಹುಟ್ಟುವುದಕ್ಕಿಂತ ಮೊದಲೇ ಈ ಭೂಮಿಯ ಮೇಲೆ ಅವತರಿಸಿದ ಮಲೇರಿಯಾ ರೋಗಾಣು ಮಾನವ ಇತಿಹಾಸದುದ್ದಕ್ಕೂ ಸಾವುನೋವಿಗೆ ಕಾರಣವಾಗಿದೆ. ಮೂರೂವರೆ ಸಾವಿರ ವರ್ಷಗಳ ಕೆಳಗೆ ಈಜಿಪ್ಟಿನ ಪ್ರಖ್ಯಾತ ದೊರೆ, ೧೮ ವರ್ಷದ ಟುಟಾಂಖಮೆನ್ ಮಲೇರಿಯಾದಿಂದ ತೀರಿಕೊಂಡ. ಪಿರಮಿಡ್ ಕಟ್ಟುವ ಕೆಲಸಗಾರರಿಗೆ ಮಲೇರಿಯಾ ರಕ್ಷಣೆಗಾಗಿ ಹೆಚ್ಚೆಚ್ಚು ಬೆಳ್ಳುಳ್ಳಿ ತಿನ್ನಿಸಲಾಗುತ್ತಿತ್ತು. ರಾಣಿ ಕ್ಲಿಯೋಪಾತ್ರಾ ಸೊಳ್ಳೆಪರದೆಯಿಲ್ಲದೆ ಮಲಗುತ್ತಿರಲಿಲ್ಲ. ಎಷ್ಟೋ ನಗರ ನಾಗರಿಕತೆಗಳು ಮಲೇರಿಯಾದಿಂದಲೇ ಅವನತಿ ಹೊಂದಿದವು. ಘನಘೋರ ಯುದ್ಧ ಗೆದ್ದು ಬಂದ ಸೇನಾನಾಯಕರೂ ಮಲೇರಿಯಾಗೆ ಬಲಿಯಾದರು. ಸೈನ್ಯ ಕಾಯಿಲೆಗೆ ತುತ್ತಾಗಿ ಮುಂದುವರಿಯಲಾರದೆ ಸೋತ ಸಂದರ್ಭಗಳಿವೆ. ಎರಡನೇ ಮಹಾಯುದ್ಧದ ಸಮಯದಲ್ಲಿ ೬೦ ಸಾವಿರ ಅಮೆರಿಕನ್ ಸೈನಿಕರು ಮಲೇರಿಯಾಗೆ ಜೀವ ತೆತ್ತರು. ಅನಾದಿಯಿಂದ ಭಾರತದಲ್ಲೂ ಬೆಟ್ಟ ಹಾಗೂ ಅರಣ್ಯ ಪ್ರದೇಶದಲ್ಲಿ ನೆಲೆಸಿರುವ ಬುಡಕಟ್ಟುಗಳು ಹಾಗೂ ಮಲೆನಾಡಿನ, ಮಳೆ ಕಾಡಿನ ಜನ ಈ ಕಾಯಿಲೆಗೆ ತುತ್ತಾಗಿದ್ದಾರೆ. ಆ ಪ್ರದೇಶದ ಬುಡಕಟ್ಟುಗಳಷ್ಟೇ ಅಲ್ಲ, ಅಲ್ಲಿ ನೇಮಿಸಲ್ಪಟ್ಟ ಪಡೆಗಳು, ನೌಕರರು, ಮಾವೋವಾದಿಗಳು, ವರದಿಗಾರರು, ಪ್ರವಾಸಿಗಳನ್ನೂ ಮಲೇರಿಯಾ ಬಾಧಿಸಿದೆ. ಹೀಗೆ ವಿಶ್ವಾದ್ಯಂತ ಮನುಷ್ಯ ಕುಲ ನಿರಂತರವಾಗಿ ಮಲೇರಿಯಾಗೆ ಬಲಿಯಾಗುತ್ತಿದೆ.

ಹಸಿವು, ಅನಾರೋಗ್ಯ, ಅಭದ್ರತೆಯನ್ನೆದುರಿಸುತ್ತ ದುಸ್ತರ ಬದುಕು ಸಾಗಿಸುತ್ತಿರುವ ಆದಿವಾಸಿ ನೆಲೆಗಳಲ್ಲಿ ಅಪಾಯ ಲೆಕ್ಕಿಸದೆ ಭೇಟಿ ನೀಡಿದ ಎಷ್ಟೋ ಜನ ಮಲೇರಿಯಾಗೆ ಜೀವವೊಪ್ಪಿಸಿದ್ದಾರೆ. ಸಮಾಜಶಾಸ್ತ್ರಜ್ಞೆ, ಬುಡಕಟ್ಟುಗಳ ನಡುವೆ ದಶಕಗಳಿಂದ ವಾಸಿಸಿದ ಅನುರಾಧಾ ಗಾಂಧಿ ೨೦೦೯ರಲ್ಲಿ ಸೆರೆಬ್ರಲ್ ಮಲೇರಿಯಾದಿಂದ ತೀರಿಕೊಂಡರು. ತೆಹೆಲ್ಕಾ ವಾರಪತ್ರಿಕೆ ಮಾವೋವಾದಿಗಳ ಭದ್ರಕೋಟೆ ಎಂದು ನಂಬಲಾಗಿದ್ದ ಛತ್ತೀಸ್‌ಘರ್‌ನ ಅಬುಜ್ಮಾರ್ ಪ್ರದೇಶಕ್ಕೆ ಏಪ್ರಿಲ್ ತಿಂಗಳಲ್ಲಿ ತನ್ನ ವರದಿಗಾರರನ್ನು ಕಳಿಸಿತ್ತು. ವರದಿಗಾರ್ತಿ ತುಷಾ ಮಿತ್ತಲ್ ಜೊತೆ ೨೨ ವರ್ಷದ ಫೋಟೋಗ್ರಾಫರ್ ತರುಣ್ ಸೆಹ್ರಾವತ್ ಮಾವೋವಾದಿಗಳನ್ನೂ, ಅಲ್ಲಿನ ಬುಡಕಟ್ಟುಗಳನ್ನೂ ಕುರಿತ ಸಚಿತ್ರ ವರದಿಗೆ ತೆರಳಿದ್ದ. ವಾಪಸು ಬಂದಮೇಲೆ ಇಬ್ಬರೂ ಸೆರೆಬ್ರಲ್ ಮಲೇರಿಯಾಗೆ ತುತ್ತಾದರು. ಅವರಲ್ಲಿ ತರುಣ್ ಕಳೆದ ತಿಂಗಳು ಸಾವನ್ನಪ್ಪಿದ. ಭಾರತದ ಈಶಾನ್ಯ ಮತ್ತು ಮಧ್ಯಪೂರ್ವ ರಾಜ್ಯಗಳು ಅತಿ ಹೆಚ್ಚು ಮಲೇರಿಯಾ ಸಂಭವಿಸುವ ತಾಣಗಳು. ಛತ್ತೀಸ್‌ಘರ್‌ನ ಗುಡ್ಡಗಾಡು ಪ್ರದೇಶ ಮಲೇರಿಯಾ ಎಂಡೆಮಿಕ್ ಪ್ರದೇಶ ಎನ್ನುವುದು ಗೊತ್ತಿದ್ದರೂ ಹೋಗುವ ಮುನ್ನ ಲಭ್ಯವಿರುವ ಕೀಮೋಪ್ರೊಫಿಲಾಕ್ಸಿಸ್ ತೆಗೆದುಕೊಳ್ಳದೇ ಹೋದ ತರುಣ್ ಸೆರೆಬ್ರಲ್ ಮಲೇರಿಯಾಗೆ ಪ್ರಾಣ ಒಪ್ಪಿಸುವಂತಾದದ್ದು ದುರಂತವೇ ಸರಿ.

ಇಲ್ಲಿಯವರೆಗೆ ಟುಟಾಂಖಮೆನ್‌ನಿಂದ ಹಿಡಿದು ತರುಣ್ ಸೆಹ್ರಾವತ್ ತನಕ ಕೋಟ್ಯಂತರ ಜನ ಮಲೇರಿಯಾಗೆ ಪ್ರಾಣ ತೆತ್ತಿದ್ದಾರೆ. ಮಲೇರಿಯಾಗೆ ಯಾರೂ ಅಮುಖ್ಯರಲ್ಲ, ಅದು ಯಾವ ಭೇದವಿಲ್ಲದೆ ಜೀವ ತೆಗೆಯುತ್ತದೆ !

✶ ✶ ✶

**ಮಲೇರಿಯಾ ಕುರಿತು ಕೆಲ ಮಾಹಿತಿ**

'ಪ್ಲಾಸ್ಮೋಡಿಯಂ' ಎಂಬ ಪರೋಪಜೀವಿ ರೋಗಾಣುವಿನಿಂದ ಉಂಟಾಗುವ ಮಲೇರಿಯಾ ಉಷ್ಣವಲಯ ಹಾಗೂ ಸಮಶೀತೋಷ್ಣ ವಲಯದ ಕಾಯಿಲೆ. ಹೆಚ್ಚು ಮಳೆ, ಬೆಚ್ಚನೆಯ ತೇವಾಂಶಭರಿತ

ವಾತಾವರಣ ಹಾಗೂ ಸೊಳ್ಳೆಯ ಸಂತಾನೋತ್ಪತ್ತಿಗೆ ಪೂರಕ ವಾಗುವಂತೆ ನಿಂತ ನೀರಿನ ಮೂಲಗಳಿರುವ ಪ್ರದೇಶದಲ್ಲಿ ಮಲೇರಿಯಾ ಉಪಟಳ ಹೆಚ್ಚು. ಮಲೇರಿಯಾ ಒಬ್ಬರಿಂದೊಬ್ಬರಿಗೆ ಸೊಳ್ಳೆಗಳಿಂದ ಹರಡುವ ಕಾಯಿಲೆ. ಮನುಷ್ಯರಲ್ಲಿ ಮಲೇರಿಯಾ ಉಂಟುಮಾಡುವ ಪ್ಲಾಸ್ಮೋಡಿಯಂ ರೋಗಾಣುಗಳಲ್ಲಿ ನಾಲ್ಕು ಗುಂಪು ಗಳಿದ್ದು, ಇವುಗಳಲ್ಲಿ ವೈವ್ಯಾಕ್ಸ್ ಸರ್ವೇಸಾಧಾರಣ ವಾದದ್ದು. ಫಾಲ್ಸಿಪಾರಂ ಭಯಾನಕವಾದ, ೮೦% ಮಲೇರಿಯಾ ಸಾವಿಗೆ ಕಾರಣವಾದ ತಳಿ. ಚಳಿ, ನಡುಕ ಮಲೇರಿಯಾದ ಮುಖ್ಯ ಲಕ್ಷಣಗಳು. ಎರಡು, ಮೂರು, ನಾಲ್ಕು ದಿನಕ್ಕೊಮ್ಮೆ ನಿಯಮಿತವಾಗಿ ಶುರುವಾಗುವ; ಆರೇಳು ಕಂಬಳಿ ಹೊದಿಸಿದರೂ ಗಡಗಡ ನಡುಗುವ ವ್ಯಕ್ತಿಗೆ ನಂತರ ಸಿಕ್ಕಾಪಟ್ಟೆ ತಾಪ ಏರಿ ಬೆವರಿಳಿದು ಜ್ವರ ಬಿಡುತ್ತದೆ. ಮೈಕೈ ನೋವು, ಜಾಂಡೀಸ್, ವಾಂತಿ, ರಕ್ತಹೀನತೆ ಇನ್ನಿತರ ಲಕ್ಷಣಗಳು. ಮಲೇರಿಯಾ ಗುಣವಾದರೂ ಮತ್ತೆಮತ್ತೆ ಶುರುವಾಗಬಹುದು. ಫಾಲ್ಸಿಪಾರಂ ಮಲೇರಿಯಾ ತೀವ್ರತರ ಸ್ವರೂಪ ಪಡೆದು ಅಕ್ಷಿಪಟಲದ ತೊಂದರೆ, ಮಿದುಳಿನ ರಕ್ತಸ್ರಾವ, ದೇಹದ ಅಂಗಾಂಗಗಳ ಒಳಗೆ ರಕ್ತಸ್ರಾವ, ಕೋಮಾ ಸಂಭವಿಸಿ ಸಾವನ್ನಪ್ಪಲೂಬಹುದು.

ರೋಗ ತಡೆಗಟ್ಟುವಿಕೆಗೆ ಲಸಿಕೆ ತಯಾರಿ ಪ್ರಯತ್ನಗಳು ನಡೆಯುತ್ತಲೇ ಇದ್ದರೂ ಉತ್ತಮ ಲಸಿಕೆ ಲಭ್ಯವಾಗಿಲ್ಲ. ಹಾಗಾಗಿ ರೋಗನಿರ್ಮೂಲನೆ ಕನಸಾಗಿದೆ. ಆರಂಭದಲ್ಲೇ ಸೂಕ್ತ ಚಿಕಿತ್ಸೆ ನೀಡಿದರೆ ಸಾವಿನ ಪ್ರಮಾಣ ತಗ್ಗಿಸಬಹುದು. ಸಿಂಕೋನಾ ಮರದ ತೊಗಟೆ ಮಲೇರಿಯಾ ಔಷಧಿಯೆಂದು ಪುರಾತನರಿಗೂ ತಿಳಿದಿತ್ತು. ಕ್ವಿನೈನ್ ಗುಳಿಗೆ ಅದರಿಂದಲೇ ತಯಾರಾದದ್ದು. ಆದರೆ ಜ್ವರ ಬಂದ ಕೂಡಲೇ ಕ್ವಿನೈನು (ಕೊಯನಿನ್) ಗುಳಿಗೆ ನುಂಗಿ, ನುಂಗಿಸಿ; ಅರ್ಧಂಬರ್ಧ ಡೋಸ್ ಬಳಸಿ ರೋಗಾಣು ಅದಕ್ಕೆ ಪ್ರತಿರೋಧ ಬೆಳೆಸಿಕೊಂಡಿದೆ. ಈಗ ಸಸ್ಯಮೂಲ ಆಲ್ಕಲಾಯ್ಡುಗಳಲ್ಲದೆ ಸಿಂಥೆಟಿಕ್ ಔಷಧಿ ಗಳೂ ಲಭ್ಯವಿವೆ. ಆದರೆ ಮಲೇರಿಯಾ ರೋಗಾಣು ಒಂದಾದ ಮೇಲೊಂದು ಔಷಧಕ್ಕೆ ರೆಸಿಸ್ಟೆನ್ಸ್ ಬೆಳೆಸಿಕೊಂಡಿದ್ದು ಚಿಕಿತ್ಸೆಗೆ ದೊಡ್ಡ ಸವಾಲಾಗಿದೆ. ಪ್ರಥಮ ಹಂತದ ಮಲೇರಿಯಾಗೆ ಬಳಸುವ ಹಲವು ಪರಿಣಾಮಕಾರಿ ಔಷಧಿಗಳು ತುಟ್ಟಿಯಲ್ಲ, ಒಂದು ಕೋರ್ಸ್ ರೆಸೋಚಿನ್ (೧೨ ಮಾತ್ರೆ)ಗೆ ೬ ರೂಪಾಯಿ ಮಾತ್ರ. ಆದರೆ ಕಾಯಿಲೆ ಪತ್ತೆಹಚ್ಚಿ ಔಷಧಿ ಕೊಡುವವರು ಬೇಕಷ್ಟೆ.

ಹೈದರಾಬಾದಿನಲ್ಲಿದ್ದ ಬ್ರಿಟಿಷ್ ವೈದ್ಯ ರೊನಾಲ್ಡ್ ರಾಸ್ ಸೊಳ್ಳೆಗಳಿಂದ ಮಲೇರಿಯಾ ಹರಡುವುದೆಂದು ಕಂಡುಹಿಡಿದ ಮೇಲೆ ಸೊಳ್ಳೆ ನಿಯಂತ್ರಣವೇ ಮಲೇರಿಯಾ ನಿಯಂತ್ರಣವಾಗಿದೆ. ಸೊಳ್ಳೆ ಅಂತಿಂಥ ಕೀಟವಲ್ಲ, ಕಚ್ಚಿದ ಸೊಳ್ಳೆಯನ್ನು ಹೊಸಕಿ ಹಾಕಬಹುದು, ಆದರೆ ಅದು ಹಸ್ತಾಂತರಿಸುವ ರೋಗಗಳು ಸಾವು ನೋವಿಗೆ ಕಾರಣವಾಗುತ್ತವೆ. ಸೊಳ್ಳೆಯ ನಿಯಂತ್ರಣಕ್ಕೆ ಕೀಟನಾಶಕಗಳ ಬಳಕೆ ಶುರುವಾಗಿದ್ದು ಕಳೆದ ಶತಮಾನದಲ್ಲಿ. ೧೮೭೪ರಲ್ಲಿ ಕಂಡುಹಿಡಿಯಲ್ಪಟ್ಟ ಡಿಡಿಟಿಯನ್ನು ಸೊಳ್ಳೆನಾಶಕವಾಗಿ ಉಪಯೋಗಿಸ ಬಹುದೆಂದು ಸಂಶೋಧಿಸಲಾಯಿತು. ಅಲ್ಲಿಂದೀಚೆಗೆ ಡಿಡಿಟಿ ಹಲವು ದೇಶಗಳಿಂದ ಮಲೇರಿಯಾವನ್ನೂ, ಅನಾಫಿಲಿಸ್ ಸೊಳ್ಳೆಯನ್ನೂ ನಿರ್ಮೂಲನ ಮಾಡಿತು. ಆದರೆ ವಿವೇಚನಾರಹಿತ ಡಿಡಿಟಿ ಬಳಕೆಯಿಂದ ಮನುಷ್ಯರಲ್ಲಿ ಕ್ಯಾನ್ಸರ್ ಉಂಟಾಗುತ್ತಿದೆಯೆಂದೂ, ವನ್ಯ ಜೀವಿಗಳಿಗೆ ಹಾನಿಯಾಗುವುದೆಂದೂ ಆರೋಪಿಸಲಾಯಿತು.

ಈಗ ನಮ್ಮ ದೇಶವೂ ಸೇರಿದಂತೆ ವಿಶ್ವಾದ್ಯಂತ ಸೊಳ್ಳೆನಾಶಕ್ಕೆ ಬೇರೆ ರಾಸಾಯನಿಕಗಳನ್ನು ಬಳಸಲಾಗುತ್ತಿದೆ. ಆದರೆ ಪರಿಣಾಮಕಾರಿ ನಿಯಂತ್ರಣ ಆಗಿಲ್ಲವೆನ್ನಲು ಹಬ್ಬುತ್ತಿರುವ ಮಲೇರಿಯಾ ಸಾಕ್ಷಿಯಾಗಿದೆ.

**ತನಿಖಾ ಪತ್ರಿಕೋದ್ಯಮದಲ್ಲಿ ಇವು ಸೇರುವುದಿಲ್ಲವೆ ?**

ಕಾಯಿಲೆಯೆಂದರೆ ವ್ಯಕ್ತಿಯೊಬ್ಬನ ನರಳಾಟವಲ್ಲ ಅಥವಾ ಅವನ ಕುಟುಂಬದ ಅಸಹಾಯಕತೆಯಲ್ಲ. ಕಾಯಿಲೆಗಳು ಸಮಾಜ ವ್ಯವಸ್ಥೆಯ ಪ್ರತಿಬಿಂಬಗಳು.

# ಸಹನೆಯ ಹೆಣ್ಣು



**ಉ**ಶ್...
ನೀನು ಹೆಣ್ಣು
ತಾಳ್ಮೆಯಿರಲಿ
ನಗು ಅಳು
ನೋವು ನಲಿವು
ಹುಟ್ಟು ಸಾವು
ಒಲುವು ಒಲುಮೆ
ಎಲ್ಲವುಗಳಲ್ಲು
ಸಹನೆ ಇರಲಿ
ಹೆಣ್ಣಲ್ಲವೆ ನೀನು ?
ಸಹನೆಯ ಉತ್ತರಾಧಿಕಾರಿ !
ನೀನು ಹೆಣ್ಣು

ಜ್ಞಾನಿ ಬುದ್ಧನು ನಿನ್ನ
ಅರ್ಧರಾತ್ರಿಯಲಿ ಬಿಟ್ಟು
ಹೋದಾಗಲೂ ನೀನು
ಸಹನೆಯಿಂದ ಇದ್ದೆಯಲ್ಲ ?
ಒಡಲೊಳಗಿನೆಲ್ಲ
ತುಮುಲ ತಳಮಳಗಳಿಗೆ
ಸಹನೆಯ ಅಣೆಕಟ್ಟು ಕಟ್ಟಿ ?
ಹೆಣ್ಣಲ್ಲವೆ ನೀನು
ಸಹನೆಯಿಂದ ಇದ್ದೆ.

ಫಲವತಿಯಾದ ನಿನ್ನ
ರಾಮ ಅಡವಿಗಟ್ಟಿದಾಗ
ಅವಡುಗಚ್ಚಿ ನುಂಗಲಿಲ್ಲವೇ ?
ನೋವುಗಳನ್ನು
ಹೆಣ್ಣಲ್ಲವೆ ನೀನು
ಸಹನೆಯಿಂದ ಇರಲೇ ಬೇಕಾಗಿತ್ತು.

ಅಗ್ನಿ ದಿವ್ಯದಲ್ಲೂ
ನಾಚಿಕೆ ಅಪಮಾನಗಳನ್ನು
ಬದಿಗಿಟ್ಟು , ಕಣ್ಣೀರನ್ನು
ಇಂಗಿಸಿ, ಸಹಿಸಿಕೊಂಡೆಯಲ್ಲ ?
ಹೆಣ್ಣಿಗಲ್ಲವೇ ಬೇಕು ಸಹನೆ

ಉಡುಗೊರೆಯ, ವಸ್ತುವಾಗಿ
ಬದಲಾಗಿ ಬಲಿಯಾಗಿ
ಮೂಡಿದ ಬರೆಗಳೆಲ್ಲವ
ನಂಜಿನಾದಿಯಾಗಿ ನುಂಗಿದ
ಮಾಧವೀ !!
ರಾಜಪುತ್ರಿ ನೀ ಹೆಣ್ಣಲ್ಲವೇ
ಅಧಿಕಾರಕ್ಕಲ್ಲ , ಸಹನೆಗೆ
ನೀನು ಉತ್ತರಾಧಿಕಾರಿಣಿ ?
ಹೆಣ್ಣಲ್ಲವೇ ನೀನು
ಸಹನೆಯಿಂದ ಇದ್ದೆ.

**ಡಾ|| ಡಿ. ಮೀನಾಕ್ಷಿ**
ಸಹಾಯಕ ನಿರ್ದೇಶಕರು, ಮಾಹಿತಿ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

ಗುಂಡಿಯಿಲ್ಲದ ರಸ್ತೆ, ಜನರ ಖರ್ಚು ಮಾಡುವ ಶಕ್ತಿ, ಜನ ಬಳಸುವ ಕಬ್ಬಿಣ-ಪೆಟ್ರೋಲುಗಳು ಅಭಿವೃದ್ಧಿ ಸೂಚ್ಯಂಕಗಳಾದರೆ, ಕಾಯಿಲೆ ಮತ್ತು ಸಾವು-ನೋವುಗಳು ಸಮಾಜವೊಂದರ ಅಸ್ವಸ್ಥತೆಯ, ಅನಭಿವೃದ್ಧಿಯ, ಅಸಮಾನತೆ-ತಾರತಮ್ಯದ ಸಂಕೇತಗಳು. ಬಡತನ ಹೆಚ್ಚಿರುವಲ್ಲಿಯೇ ರೋಗರುಜಿನಗಳ ಸಾವು ಹೆಚ್ಚು ಸಂಭವಿಸುವುದು, ಬುಡಕಟ್ಟು ಪ್ರದೇಶದಲ್ಲಿಯೇ ಹೆಚ್ಚು ಸಾಂಕ್ರಾಮಿಕ ರೋಗಗಳಿರುವುದು ಕೇವಲ ಕಾಕತಾಳೀಯವಲ್ಲ.

ವಿಶ್ವ ಆರೋಗ್ಯ ಸಂಸ್ಥೆಯ ಅಂದಾಜಿನ ಪ್ರಕಾರ ೨೦೧೦ರಲ್ಲಿ ವಿಶ್ವಾದ್ಯಂತ ಮಲೇರಿಯಾ ೨೧.೬ ಕೋಟಿ ಜನರನ್ನು ಬಾಧಿಸಿದ್ದು ೬.೫೫ ಲಕ್ಷ ಜನ ಮರಣ ಹೊಂದಿದ್ದಾರೆ. ೮೫% ಸಾವು ಆಫ್ರಿಕಾದಲ್ಲೇ ಸಂಭವಿಸಿದೆ. ಅವರಲ್ಲಿ ಅರ್ಧಕ್ಕಿಂತ ಹೆಚ್ಚಿನವರು ೫ ವರ್ಷದೊಳಗಿನ ಮಕ್ಕಳು. ರಕ್ತಹೀನತೆ (ಅನೀಮಿಯಾ) ಇರುವ ಗರ್ಭಿಣಿ ಮಹಿಳೆಯರಲ್ಲಿ ಸಾವು ಸಂಭವಿಸುವ ಸಾಧ್ಯತೆ ಹೆಚ್ಚು. ಆರ್ಥಿಕ ಹಿಂದುಳಿದಿರುವಿಕೆ ಮತ್ತು ಬಡತನ ಮಲೇರಿಯಾಗೆ ಕಾರಣವೂ, ಪರಿಣಾಮವೂ ಹೌದು. ಕಡುಬಡತನದ ಪ್ರದೇಶಗಳಲ್ಲಿ ಮಲೇರಿಯಾ ಸಾವು ಜಾಸ್ತಿ. ಆಫ್ರಿಕಾದ ಕೆಲ ದೇಶಗಳಲ್ಲಿ ಸಾರ್ವಜನಿಕ ಆರೋಗ್ಯಕ್ಕೆ ಖರ್ಚಾಗುವ ೪೦% ಹಣ ಮಲೇರಿಯಾಗೇ ಹೋಗುತ್ತದೆ. ೩೦-೫೦% ಆಸ್ಪತ್ರೆ ದಾಖಲಾತಿ ಮಲೇರಿಯಾಗಾಗಿಯೇ ಇರುತ್ತದೆ. ಗರಿಷ್ಠ ಫಲವತ್ತತೆ ಇದ್ದಾಗ್ಯೂ ಆಫ್ರಿಕಾದ ಜನಸಂಖ್ಯೆ ಏಷಿಯಾದಷ್ಟು ಏರದೇ ಇರಲು ಮಲೇರಿಯಾ ಸಾವೂ ಕಾರಣವಾಗಿದೆ. ಭಾರತದ ಈಶಾನ್ಯ ಮತ್ತು ಮಧ್ಯಭಾಗದ ಗುಡ್ಡಗಾಡು ಪ್ರದೇಶಗಳ ಪರಿಸ್ಥಿತಿ ಇದಕ್ಕಿಂತ ಭಿನ್ನವಾಗಿಲ್ಲ.

ತಡೆಗಟ್ಟಬಹುದಾದ ಸಾಂಕ್ರಾಮಿಕ ರೋಗಗಳ ಕುರಿತು, ಅದರ ಕಾರಣ-ನಿಯಂತ್ರಣದ ಕುರಿತು ಪ್ರಚಾರ, ಕಾಳಜಿ ಅಗತ್ಯ. ಅದು ಕೇವಲ ಆರೋಗ್ಯ ಇಲಾಖೆಯ ಕೆಲಸವಲ್ಲ. ಅದರಲ್ಲೂ ಮಲೇರಿಯಾದಂತಹ ಸಾಂಕ್ರಾಮಿಕ ರೋಗಗಳು ಸಾರ್ವಜನಿಕ ಆರೋಗ್ಯದ ಮೇಲೆ ಬೀರುವ ದೀರ್ಘಾವಧಿ ದುಷ್ಪರಿಣಾಮಗಳು ದೇಶದ ಆರ್ಥಿಕತೆಗೇ ಪೆಟ್ಟು ನೀಡಬಲ್ಲಂಥವು. ಅಂಥವುಗಳ ಕುರಿತು ಸ್ಪಷ್ಟ ವೈಜ್ಞಾನಿಕ ಮಾಹಿತಿಯನ್ನು ಪ್ರಸಾರ ಮಾಡಬೇಕಾದದ್ದು ಮಾಧ್ಯಮಗಳ ಸಾಮಾಜಿಕ ಜವಾಬ್ದಾರಿಯಾಗಿದೆ. ಒಂದೊಂದು ಕೊಲೆ, ಸಂಶಯಾಸ್ಪದ ಸಾವಿನ ಬಗ್ಗೆ ಎಪಿಸೋಡುಗಟ್ಟಲೆ, ಪುಟಗಟ್ಟಲೆ ಪ್ರಚಾರ ಕೊಡುವ ಮಾಧ್ಯಮಗಳಿಗೆ ೨೦೧೦ರಲ್ಲಿ ಛತ್ತೀಸ್‌ಘರ್ ರಾಜ್ಯದ ತಾಲೂಕೊಂದರಲ್ಲೇ ೧೮೦ ಜೀವಗಳು (ಅವರಲ್ಲಿ ೮೦% ಆದಿವಾಸಿಗಳು – ಅದರಲ್ಲೂ ಅಪೌಷ್ಟಿಕತೆಯಿರುವ ಮಕ್ಕಳು ಹಾಗೂ ರಕ್ತಹೀನತೆಯಿಂದ ನರಳುವ ಗರ್ಭಿಣಿ ಮಹಿಳೆಯರು) ಮಲೇರಿಯಾ ಎಪಿಡೆಮಿಕ್‌ಗೆ ಪಟಪಟನೆ ಜೀವ ಒಪ್ಪಿಸಿದ್ದು ಸುದ್ದಿಯಾಗಲಿಲ್ಲ. ವರದಿಯಾದ ಮರಣಗಳ ಹೊರತಾಗಿ ಇನ್ನೆಷ್ಟು ಲೆಕ್ಕಕ್ಕೆ ಸಿಗದ ಸಾವುಗಳಾಗಿವೆಯೆನ್ನುವುದು ಊಹೆಯಷ್ಟೇ. ಇಂಥ ಹಲವು ಘಟನೆಗಳು ಸಂಭವಿಸಿರಬಹುದು. ಬಹು ಉದ್ದೇಶವುಳ್ಳ, ಹೇರಳ ನಿಧಿಯುಳ್ಳ 'ಇಂಟಿಗ್ರೇಟೆಡ್ ಡಿಸೀಸ್ ಸರ್ವಿಯಲೆನ್ಸ್ ಪ್ರೋಗ್ರಾಂ' ಚಾಲ್ತಿಯಲ್ಲಿರುವಾಗಲೇ ಅಲ್ಲಿ ಈ ಮರಣಗಳು ಸಂಭವಿಸಿದವು. ಹಾಗಾದರೆ ಲೋಪ ಯಾರದು ?

## ಅವಳಿ – ಜವಳಿ

ಖಾದಿ-ಖಾವಿಗೂ
ಫೆವಿಕಾಲ್ ಅಂಟು
ಖಾದಿಯಲ್ಲಿದೆ ನೋಟು
ಖಾವಿಯಲ್ಲಿ ಓಟು
ಎರಡೂ ಸೇರಿದರೆ ಗಂಟು
ಎರಡರ ನಡುವಿನ ಕೊಂಡಿ
ಇತಿಮಿತಿಯಲ್ಲಿದ್ದರೆ
ಪರಸ್ಪರ ಪೂರಕ
ಜೊತೆಗೆ ತಾರಕ
ಅತಿಯಾದರೆ ಮಾರಕ

**ಕೆ. ಬಸವನ ಗೌಡ**
ಹಗರಿಬೊಮ್ಮನ ಹಳ್ಳಿ

ವಿಶ್ವಾದ್ಯಂತ ಮಲೇರಿಯಾ ರೋಗ ನಿರ್ಮೂಲನೆಗೆ ವಿಶ್ವ ಆರೋಗ್ಯ ಸಂಸ್ಥೆ ಕಾಲಕಾಲಕ್ಕೆ ಕಾರ್ಯಯೋಜನೆ ರೂಪಿಸುತ್ತ ಬಂದಿದೆ. ವಿಶ್ವಸಂಸ್ಥೆಯಷ್ಟೇ ಅಲ್ಲ, ಮಲೇರಿಯಾ ನೋ ಮೋರ್; ಗ್ಲೋಬಲ್ ಫಂಡ್ ಟು ಫೈಟ್ ಏಡ್ಸ್, ಟಿಬಿ ಅಂಡ್ ಮಲೇರಿಯಾ; ಮಲೇರಿಯಾ ಅಟ್ಲಾಸ್ ಪ್ರೊಜೆಕ್ಟ್; ಕ್ಲಿಂಟನ್ ಫೌಂಡೇಷನ್ ಇವೆಲ್ಲವೂ ಅಂತರರಾಷ್ಟ್ರೀಯ ಮಟ್ಟದಲ್ಲಿ ಮಲೇರಿಯಾ ನಿರ್ಮೂಲನೆಗಾಗಿ ಕೆಲಸ ಮಾಡುತ್ತಿವೆ. ಮಲೇರಿಯಾ ನಿರ್ಮೂಲನೆಗಾಗಿ ಲಾಗಾಯ್ತಿನಿಂದ ಭಾರತದಲ್ಲಿ ಕಾರ್ಯಕ್ರಮಗಳು ಚಾಲ್ತಿಯಲ್ಲಿದ್ದರೂ ಇನ್ನೂ ಅದು ಕೊಲೆಗಡುಕನಾಗೇ ಉಳಿದಿರುವುದೊಂದು ವಿಪರ್ಯಾಸ. ಸಾಮಾಜಿಕ ಸಮಸ್ಯೆಗಳ ಜೊತೆಗೆ ತೆರೆದ ಚರಂಡಿಗಳು, ಹವಾಮಾನ, ಆರೋಗ್ಯ ಸೇವಾ ಕ್ಷೇತ್ರದ ಲೋಪಗಳು, ಆರೋಗ್ಯ ಕುರಿತ ಅಜ್ಞಾನ, – ಹೀಗೆ ಹತ್ತು ಹಲವು ಅಂಶಗಳು ಮಲೇರಿಯಾ ನಿರ್ಮೂಲನೆಯನ್ನು ಕನಸಾಗಿಯೇ ಉಳಿಸಿವೆ.

ತೀವ್ರ ಸ್ವರೂಪದ ಕಾಯಿಲೆ ಉಂಟಾದಾಗ ಅತ್ಯಾಧುನಿಕ ಸೌಲಭ್ಯಗಳ ಚಿಕಿತ್ಸೆ ಬೇಕಾಗುತ್ತದೆ. ನಗರಗಳ ಅತ್ಯಾಧುನಿಕ ಆಸ್ಪತ್ರೆಗಳು ಕೈಗೆಟುಕದೆ, ಸೂಕ್ತ ಸಮಯದಲ್ಲಿ ಸೂಕ್ತ ಚಿಕಿತ್ಸೆ ಸಿಗದೆ ಗ್ರಾಮೀಣ ಪ್ರದೇಶದಲ್ಲಿ ರೋಗಿಗಳು ಸಾವನ್ನಪ್ಪುತ್ತಾರೆ. ಇತ್ತೀಚೆಗೆ ಆರೋಗ್ಯ ಸೌಲಭ್ಯ ಒದಗಿಸುವಲ್ಲೂ ವರ್ಗಪ್ರಜ್ಞೆ ಕೆಲಸ ಮಾಡುತ್ತಿದ್ದು, ಅಸಮಾನ ವ್ಯವಸ್ಥೆಗೆ ಅದೂ ಮುಖ್ಯ ಕಾರಣವಾಗಿದೆ. ನಗರ ಪ್ರದೇಶಗಳ ವೈದ್ಯರ ಸಾಂದ್ರತೆ ಹಳ್ಳಿಗಳಿಗಿಂತ ನಾಲ್ಕು ಪಟ್ಟು ಹೆಚ್ಚಿದೆ. ಹಳ್ಳಿಗಳಲ್ಲಿ ನಕಲಿ ವೈದ್ಯರ ಹಾವಳಿಯೂ ಹೆಚ್ಚಿದೆ. ಇತ್ತೀಚೆಗೆ ಕೇಂದ್ರ ಸರ್ಕಾರ ಗ್ರಾಮೀಣ ಆರೋಗ್ಯ ಸೇವೆ ಉತ್ತಮಗೊಳಿಸುವುದಕ್ಕಾಗಿ ಮೂರೂವರೆ ವರ್ಷದ 'ಬಿಆರ್‌ಎಚ್‌ಸಿ' (ಬ್ಯಾಚೆಲರ್ ಆಫ್ ರೂರಲ್ ಹೆಲ್ತ್ ಕೇರ್) ಕೋರ್ಸುಗಳನ್ನು ಶುರುಮಾಡುವುದಾಗಿ ಘೋಷಿಸಿತು. ಆದರೆ ಹೀಗೆ ಮಾಡುವುದರಿಂದ ಗ್ರಾಮೀಣ ಪ್ರದೇಶಗಳಿಗೆ ಇಂಥ ಅರೆಕಲಿತ ವೈದ್ಯರು, ನಗರ ಪ್ರದೇಶಗಳಿಗೆ ಬೇರೆ ಡಿಗ್ರಿ ಆದ ಪರಿಣಿತರು ಎಂದು ಸರ್ಕಾರವೇ ಗ್ರಾಮೀಣ ಪ್ರಜೆಗಳನ್ನು ಎರಡನೆಯ ದರ್ಜೆಯವರಾಗಿ ಪರಿಗಣಿಸಿ ತಾರತಮ್ಯ ಮಾಡಿದಂತಾಗುವುದಿಲ್ಲವೆ ?

ಮೆಡಿಕಲ್ ಕಾಲೇಜುಗಳು ಮೇಲ್ದರ್ಜೆಯ ಆಸ್ಪತ್ರೆ ಹಾಗೂ ತಜ್ಞ ವೈದ್ಯರನ್ನೊಳಗೊಂಡಿದ್ದು, ಅಲ್ಲಿಯ ಆರೋಗ್ಯ ಸೌಲಭ್ಯ ಸಾಮಾನ್ಯನಿಗೂ ಎಟುಕುವಂತಿರುತ್ತದೆ. ದೇಶದ ೬೪೦ ಜಿಲ್ಲೆಗಳಲ್ಲಿ ೧೯೩ ಜಿಲ್ಲೆಗಳಷ್ಟೇ ಮೆಡಿಕಲ್ ಕಾಲೇಜು ಹೊಂದಿವೆ. ಖಾಸಗಿ ಕುಳಗಳು ದೊಡ್ಡದೊಡ್ಡ ನಗರಗಳಲ್ಲೇ, ಐದಾರು ಮೆಡಿಕಲ್ ಕಾಲೇಜು ಇರುವ ಊರಿನಲ್ಲೇ ಮತ್ತೆಮತ್ತೆ ಕಾಲೇಜು ಶುರುಮಾಡಲು ಅನುಮತಿ ಕೇಳುತ್ತವೆಯೇ ಹೊರತು ಗ್ರಾಮೀಣ ಆರೋಗ್ಯ ತಮ್ಮ ಜವಾಬ್ದಾರಿಯಲ್ಲ ಎಂದು ಭಾವಿಸಿವೆ. ಇವತ್ತು ಆರೋಗ್ಯ ಕ್ಷೇತ್ರ ವ್ಯಾಪಾರೀಕರಣಗೊಂಡಿರುವುದರಲ್ಲಿ ಖಾಸಗಿ ಕಾಲೇಜುಗಳ ಪಾತ್ರ ದೊಡ್ಡದಿದೆ. ಆದ್ದರಿಂದ ಸರ್ಕಾರವು ಹಿಂದುಳಿದ, ಆರೋಗ್ಯ ಸೌಲಭ್ಯಗಳಿಲ್ಲದ ಜಿಲ್ಲೆಗಳಲ್ಲಿ ಮೆಡಿಕಲ್ ಕಾಲೇಜುಗಳನ್ನು ಶುರುಮಾಡಲು ಮುಂದಾಗಬೇಕು. ೩೦ ವರ್ಷಗಳ ನಂತರ ಕರ್ನಾಟಕದಲ್ಲೇನೋ ೬ ಹೊಸ ಸರ್ಕಾರಿ ವೈದ್ಯಕೀಯ ಕಾಲೇಜುಗಳು ಸ್ಥಾಪನೆಯಾದರೂ ಅವು ಮೂಲ ಸೌಕರ್ಯ ಕೊರತೆಯಿಂದ ನರಳುತ್ತಿವೆ. ಉತ್ತರದ ರಾಜ್ಯಗಳ ಪರಿಸ್ಥಿತಿಯಂತೂ ಕೇಳುವಂತಿಲ್ಲ.

ವಿಶ್ವ ಆರೋಗ್ಯ ಸಂಸ್ಥೆ ೨೦೦೦ನೇ ಇಸವಿಗೆ 'ಹೆಲ್ತ್ ಫಾರ್ ಆಲ್' ಗುರಿ ಹೊಂದಿತ್ತು. ಅದಾಗಿ ೧೨ ವರ್ಷ ಸಂದಿವೆ. ಎಲ್ಲರಿಗೂ ಆರೋಗ್ಯ ಒತ್ತಟ್ಟಿಗಿರಲಿ, ಆರೋಗ್ಯ ಸೇವೆಯೇ ಲಭ್ಯವಿಲ್ಲ. ಎಲ್ಲ ಕಾರ್ಯಕ್ರಮ, ಧನಸಹಾಯ, ಮಾನವ ಶ್ರಮದ ಹೊರತಾಗಿಯೂ ಸಾವಿರಾರು ವರ್ಷ ಹಳೆಯ ಕಾಯಿಲೆ ಇನ್ನೂ ಜೀವಂತವಿರಲು ಲಸಿಕೆ ಯಿಲ್ಲದಿರುವುದಷ್ಟೇ ಅಲ್ಲ, ಅಭಿವೃದ್ಧಿಯ ಫಲವನ್ನು ಅಸಮಾನವಾಗಿ ಹಂಚುತ್ತಿರುವುದೂ ಮುಖ್ಯ ಕಾರಣವಾಗಿದೆ.

ಭಾರತದ ಐದು ವರ್ಷ ಕೆಳಗಿನ ಅರ್ಧಕ್ಕರ್ಧ ಮಕ್ಕಳು ಅಪೌಷ್ಟಿಕತೆಯಿಂದ ನರಳುತ್ತಿವೆ. ಅವು ಮಲೇರಿಯಾ ಅಷ್ಟೇ ಅಲ್ಲ, ಮತ್ಯಾವುದೇ ಸಾಂಕ್ರಾಮಿಕ ಕಾಯಿಲೆ ಬಂದರೂ ಸುಲಭದಲ್ಲಿ ತುತ್ತಾಗಬಹುದಾದ ಜೀವಗಳು. ರಾಷ್ಟ್ರದ ಉಗ್ರಾಣಗಳಲ್ಲಿ ಕೋಟ್ಯಂತರ ಟನ್ನುಗಳಷ್ಟು ಆಹಾರ ಬೂಸಲು ಹಿಡಿದು, ಇಲಿ ಹೆಗ್ಗಣಗಳ ಪಾಲಾಗಿ ಕೊಳೆತುಹೋಗುವಾಗ ಮೂಲೆಮೂಲೆಗಳಲ್ಲಿ ಜನ ಹಸಿವಿನಿಂದ, ಅದು ಕೈ ಹಿಡಿದು ಕರೆತರುವ ಕಾಯಿಲೆಗಳಿಂದ ಸಾವುನೋವು ಅನುಭವಿಸುತ್ತಿದ್ದಾರೆ. ಎಲ್ಲ ಪ್ರದೇಶಗಳಲ್ಲಿಯೂ ಸಮನಾದ ಆರೋಗ್ಯ ಸೇವೆ ಒದಗಿಸಿದರೆ ಮಲೇರಿಯಾ ನಿವಾರಣೆಯಾಗುವುದೆಂದು ನಮ್ಮ ಬಳಿಯೇ ಇರುವ ಪುಟ್ಟ ದ್ವೀಪ ಮಾರಿಷಸ್ ಮಾಡಿ ತೋರಿಸಿದೆ. ಅದು ನಮ್ಮ ಮಾಡೆಲ್ ಆಗಬಾರದೇಕೆ ?

**ಡಾ|| ಎಚ್.ಎಸ್.ಅನುಪಮಾ**
ಜಲಜ ಜನರಲ್ ಮತ್ತು ಹೆರಿಗೆ ಆಸ್ಪತ್ರೆ
ಕವಲಕ್ಕಿ ಅಂಚೆ, ಹೊನ್ನಾವರ ತಾಲೂಕು
ಉತ್ತರ ಕನ್ನಡ ಜಿಲ್ಲೆ, ಪಿನ್ - ೫೮೧ ೩೬೧

# ಕಡಲಿನ ಮೇಲೆ ಒಬ್ಬ ಕ್ರಿಸ್ತ

ನವೆಂಬರ್‌ನಲ್ಲಿ ನವಕರ್ನಾಟಕ ಪ್ರಕಾಶನದಿಂದ
ಲೋಕಾರ್ಪಣೆ ಆಗಲಿರುವ **ಭೂಮಿಯಷ್ಟು ಬದುಕು**
ಕಥಾ ಸಂಕಲನದಿಂದ ಆಯ್ದ ಕಥೆ

**ಬಿ**ಸಿಲೂ ಮಳೆಯೂ ಮೇಲಿಂದ ಮೇಲೆ ಮುದ್ದಿಸಿ ಮಾಸಿ ಹೋದ ಒಬ್ಬ ಕ್ರಿಸ್ತ. ಕಡಲಿಗೆ ತಾಗಿ ಇದ್ದಿದ್ದ ಒಂದು ಹಳೆಯ ಕೋಟೆಯ ಪಕ್ಕ. ಕೈಗಳನ್ನು ಪಾರಿವಾಳದಂತೆ ಕಟ್ಟಿ ನಿಂತಿದ್ದಾನೆ. ವರ್ಷಗಳ ಹಿಂದೆ ಯಾರೋ ಸ್ಥಾಪನೆ ಮಾಡಿದ ಈ ಶಿಲುಬೆ ಮತ್ತು ಕ್ರಿಸ್ತರು ಇಗರ್ಜಿಯಿಂದ ಹೊರಹಾಕಲ್ಪಟ್ಟವರೆಂದು ತೋರುತ್ತದೆ. ಇಮ್ಮಾನ್ಯುವಲ್ ಕಲಕಿ ಹೋಗುತ್ತಿರುವ ತನ್ನ ನೋಟವನ್ನು ಇನ್ನೂ ಒಂದಷ್ಟು ಆರ್ದ್ರವಾಗಿಸಿ ಕ್ರಿಸ್ತನ ಮೇಲೆ ನೆಟ್ಟ. ಆರಾಧನಾ ಮಂದಿರಗಳ ಹೊರಗಿರುವ ಎಲ್ಲ ದೇವ ರೂಪಗಳೂ ಅಸಹನೀಯವಾಗಿ ಹೊರಗಿಳಿದವರೋ, ಹೊರ ಹಾಕಲ್ಪಟ್ಟವರೋ ಆಗಿರುತ್ತಾರೆ. ಕಡಲು ಗಾಳಿಯ ಉಪ್ಪುರಸ ತಾಗಿ ಕ್ರಿಸ್ತನ ಶರೀರದ ತುಂಬಾ ದೊಡ್ಡ ದೊಡ್ಡ ಗುಳ್ಳೆಗಳು ಎದ್ದು ನಿಂತಿವೆ. ಸಂಜೆ ಹೊತ್ತಿನ ಗಾಳಿ ಸೇವನೆಗಾಗಿ ಬಂದವರು ರಾತ್ರಿಯತ್ತ ಮರೆಯಾಗಿದ್ದಾರೆ. ಇಮ್ಮಾನ್ಯುವಲ್ ಮೋಂಬತ್ತಿಯನ್ನುರಿಸಿ ಕ್ರಿಸ್ತನ ಕಾಲ ಬಳಿ ಇಟ್ಟ. ಗಾಳಿ ಬಂದು ದೀಪವನ್ನು ಆರಿಸಲು ಪ್ರಯತ್ನಿಸಿತು. ಆಗ ಕ್ರಿಸ್ತನನ್ನುದ್ದೇಶಿಸಿ ಹೇಳಿದ : ''ದೇವ ಪುತ್ರಾ, ಇಬ್ಬರು ಕಳ್ಳರು ನನ್ನ ಎಡ-ಬಲಗಳಲ್ಲಿ ನಿಂತರು. ನಂತರ ಅವರಷ್ಟು ದೊಡ್ಡ ಕಳ್ಳನಲ್ಲದ ನನ್ನನ್ನು ಶಿಲುಬೆಗೇರಿಸಿದರು. ಗುಡ್ಡದ ಮೇಲೆಯೋ ಅಥವಾ ದೊಡ್ಡದೊಂದು ಜನ ಸಮೂಹವನ್ನು ಸಾಕ್ಷಿಯಾಗಿ ನಿಲ್ಲಿಸಿಯೋ ಅಲ್ಲ ಅವರು ಹಾಗೆ ಮಾಡಿದ್ದು. ಯಾವುದೇ ವಿಚಾರಣೆಯೂ ನಡೆಯಲಿಲ್ಲ. ನಿನಗೆ ಮೊಳೆ ಹೊಡೆಯುವಾಗ ನಿನ್ನ ಎರಡೂ ಭಾಗಗಳಲ್ಲಿದ್ದ ಕಳ್ಳರನ್ನೂ ಶಿಲುಬೆಗೇರಿಸಿದ್ದರಲ್ಲ? ಇಲ್ಲಿ ಅದು ಯಾವುದೂ ನಡೆಯಲಿಲ್ಲ. ಇವರು ತಮ್ಮ ನಡುವೆ ನಿಲ್ಲಿಸಿ ಸುಲಭವಾಗಿ ನನ್ನನ್ನು ಶಿಲುಬೆಗೇರಿಸಿದರು. ಆಗ ಅವರು ಶಾಂತರೂ, ಲೋಕಕ್ಕೆ ಎಂದೂ ಅರ್ಥವಾಗದಂತಹ ಗಂಭೀರತೆಯನ್ನು ಮುಖದ ಮೇಲೆ ಧರಿಸಿದವರೂ ಆಗಿದ್ದರು. ನನ್ನಿಂದ ಸಾಧ್ಯವಿಲ್ಲ. ಈ ಮೊಳೆಗಳಿಂದಲೂ, ಸಹಿಸಲಾರದ ವೇದನೆಯಿಂದಲೂ ನನ್ನನ್ನು ರಕ್ಷಿಸಿಕೊಳ್ಳಲು.'' ಇಷ್ಟನ್ನೂ ಹೇಳಿದ ನಂತರ ಇಮ್ಮಾನ್ಯುವಲ್ ಕಡಲ ತೀರಕ್ಕೆ ಓಡಿದ. ದಣಿದ ಕಾಲುಗಳು ಮರಳಲ್ಲಿ ಹೂತುಕೊಂಡವು. ಹೊರಲಾರದ ದುಃಖವನ್ನು ಹೇರಿಕೊಂಡು ಆತ ಮರಳ ಮೇಲೆ ಬಿದ್ದ. ತೂಗುತ್ತಿರುವ ನಿದ್ದೆಯನ್ನು ಮದ್ಯದಂತೆ ಕುಡಿದು ಆತ ಅಂಗಾತ ಮಲಗಿದ.

ಕಡಲ ತೆರೆಗಳು ವೇಗದ ಭ್ರಮೆಯಲ್ಲಿ ಎದ್ದೆದ್ದು ಬರುತ್ತಿವೆ. ನಸು ಬೆಳಕು ತುಂಬಿದ ದೋಣಿಯಲ್ಲಿ ಮೂರು ಮಂದಿ ಜೀವ ಕೈಯಲ್ಲಿ ಹಿಡಿದುಕೊಂಡು ಕುಳಿತಿದ್ದಾರೆ. ಗುಂಪಿನಲ್ಲಿ ಅತ್ಯಂತ ಹೆಚ್ಚು ಎತ್ತರದವನಾದ ಸ್ರಾಂಕ್ ಕಡಲ ಮೇಲ್ಮೈಯಿಂದ ಕಣ್ಣೆತ್ತುವ ದೂರದ ತನಕವೂ ಒಮ್ಮೆ ನೋಡಿದ ನಂತರ ಬಲೆಯನ್ನು ಬೀಸಿ ಒಗೆದ. ಅವರ ಯಾತ್ರೆಯಲ್ಲಿ ಪ್ರಾರ್ಥನೆ ನಿರೀಕ್ಷೆಗಳು ಒಟ್ಟಾಗಿ ಸಂಚರಿಸಿದವು.

ಅವರಿಗೆ ತೀರವನ್ನು ಕಾಣುವುದು ಸಾಧ್ಯವೇ ಇರಲಿಲ್ಲ. ದೂರದಿಂದ ಜೊತೆಗೆ ಬಂದವರ ದೋಣಿಗಳೊಳಗಿನ ಬೆಳಕಿನ ಚುಕ್ಕೆಗಳನ್ನು ಮಾತ್ರವೇ ಕಾಣಬಹುದಿತ್ತು. ಅವರು ಮತ್ತೆಯೂ ಹುಟ್ಟುಹಾಕುತ್ತ ದೋಣಿ ನಡೆಸಿದರು. ನಡುವೆ ಎತ್ತರೆತ್ತರಕ್ಕೆ ಹಾರುತ್ತಿದ್ದ ತೆರೆಗಳೊಳಗೆ ಸಿಕ್ಕಿ ದೋಣಿಯೊಮ್ಮೆ ಓಲಾಡಿತು. ಕಾಲುಗಳ ಶಕ್ತಿಯನ್ನು ದೋಣಿಯೊಳಗೆ ಗಟ್ಟಿಯಾಗಿ ಊರಿ ಹಿಡಿದು ಅವರು ಕಡಲಿನೊಂದಿಗೆ ಸ್ಪರ್ಧಿಸಿದರು.

ತೀರದಲ್ಲಿ ಗಾಳಿ-ಚಳಿಗಳು ಒಂದಾಗಿ ಸೇರಿ ಮರಳ ರಾಶಿಯ ಮೇಲೆ ಬೀಸಿ ಹೊಡೆದವು. ಮೇಲಕ್ಕೆ ಸಿಡಿದ ಮರಳ ಕಣಗಳು ದೇಹಕ್ಕೆ ಬಡಿಯುತ್ತಿರುವುದು ಇಮ್ಮಾನ್ಯುವೆಲ್‌ಗೆ ಗೊತ್ತಾಗುತ್ತಿರಲಿಲ್ಲ. 'ಇಮ್ಮಾನ್ಯುವಲ್... ಇಮ್ಮಾನ್ಯುವಲ್...' ಯಾರೋ ತನ್ನನ್ನು ಕರೆದೆಬ್ಬಿಸಲು ಪ್ರಯತ್ನಿಸುತ್ತಿದ್ದಾರೆ ಅನ್ನಿಸಿತು. ಕಣ್ಣು ತೆರೆಯದೆ ಕಿವಿಗಳಿಂದ ಹೆಚ್ಚು ಗಮನಕೊಟ್ಟು ಕೇಳತೊಡಗಿದ.

''ಎಲ್ಲಿಂದಿರಬಹುದು ಈ ಧ್ವನಿ ? ಅಸಾಧಾರಣವೂ ಮೃದುವೂ ಆದ ಈ ಸ್ವರ...?''



ಮೂಲ ಕಥೆ: **ಅರ್ಷಾದ್ ಬತೇರಿ**
ಕನ್ನಡಕ್ಕೆ : **ಡಾ|| ಪಾರ್ವತಿ ಜಿ. ಐತಾಳ್**

''ಇಮ್ಮಾನ್ಯುವಲ್...'' ಹತ್ತಿರದ ಕೂಗಿನ ತರಂಗದಲ್ಲಿ ಆತ ಕಣ್ಣುಗಳನ್ನು ತೆರೆದಿಟ್ಟ.

ಪೂರ್ತಿಯಾಗಿ ಒದ್ದೆಯಾದ ಒಂದು ಆಕೃತಿ. ತೋಳಿನವರೆಗೆ ಒದ್ದೆಯಾಗಿ ಇಳಿಬಿದ್ದಿದ್ದ ಕೂದಲೊಳಗೆ ಪ್ರಪಂಚದಲ್ಲೇ ಅತ್ಯಂತ ಕರುಣಾಪೂರಿತ ಕಣ್ಣುಗಳೊಂದಿಗೆ ತನ್ನನ್ನು ಒಂದೇ ಸಮನೆ ನೋಡುತ್ತಿದ್ದ ಆಕೃತಿ.

''ತಾವು.... ಇಲ್ಲಿ ?''

''ಎದ್ದೇಳು. ನಾನು ನಿನ್ನ ಬಳಿಗೆ ಬಂದದ್ದಲ್ಲ ದಾರಿ ತಪ್ಪಿ ಬಂದೆ ಅಷ್ಟೆ''

''ಇಲ್ಲಿ ನಾನು ನಿಮ್ಮನ್ನು ಎಂದೂ ನಿರೀಕ್ಷಿಸಿರಲಿಲ್ಲ'' ಇಮ್ಮಾನ್ಯುವಲ್ ಮೆಲ್ಲನೆ ಒಮ್ಮೆ ಮುಟ್ಟಿ ನೋಡಿದ. ಪಾದಗಳನ್ನೂ ಹಸ್ತಗಳನ್ನೂ ಹುಡುಕಿದ. ಅಲುಗಾಡದೆ ನಿಂತ ಆ ಪರಿಶುದ್ಧ ಆಕೃತಿಯ ಕೈಗಳನ್ನು ಜೋಡಿಸಿ ಹಿಡಿದು ಕೇಳಿದ : ''ನಿನ್ನೊಳಗೆ ಬಡಿಯಲ್ಪಟ್ಟ ಮೊಳೆಗಳೆಲ್ಲಿ? ಗಾಯಗಳೆಲ್ಲಿ?'' ಮಾರುತ್ತರವನ್ನೇನೂ ಹೇಳದೆ ಕುತ್ತಿಗೆ ತುಸು ವಾಲಿ ನಿಂತಿತು.




''ಎಲ್ಲಿ ನಿನ್ನ ಮೊಳೆಗಳು ?''

''ಸಹಿಸ್ಕೊಂಡು ಸಹಿಸ್ಕೊಂಡು.. ಎಲ್ಲವನ್ನೂ ಒಳಗೆ ಎಳೆದುಕೊಂಡಾಗಿದೆ.''

ಕಡಲತೀರವು ಪೂರ್ತಿಯಾಗಿ ನಿರ್ಜನವಾಯಿತು. ಅವರು ಮೆಲ್ಲನೆ ಎದ್ದು ನಡೆದರು. ತೆರೆಗಳು ನಡುನಡುವೆ ಬಂದು ದ್ರಾಕ್ಷಿಬಳ್ಳಿಗಳಂತೆ ಕಾಲಿಗೆ ಸುತ್ತಿಕೊಂಡವು. ಅವರು ಒಟ್ಟಿಗೆ ಕತ್ತೆತ್ತಿ ನೋಡಿದರು. ಒಂದೇ ಒಂದು ನಕ್ಷತ್ರವೂ ಇಲ್ಲದ ಕಪ್ಪು ಆಕಾಶ.

''ಇಮ್ಮಾನ್ಯುವಲ್, ನೀನ್ಯಾಕೆ ಅತ್ತದ್ದು?'' ಆತ ತನ್ನ ಉದ್ದ ಬೆರಳುಗಳನ್ನು ಇಮ್ಮಾನ್ಯುವಲ್‌ನ ಹೆಗಲ ಮೇಲಿಟ್ಟ.

''ನನ್ನಿಂದ ಸಾಧ್ಯವಿಲ್ಲ'' ಅಳುವಿನ ಆಳದೊಳಗೆ ಬಿದ್ದ ಗದ್ಗದ ಧ್ವನಿಯನ್ನು ಪುನಃ ಏರಿಸಿ ಹೇಳಿದ.

''ನನ್ನಿಂದಾಗದು''

''ನಿನ್ನ ಬಾಯಿಂದಲೂ ಹಾಗೆಲ್ಲ ಹೊರಡಬಾರದು. ನೀನು ದೂರು ಮಾತ್ರ ಹೇಳುವವನೋ ? ನನ್ನೊಳಗಿದ್ದಷ್ಟು ನೋವು ನಿನಗಿದೆಯೆ ? ನಾನು ಅತ್ತದ್ದು ನಿನಗೆ ಗೊತ್ತಿದೆಯೆ ?''

''ನೀನು ಅತ್ತಿದ್ದೀಯಾ, ಯಾವಾಗ ?''

''ನಿನಗೆ ಗೊತ್ತಿಲ್ಲವೆ ಗೆತ್ ಶೇಮನ ತೋಟ ? ಹತ್ತು ಮಂದಿ ಶಿಷ್ಯರನ್ನೂ ಹೊರಗೆ ನಿಲ್ಲಿಸಿ ನಾನು ದೇವರ ಹತ್ತಿರ ನನ್ನ ಕೈಗಳಲ್ಲಿರುವ ಪಾನಪಾತ್ರೆಯನ್ನು ತಿರುಗಿ ತಗೋ ಎಂದು ಹೇಳುತ್ತಿದ್ದಂತೆ ಅಳುತ್ತಿದ್ದೆ. ನನ್ನ ಕಣ್ಣುಗಳಿಂದ ರಕ್ತ ಹರಿಯುತ್ತಿತ್ತು. ಯಾರೂ ಅದನ್ನು ಕಾಣಲಿಲ್ಲ. ಜೀವವನ್ನು ತಿರುಗಿ ತೆಗೆದುಕೊಳ್ಳಬೇಕೆಂದು ಪ್ರಾರ್ಥಿಸುವುದಕ್ಕಿಂತಲೂ ಹೆಚ್ಚು ಯಾತನಾಜನಕವಾದದ್ದು ಬೇರೇನೂ ಇಲ್ಲ'' ಅವರು ಮರಳ ಹಾಸಿನ ಮೇಲೆ ಕುಳಿತರು. ಆಕಾಶದಲ್ಲಿ ನಸು ಬೆಳಕು ಕಾಣಿಸಿಕೊಂಡಿತು. ಪುಟ್ಟ ಪುಟ್ಟ ಮೇಘ ಸಮೂಹಗಳು ಪಕ್ಕಕ್ಕೆ ಸರಿಯುತ್ತಿದ್ದುದನ್ನು ಅವರು ಕಂಡರು.

''ಈ ಕಡಲು ಪೂರ್ತಿ ನನ್ನ ಕಣ್ಣೀರು'' ಆತ ಇಮ್ಮಾನ್ಯುವಲ್‌ನ ಕಿವಿಯಲ್ಲಿ ತೀರಾ ಗೌಪ್ಯವಾದ ವಿಚಾರವೊಂದನ್ನು ಹೇಳುತ್ತಿದ್ದಂತೆ ಇಬ್ಬರೂ ಎದ್ದರು.

''ಇಮ್ಮಾನ್ಯುವಲ್, ನಾನು ಮೂತ್ರ ಮಾಡಬೇಕು.''

''ನೀನು ?''

''ಅದೇ'' ಸ್ವಲ್ಪ ದೂರದ ತನಕ ಆತ ನಡೆದು ಹೋಗುತ್ತಿರುವುದು ನೋಡುತ್ತಿದ್ದಂತೆ ಇಮ್ಮಾನ್ಯುವಲ್ ಅಚ್ಚರಿಯ ತುತ್ತತುದಿಗೇರಿ ದಿಗ್ಭ್ರಮೆಗೊಂಡು ನಿಂತ.

''ಇಷ್ಟೊಂದು ಆಶ್ಚರ್ಯ ಯಾಕೆ ? ನಾನೊಬ್ಬ ಸಾಮಾನ್ಯ ಮನುಷ್ಯ''

ನಗುವಿನ ಬೆಳಕಿನೊಂದಿಗೆ ಹತ್ತಿರ ಬಂದಾಗ ಇನ್ನೊಮ್ಮೆ ಮುಟ್ಟಿ ನೋಡಿದ.

''ನನ್ನಿಂದ ನಂಬಲಾಗುತ್ತಿಲ್ಲ'' ಇಮ್ಮಾನ್ಯುವಲ್ ಹೇಳಿದ.

''ಇಮ್ಮಾನ್ಯುವಲ್, ನೀನು ಕರ್ಘೂನ್ ಝೂಕೀಸ್ ಎಂದು ಕೇಳಿದ್ದೀಯಾ ?''

''ಇಲ್ಲ''

''ನನ್ನನ್ನು ಅತ್ಯಂತ ಉಚಿತವೂ, ಸುಂದರವೂ ಆದ ರೀತಿಯಲ್ಲಿ ಹುಡುಕಿ ಹಿಡಿದದ್ದು ಆತನೇ. ಪ್ರತಿಭೆಯ ಒಂದು ಕಡಲೇ ಹೃದಯದಲ್ಲಿದ್ದ ಒಬ್ಬ ವ್ಯಕ್ತಿ ಆತ. ನನ್ನೊಳಗಿನ ಸಾಮಾನ್ಯನನ್ನು ಬಂದು ಮುಟ್ಟಿದ್ದು ಅವನೇ. ಯಾವಾಗಲಾದರೂ ಆತನನ್ನು ಭೇಟಿಯಾದರೆ ಅವನ ಬಲಗೈಗೆ ನಾನೊಂದು ಮುತ್ತು ಕೊಡಬೇಕು'' ಅವರು ಮರಳ ಮೇಲೆ ಕುಳಿತರು. ತೀರದಲ್ಲಿದ್ದ ಹಳೆಯದಾದ ದೋಣಿಯೊಳಗೆ ನಿದ್ರಿಸುತ್ತಿದ್ದವರ ಗೊರಕೆ ಗಟ್ಟಿಯಾಗಿ ಕೇಳಿಸಿತು. ಗಾಳಿ ಹಿಂದೆ ಹೋಯಿತು. ಸ್ವರ್ಗದ ಕುರಿತಾಗಲಿ, ನರಕದ ಕುರಿತಾಗಲೀ ಏನೂ ಹೇಳದೆ ಅವರು ಮೌನವಾಗಿ ಮುಂದುವರಿದರು.

ಒಳ ಕಡಲಿನ ಉಪ್ಪು ಗಾಳಿಯಲ್ಲಿ ಮೂವರು ಮತ್ತು ದೋಣಿ ಮಾತ್ರ. ಅವರ ಜತೆಗೆ ಬಂದವರೆಲ್ಲರೂ ಹಿಂದಿರುಗಿ ಹೋಗಿದ್ದಾರೆ. ಅವರು ತಿರುಗಿ ಹೋಗಲು ಒಪ್ಪಲಿಲ್ಲ. ಯಾವುದೂ ಸರಿಯಾಗಿ ಬಲೆಗೆ ಸಿಗದೇ ಹೋದಾಗ ದೋಣಿ ದಡವನ್ನು ಮರೆತು ಮುಂದೆ ಹೋಯಿತು. ಅವರು ಪರಸ್ಪರ ಏನೂ ಮಾತನಾಡಲಿಲ್ಲ. ಎದ್ದೆದ್ದು ಹಾರುತ್ತಿರುವ ತೆರೆಗಳ ಮಾಲೆಗಳು, ಹವಳದ ಚಿಪ್ಪುಗಳು ಮತ್ತು ಶಾರ್ಕ್‌ಗಳ ಮೇಲಿಂದ ಅವರೂ, ದೋಣಿಯೂ, ಬಲೆಯೂ ಅಪಾಯಗಳನ್ನು ದಾಟಿ ನಡೆದರು. ಕಡಲನ್ನೋ ಮೀನುಗಳನ್ನೋ ಆಕ್ಷೇಪಿಸದೆ, ಗೊಣಗಾಟವಿಲ್ಲದೆ, ತೀರದ ತಮ್ಮ ಗುಡಿಸಲುಗಳನ್ನೂ ಅವುಗಳ ಒಳಗೆ ಕಾದು ಕುಳಿತಿರುವವರನ್ನೂ ನೆನಪಿಸಿಕೊಳ್ಳುತ್ತ ಅವರು ಇನ್ನಷ್ಟು ಎಚ್ಚರಿಕೆ ವಹಿಸಿ ದೋಣಿಯನ್ನು ದೂರ ದೂರ ನಡೆಸಿದರು.

''ದೊಡ್ಡದಾದದ್ದೇನೂ ಸರಿಯಾಗಿ ಸಿಗದೆ ನಾವು ತಿರುಗಿ ಹೋಗುವುದು ಬೇಡ'', ಸ್ರಾಂಕ್ ಇಬ್ಬರನ್ನೂ ಉದ್ದೇಶಿಸಿ ಹೇಳಿದ. ಸಮುದ್ರ ಸ್ವಲ್ಪ ಹೊತ್ತು ಅಡಗಿ ಸುಮ್ಮನಾಯಿತು. ಅವರು ಬಲೆ ಬೀಸಿ ಎಸೆದರು.

''ಇಷ್ಟು ಹೊತ್ತಾಗಿಯೂ ನಮಗೇನೂ ಸಿಗಲಿಲ್ಲವಲ್ಲ.. ಇಂಥ ಒಂದು ಅನುಭವವಾಗ್ತಿರೋದು ಇದು ಮೊದಲು'' ಲೂಕೋಸ್ ನಿಟ್ಟುಸಿರು ಬಿಟ್ಟ. ಈ ಯಾವುದರ ಬಗ್ಗೆ ಗಮನ ಕೊಡದೆ ದೂರವೆಲ್ಲೋ ನೋಡುತ್ತ ನಿಂತ ಆ್ಯಂಟನಿ. ರೋಗಪೀಡಿತಳಾದ ತನ್ನ ಹೆಂಡತಿಯ ಚಿಕಿತ್ಸೆಗೆ ಬೇಕಾದ ಹಣ ಈ ಬಾರಿ ಸಿಕ್ಕಬಹುದೆಂಬ ನಿರೀಕ್ಷೆಯ ಮೇಲೆ ಕತ್ತಲೆ ಹಬ್ಬಿಕೊಂಡಿದೆ. ಆದರೆ ಕ್ಷಣಕ್ಷಣಕ್ಕೂ ಸ್ಪಷ್ಟವಾಗುತ್ತಿರುವ ನಿರಾಶೆಯನ್ನು ಜೋರಾಗಿ ಬದಿಗೆ ತಳ್ಳಿ ಆ್ಯಂಟನಿ ಕಡಲಿನೆದುರಿಗೆ ತನ್ನ ವಿಶಾಲವಾದ ಎದೆಯೊಡ್ಡಿ ನಿಂತ.

''ನಮಗೆ ಏನಾದರೂ ಸಿಗಬಹುದು'' ಅವರು ಒಟ್ಟಿಗೆ ಕೂಗಿ ಹೇಳಿದರು. ಗಾಳಿ ಫಕ್ಕನೆ ಜೋರಾಗಿ ಬೀಸಿದ್ದರಿಂದ ದೋಣಿಯನ್ನು ಶೂನ್ಯತೆಯತ್ತ ಎತ್ತಿಕೊಂಡು ಒಂದು ತೆರೆ ಮಗುಚಿತು. ನಿಯಂತ್ರಣದಿಂದ ತಪ್ಪಿಸಿಕೊಂಡು ಹಾರಿದ ದೋಣಿ ಇನ್ನೊಂದು ತೆರೆಯ ಮೇಲೆ ಬಿದ್ದಿತು. ಅಲ್ಲಿಂದ ಬೇರೊಂದೆಡೆಗೆ...

''ಬಲೆ ಎಳೆ... ಎಳೆದು ದೋಣಿಯೊಳಗೆ ಹಾಕಬಹುದು'', ಸ್ರಾಂಕ್ ಗುಡುಗಿದ. ದೊಡ್ಡ ಗೋಪುರದಂತೆ ಮೇಲೆದ್ದ ನೀರು ದೋಣಿಯತ್ತ ಬಾಗಿತು. ಅದರ ಭಾರವಾದ ಹೊಡೆತಕ್ಕೆ ಮೂವರೂ ದೋಣಿಯೊಳಗೆ ಬಿದ್ದು ಮೀನುಗಳಂತೆ ವಿಲವಿಲನೆ ಒದ್ದಾಡಿದರು. ನೀರೊಳಗೆ ಅವರಿಗೆ ಪರಸ್ಪರರು ಕಾಣಿಸಲಿಲ್ಲ. ದೋಣಿ ಅಲ್ಲಾಡುತ್ತ ಪುನಃ ಮೇಲೆದ್ದು ಕೆಳಕ್ಕೆ ಬಿದ್ದಿತು. ದೋಣಿಯೊಳಗೆ ನೀರನ್ನುಳಿಸಿ ಹುಚ್ಚು ಹಿಡಿದ ತೆರೆ ಹಿಂದಿರುಗಿತು. ಮೊಣಕಾಲಿನ ಮೇಲೆ ಕೈಗಳನ್ನೂರಿ ಎದ್ದು ಸ್ರಾಂಕ್ ಮುಖವೊರೆಸಿಕೊಂಡ. ಅವರಲ್ಲೊಬ್ಬ ಕಾಣಿಸುತ್ತಿಲ್ಲ. ಸ್ರಾಂಕ್ ಮತ್ತು ಲೂಕೋಸ್ ದೋಣಿಯಲ್ಲಿ ತಿರುಗಿ ಆ್ಯಂಟನಿಯನ್ನು ಹುಡುಕಿದರು. ಎಲ್ಲೂ ಆ್ಯಂಟನಿ ಮೇಲೆದ್ದು ಬರಲಿಲ್ಲ. ''ಆ್ಯಂಟನೀ... ಆ್ಯಂಟನೀ...'' ಧಡಿಯ ಶಾರ್ಕ್‌ಗಳ ಸೊಕ್ಕಿನಿಂದ ಆಘಾತಗೊಂಡ ಅವರ ಕರೆಗಳನ್ನು ತೆರೆಗಳು ಬಂದು ನುಂಗಿಹಾಕಿದವು.

ತೀರದಲ್ಲಿ ಗಾಳಿಯೂ, ಚಳಿಯೂ ಹೆಚ್ಚಾಯಿತು. ಚದುರಿ ಬಿದ್ದಿದ್ದ ಚಿಪ್ಪುಗಳಲ್ಲಿ ಕೆಲವನ್ನು ಬಾಚಿ ತೆಗೆದ ಇಮ್ಮಾನ್ಯುವಲ್ ಸಿಟ್ಟು-ಸಂಕಟಗಳನ್ನು ಹತ್ತಿಕ್ಕಿಕೊಳ್ಳಲಾರದೆ ಕಡಲಿನತ್ತ ಒಂದೊಂದೇ ಚಿಪ್ಪುಗಳನ್ನು ಎಸೆದ. ಹೇಳಲಾಗದ್ದೆಲ್ಲವನ್ನೂ ಹೊರಗೆ ಪ್ರಕಟಪಡಿಸಲು ಕಂಡುಹಿಡಿದ ದಾರಿ ಅದೆಂದು ಅನ್ನಿಸಿದಾಗ ಕೈಗಳನ್ನು ಬಲವಾಗಿ ಹಿಡಿದುಕೊಂಡ. ಹಾರಲಾಗದೆ ಇಮ್ಮಾನ್ಯುವಲ್ ತನ್ನನ್ನು ಹಿಡಿದುಕೊಂಡಿದ್ದ ಬಲಿಷ್ಠ ಕೈಗಳ ಮೇಲೆ ತಲೆಯಿಟ್ಟು ಮಲಗಿದ. ನಿಶ್ಚಲವಾದ ಕೆಲವು ಕ್ಷಣಗಳ ನಂತರ ಅವರು ಒಟ್ಟಿಗೆ ಎದ್ದರು. ಬಟ್ಟೆಗೆ ಅಂಟಿಕೊಂಡಿದ್ದ ಮರಳ ಕಣಗಳನ್ನು ಕೊಡವಿ ನಡೆದರು.

# ಕ್ರಾಂತಿಗೀತೆ



**ಹೌ**ದು ತಮ್ಮ ಹೌದು ಅಣ್ಣ
ನಮ್ಮದು ಹರುಕ ಬದುಕು
ಹೋರಾಟದ ಬದುಕು ನಿತ್ರಾಣದ ಬದುಕು
ಅರ್ಥವೇ ಇಲ್ಲದ ಬದುಕು
ಆದರೂ ಬದುಕಬೇಕಿದೆ
ಅದS ಸಾರ್ಥಕ ಮಾಡಿಕೊಳ್ಳಲು.

ಹೌದು ತಂಗಿ ಹೌದು ಅಕ್ಕ
ನಮ್ಮದು ಕಣ್ಣೀರ ಬದುಕು
ಹನಿ ಹನಿಯ ಬದುಕು ಬಿಸಿಲ ಬದುಕು
ದಾಹ ಹಿಂಗದ ಬದುಕು ಬಡತನದ ಬೇಗೆಯ ಬದುಕು
ದಿನವೂ ಚೂರುಚೂರಾದ ಬದುಕು
ರಕ್ತಸಿಕ್ತ ಬದುಕು ಆದರೂ ಬದುಕಬೇಕಿದೆ
ಬದುಕ ಬವಣೆ ನೀಗಿಸಿಕೊಳ್ಳಲು.

ಹೌದು ಜನಗಳೇ ಹೌದೌದು ಮನಗಳೇ
ಮಹಾನಾಯಕರ ಹಾಗಿರುವ ಮನುಜರ ಮುಂದೆ
ಸೊರಗಿದ ನಾಯಿಗಳ ಬದುಕು ನಮ್ಮದು
ಬೆಲೆ ಇಲ್ಲದ ಬೆಲೆ ನೀಡದ ಮನುಷ್ಯರ ಮುಂದೆ
ಬಾಡಿದ ಮರದ ಹಾಗೆ ನಮ್ಮ ಬದುಕು
ಇದS ಚಿಗುರಿಸಿಕೊಳ್ಳಬೇಕು
ಹಾಗೆ ಗರಿಗೆದರಿ ಕಾಯಿ ಹೂಗಳಾಗಿ ಬೆಳಗಿ
ಬದುಕ ತುಂಬಿಸಿಕೊಳ್ಳಬೇಕು
ನಾವು ಒಂದು ದಿನ ಮುಂದಾಗಬೇಕು.

**ಅಕ್ಬರ್ ಸಿ. ಕಾಲಿಮಿರ್ಚಿ**
ಮುಂಜಾನೆ ಬಡಾವಣೆ, ಭಾಗ್ಯನಗರ, ಕೊಪ್ಪಳ ಜಿಲ್ಲೆ, ಪಿನ್ - ೫೮೩ ೨೩೮

''ಇಮ್ಮಾನ್ಯುವಲ್, ನಿನಗೆ ಮೊಳೆ ಹೊಡೆದದ್ದೆಲ್ಲಿ ?''

ಅನಿರೀಕ್ಷಿತ, ಆದರೆ ಭರವಸೆಯನ್ನೀಯುವ ಧ್ವನಿಯ ಮುಂದೆ ಒದ್ದೆಯಾದ ಮರಳಿನ ಮೇಲೆ ಇಮ್ಮಾನ್ಯುವಲ್ ನಿಂತ.

''ನಾನು...?''

''ಗಡಿಬಿಡಿ ಇಲ್ಲ ನಿಧಾನ ಹೇಳಿದರೆ ಸಾಕು...''

ದೂರದಿಂದ ಬರುತ್ತಿದ್ದ ಅನೇಕಾನೇಕ ತೆರೆಗಳ ಜೊತೆಗೆ ಆತ ತನ್ನ ತುಟಿಗಳನ್ನು ಸವರಿಕೊಂಡ.

''ನಾನು ಹೊಡೆಯಲ್ಪಟ್ಟದ್ದು ಅನುಭವಗಳ ಚೂಪಾದ ಮೊಳೆಗಳಿಂದ ಪ್ರೀತಿಯನ್ನು ನಟಿಸಿ ನನ್ನನ್ನು ನಜ್ಜುಗುಜ್ಜಾಗಿ ಮಾಡಿದವರಿಂದ. ದೇವರಿಗೆ ಅತ್ಯಂತ ಹತ್ತಿರದವರೆಂದು ಹೇಳಿಕೊಳ್ಳುತ್ತ ಯಾವಾಗಲೂ ವಾಚಾಲರಾಗುವ ವಿಶ್ವಾಸಿಗಳಿಂದ. ನಾನು ಉದ್ಯೋಗ ಮಾಡುವ ಸ್ಥಳದಲ್ಲೂ ಕೂಡಾ. ನನ್ನಿಂದ ಈ ಮೊಳೆಗಳನ್ನು ಕಿತ್ತು ತೆಗೆ... ಬದುಕು ಎಂಬ ಶಿಲುಬೆಯಿಂದ ನನ್ನನ್ನು ಬಿಡುಗಡೆಗೊಳಿಸು'' ಒಂದು ಅಳುವಿನೊಂದಿಗೆ ಇಮ್ಮಾನ್ಯುವಲ್ ಮುಖ ಮುಚ್ಚಿಕೊಂಡ. ಕಡಲು ಕರಿನೀಲ ಕಂಬಳಿ ಹೊದ್ದು ಪಿಸುಗುಟ್ಟಿತು.

''ಇಮ್ಮಾನ್ಯುವಲ್, ನಿನಗೆ ಹಸಿವಾಗುತ್ತಿದೆಯೆ ?''

''ಇಲ್ಲ''

''ಬಾಯಾರಿಕೆಯಾಗುತ್ತಿದೆಯೆ ?''

''ಇಲ್ಲ ನನ್ನನ್ನು ರಕ್ಷಿಸು...'' ಸಾವಿನ ಮುಷ್ಟಿಯಂತೆ ಆ ನೀಳವಾದ ಕೈಯ ಹಿಡಿತ ಬಿಗಿಯಾಯಿತು. ಕತ್ತಲು ಇನ್ನಷ್ಟು ಕಪ್ಪಿನೊಂದಿಗೆ ಸುತ್ತಲೂ ಮುಸುಕಿತು. ಗಾಳಿಯ ಶಕ್ತಿಯೂ ವರ್ಧಿಸಿತು. ಬೇರು ಗಟ್ಟಿಯಾಗದ ನೆರಳು ನೀಡುವ ಮರಗಳಲ್ಲೊಂದು ಅಡ್ಡಬಿದ್ದಿತು. ಅವರು ತಿರುಗಿ ನೋಡಲಿಲ್ಲ, ಎತ್ತರವಾಗಿ ನಿಂತ ಮರಳ ದಿಣ್ಣೆ ಬಿದ್ದು ಪುಡಿಯಾಯಿತು. ''ಇಮ್ಮಾನ್ಯುವಲ್, ಮನುಷ್ಯನಿಗೆ ಎಂದೂ ನೋವಿನಿಂದ ಮುಕ್ತಿಯಿಲ್ಲ.''

''ಇಲ್ಲಿಂದ ಬಿಟ್ಟು ಹೋಗಬೇಡಪ್ಪಾ, ಇವತ್ತು ರಾತ್ರಿ ಮುಗಿಯುವುದರೊಳಗೆ ನನ್ನನ್ನು ಕಾಪಾಡು... ಬೆಳಕು ಹರಿಯುವುದರೊಳಗೆ ನನ್ನನ್ನು ರಕ್ಷಿಸು...'' ಆರ್ತನಾಗಿ ನಿಂತಿರಲು ಆ ಹಣೆಯನ್ನು ನೇವರಿಸಲು ಮುಂದಾದ ಕೈಯನ್ನು ಆತ ತಡೆದ.

ಕಡಲು ಭೀಕರವಾಗಿ ಮೊರೆಯಿತು.

''ನೀನು ಇಷ್ಟೊಂದು ಅಸಹಾಯಕನೇ ? ಪ್ರೀತಿಯ ಕುರಿತು ಅತಿ ಹೆಚ್ಚು ಸುಳ್ಳು ಕಥೆಗಳನ್ನು ಹೇಳಿದ್ದು ನೀನೇ...'' ಇಮ್ಮಾನ್ಯುವಲ್ ತಲೆಗೆ ಹೊಡೆದು ಹೇಳಿದ. ಆಗ ಆತ ಇಮ್ಮಾನ್ಯುವಲ್‌ನ ಗದ್ದ ಹಿಡಿದೆತ್ತಿದ.

*ನಾನು ಹೀಗೂ ಹೇಳಿರುವೆ*
*ನಾನು ನಿಮ್ಮನ್ನು ಕಳಿಸುತ್ತೇನೆ*
*ತೋಳಗಳ ನಡುವಿನ*
*ಆಡಿನಮರಿಗಳಂತೆ ನೀವು*
*ಆದ್ದರಿಂದ ನೀವು ಹಾವುಗಳಂತೆ*
*ವಿವೇಕ ಶಾಲಿಗಳಾಗಿರಬೇಕು*
*ಆದರೆ ಪಾರಿವಾಳಗಳಂತೆ ಮುಗ್ಧರಾಗಿರಬೇಕು ಎಂದು*

ಇಮ್ಮಾನ್ಯುವಲ್ ಎರಡೂ ಕಿವಿಗಳನ್ನು ಒತ್ತಿ ಹಿಡಿದುಕೊಂಡ. ಸಿಟ್ಟಿನಲ್ಲಿ ಊದಿ ಉರಿಸಿಟ್ಟ ವಿರೋಧಭಾವದಿಂದ ಗಟ್ಟಿಯಾಗಿ ಕೂಗಿ ಹೇಳಿದ :

''ಇದ್ಯಾವುದನ್ನೂ ಕೇಳುವುದು ನನಗೆ ಬೇಕಾಗಿಲ್ಲ.''

ಕಡಲಿನಲ್ಲಿ ದೋಣಿಯ ಎರಡೂ ತುದಿಗಳಲ್ಲಿ ಸ್ರಾಂಕ್ ಮತ್ತು ಲೂಕೋಸ್ ಕುಳಿತಿದ್ದಾರೆ. ಅವರು ಕಳೆದು ಹೋದ ಆ್ಯಂಟನಿಯನ್ನು ನೆನಪಿಸಿಕೊಂಡರು. ಉಮ್ಮಳಿಸಿದ ಅಳುವನ್ನು ಕಡಲಿಗೆ ತೋರಿಸದೆ ಅಡಗಿಸಿಟ್ಟು ದೋಣಿ ನಡೆಸಿದರು. ಬಲೆಯಲ್ಲಿ ಈಗಲೂ ದೊಡ್ಡದೇನೂ ಸಿಕ್ಕಿ ಹಾಕಿಕೊಂಡಿಲ್ಲ, ಚಿಕ್ಕ ಮೀನುಗಳು ಸಣ್ಣದಾಗಿ ಚಡಪಡಿಸುತ್ತ ದೋಣಿಯ ಒಂದು ಮೂಲೆಯಲ್ಲಿ ಬಿದ್ದಿವೆ. ''ಇನ್ನು ದೂರ ಹೋಗಬೇಕೆ ?'' ಲೂಕೋಸ್ ಕೇಳಿದ. ಹಿಂದಿರುಗುವ ಮೊದಲು ಇನ್ನೊಮ್ಮೆ ಸುತ್ತು ಹಾಕುವ. ಹೀಗೆ ಬರಿಗೈಯಲ್ಲಿ ತಿರುಗಿ ಹೋದರೆ ಏನು ಪ್ರಯೋಜನ ? ಬಲೆಯನ್ನು ಮಡಚಿ ಹಿಂಡಿದ ಅವರು ತಮ್ಮ ಮಕ್ಕಳ ಕುರಿತು ಮಾತನಾಡಿದರು. ತೀರ ತಲುಪುತ್ತಲೂ ತೀರದಲ್ಲೆಲ್ಲಾದರೂ ಆ್ಯಂಟನಿ ಸಿಕ್ಕಿಹಾಕಿಕೊಂಡಿದ್ದಾನೋ ಎಂದು ನಿರೀಕ್ಷಿಸಿದರು. ದಿಕ್ಕಿಲ್ಲದೆ ಒಂಟಿಯಾಗಿ ಬಿಟ್ಟ ಆ್ಯಂಟನಿಯ ಕುಟುಂಬಕ್ಕೆ ಇನ್ನು

ನಾವೇನಾದರೂ ಮಾಡಬೇಕೆಂದು ಒಟ್ಟಿಗೆ ಹೇಳುತ್ತಿದ್ದಂತೆ ಲೂಕೋಸ್ ಬಿಕ್ಕಿ ಬಿಕ್ಕಿ ಅತ್ತ. ಆ ಅಳುವಿನಲ್ಲೊಂದು ಆಯಾಸದ ಆರಂಭವಿತ್ತು. ಕಣ್ಣುಗಳು ಮೆಲ್ಲನೆ ತಗ್ಗಿದವು. ''ಆಯಾಸಪಡಕೂಡದು.'' ಸ್ರಾಂಕ್ ಕೂಗಿ ಹೇಳಿದ.

ಲೂಕೋಸ್ ಒಮ್ಮೆ ತಲೆಯೆತ್ತಿ, ತಿರುಗಿ ಮೊದಲಿನಂತೆ ಕುಳಿತ.

''ಲೂಕೋ... ಆಯಾಸ ಹೊಂದಕೂಡದು, ಅ್ಲಂ...! ಕಡಲಿನೊಂದಿಗೆ ಹೋರಾಡುವ ನಾವು ಬದುಕಿನೊಂದಿಗೂ ಹೋರಾಡುವುದು ಬೇಡವೇ ?'' ತನ್ನೊಳಗಿನ ಎಲ್ಲ ಶಕ್ತಿಯನ್ನುಪಯೋಗಿಸಿ ಸ್ರಾಂಕ್ ಬಲೆಬೀಸಿ ಒಗೆದ. ಕೆಳಗೆ ಹೋಗುತ್ತಿದ್ದ ಬಲೆಯ ಜತೆಗೆ ಉದ್ದವಾದ ದೃಶ್ಯವನ್ನು ತಿರುಗಿ ತೆಗೆದುಕೊಳ್ಳುವುದರ ನಡುವೆ ನೀರಿಗೇನೋ ಬೀಳುತ್ತಿರುವುದರ ಸದ್ದು ಕೇಳಿಸಿತು. ದೋಣಿಯ ಆಚೆ ಭಾಗದಲ್ಲಿದ್ದ ಲೂಕೋಸ್ ತುಸುದೂರ ಮುಳುಗಿ ಇಳಿಯುತ್ತಿದ್ದಾನೆ. ದೋಣಿ ಹತ್ತಿರ ಬಂದಷ್ಟೂ ಲೂಕೋ ದೂರ ದೂರ ಹೋದ. ನಡುವೆ ಒಮ್ಮೆ ತಲೆ ಮೇಲೆದ್ದು ಬಂದರೂ ಸ್ವರ ಕೇಳಿಸಲಿಲ್ಲ, ತಪ್ಪಿಸಲಿಕ್ಕಿರುವ ಪ್ರಯತ್ನವೂ ಮಾಡದೆ ಕೆಳಕೆಳಗೆ... ಸ್ರಾಂಕ್ ದೋಣಿಯಲ್ಲಿ ಕವುಚಿ ಮಲಗಿ ಕೈ ಚಾಚಿ ನೀರಿಗೆ ಬಡಿದ. ಲೂಕೋನ ಜೀವ ಮತ್ತು ಸಾವಿನ ನಡುವಣ ಸ್ಪರ್ಧೆ ಬಿಗಿಯಾಗುತ್ತಿದ್ದಂತೆ ದೊಡ್ಡದೊಂದು ತೆರೆಯ ಜತೆಗೆ ದೋಣಿ ಇನ್ನೊಂದು ಸ್ಥಳಕ್ಕೆ ಎಸೆಯಲ್ಪಟ್ಟಿತು. ಕೆಳಗೆ ಬಿದ್ದ ಸ್ರಾಂಕ್ ದೋಣಿಯತ್ತ ಈಜಿ ಬಂದು ಶರೀರವನ್ನೆಳೆದುಕೊಂಡು ಮೇಲೆ ಬಂದ. ಬಾಯಲ್ಲಿ ತುಂಬಿದ ನೀರನ್ನು ಉಗಿದು ಅಳುತ್ತ ಕರೆದ :

''ಲೂಕ್ಕೋ... ನನ್ನ ಲೂಕ್ಕೋ...'' ಗಾಳಿ ಮತ್ತು ತೆರೆಗಳು ಆ ಕೂಗನ್ನು ಹೊಡೆದು ಉರುಳಿಸಿದವು. ಒಂಟಿಯಾಗಿ ಬಿಟ್ಟ ಸ್ರಾಂಕ್ ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿ ಗಾಳಿಯೊಂದಿಗೆ ಸಾಗಿದ... ಎದೆಯೊಳಗಿನ ಬಿಸಿಯನ್ನು ದೀರ್ಘ ಶ್ವಾಸದೊಂದಿಗೆ ಹೊರಗೆ ಹಾಕಿದ. ಒಣಗಿದ ತುಟಿಗಳ ಮೇಲೆ ಹಲ್ಲುಗಳು ಒತ್ತಿದವು. ಕಾಣದಾಗಿಬಿಟ್ಟ ಇಬ್ಬರದ್ದೂ ಮನೆಯ ಕುರಿತು ಎಣಿಸುವಾಗ ಕಣ್ಣುಗಳನ್ನು ನೆನೆಯಲು ಬಿಡಲಿಲ್ಲ, ಬಲಪ್ರಯೋಗಿಸಿ ನೆಟ್ಟಗೆ ಕುಳಿತ. ಯಾವ ನಿರೀಕ್ಷೆಗಳೂ ಇಲ್ಲದೆ ಬಲೆ ಎಳೆದ. ಈ ಬಾರಿ ಅದು ಭಾರವಾಗಿತ್ತು. ಅದು ಹತ್ತಿರ ಬರುವ ತನಕವೂ ಸ್ರಾಂಕ್ ಕಷ್ಟಪಟ್ಟು ಎದ್ದು ನಿಂತು ಅದನ್ನು ದೋಣಿಯತ್ತ ಎಳೆದಿಟ್ಟ. ಚಡಪಡಿಸುತ್ತಿದ್ದ ಮೀನುಗಳ ಜತೆಗೆ ಲೂಕೋನ ನಿರ್ಜೀವ ಶರೀರವೂ ಬಾಗಿ ಬಿದ್ದಿದೆ. ಸ್ರಾಂಕ್ ಲೂಕೋನನ್ನು ದೋಣಿಯೊಳಗೆ ಉದ್ದಕ್ಕೆ ಮಲಗಿಸಿದ. ನೀರು ತೊಟ್ಟಿಕ್ಕುತ್ತಿದ್ದ ಅವನ ದೇಹವನ್ನು ಚಡಪಡಿಸುತ್ತ ತಡವಿದ. ಕೊನೆಗೆ ಹಣೆಯನ್ನು ಬಲವಾಗಿ ಚುಂಬಿಸಿದ.

> ನಿನ್ನನ್ನು ಪ್ರೀತಿಸುವಾಗ
> ಕವಿಯಾಗಿದ್ದು ಎಷ್ಟು ಸತ್ಯವೋ
> ಅಷ್ಟೇ ಸತ್ಯ
> ಈಗ ಹುಚ್ಚನಾಗಿರುವದೂ !
>
> **ವಿ. ಹರಿನಾಥ ಬಾಬು**
> ಉಪ ಖಜಾನಾಧಿಕಾರಿ, ಗಂಗಾವತಿ - ೫೮೩ ೨೨೭

ಎಷ್ಟೋ ಬಾರಿ ಮೀನುಗಳು ಮತ್ತು ಗೆಳೆಯರೊಂದಿಗೆ ತೀರಕ್ಕೆ ಹಿಂದಿರುಗಿ ಬಂದಿದ್ದ ಸ್ರಾಂಕ್ ಜೀವನದಲ್ಲಿ ಮೊದಲ ಬಾರಿಗೆ ರಾತ್ರಿ ಮತ್ತು ಕಡಲುಗಳ ನಡುವಿನಿಂದ ಅವತ್ತಿನ ತನಕ ಅನುಭವಿಸದ ಏಕಾಂತತೆಯಲ್ಲಿ ದೊಡ್ಡ ಮೀನುಗಳೇನೂ ಇಲ್ಲದೆ, ಶವದೊಂದಿಗೆ ದೋಣಿ ನಡೆಸಿದ. ತುಂಬಾ ದೂರ ಕ್ರಮಿಸಿದರೂ ಇನ್ನೊಂದು ದೋಣಿಯಾಗಲಿ, ಬೋಟಾಗಲಿ ಕಾಣಸಿಗಲಿಲ್ಲ. ಮೇಲ್ಭಾಗದಲ್ಲಿ ಯಾರೂ ಇಲ್ಲದೆ ಹರವಿ ನಿಂತಿದ್ದ ಕಡಲು. ಕತ್ತಲೆಯಲ್ಲಿ ಮುಳುಗಿಹೋದ ಆಕಾಶ. ದೋಣಿ ಮತ್ತು ಸ್ರಾಂಕ್ ಗಾಳಿಯ ಸುಳಿಯಲ್ಲಿ ಸಿಕ್ಕೂ ಸಿಗದೆಯೂ ಸಾಗುತ್ತಿದ್ದಾರೆ. ನಡುನಡುವೆ ಆತ ಲೂಕೋನ ಮುಖದತ್ತ ನೋಡುತ್ತಾನೆ. ಒದ್ದೆಯೆಲ್ಲ ಆರಿಹೋಗಿ, ಚಿಕ್ಕದಾಗುತ್ತಿರುವ ಅವನ ಮುಖದಿಂದ, ಬದುಕಿನ ಮತ್ತು ಪರಿಮಿತಿಗಳ ಅಗಾಧವಾದ ನೆನಪುಗಳೇಳುತ್ತಿದ್ದವು. ಸ್ರಾಂಕ್ ಲೂಕೋ ಹತ್ತಿರ ಮಾತನಾಡತೊಡಗಿದ.

''ಲೂಕೋ, ನೀವಿಬ್ಬರೂ ಇಲ್ಲದೆಯೂ ನಾನು ಬಲೆಯನ್ನು ಒಗೆದೆ. ನೀನು ಸಿಕ್ಕಿದಂತೆ ಆ್ಯಂಟನಿಯೂ ಸಿಕ್ಕುತ್ತಾನೆಂದೆನಿಸಿದೆ. ಪ್ರಯೋಜನವಾಗಲಿಲ್ಲ.'' ಸ್ರಾಂಕ್ ದೋಣಿ ನಡೆಸುವುದನ್ನು ನಿಲ್ಲಿಸಿದ. ಎಲ್ಲೆಲ್ಲಿಂದಲೋ ಶಾರ್ಕ್ ಮೀನುಗಳು ಗುಂಪು ಗುಂಪಾಗಿ ಎದ್ದು ಬಿದ್ದು ಕಡಲಿನಲ್ಲಿ ಸದ್ದು ಮಾಡಿದವು.

''ಲೂಕೋ, ನಮ್ಮ ಮೂರೂ ಮಂದಿಯ ಅಪ್ಪಂದಿರೂ ಒಂದು ಮುಂಜಾನೆ ಒಟ್ಟಿಗೆ ತೀರದಲ್ಲಿ ಸತ್ತುಬಿದ್ದದ್ದು ನೆನಪಿಲ್ಲವೇ ? ಅಲ್ಲಿಂದ ತಾನೇ ನಾವು ಗೆಳೆಯರಾಗಿ ಬೆಳೆದಿದ್ದು ?'' ಸ್ರಾಂಕ್ ಲೂಕೋನ ಕಾಲು ಸ್ಪರ್ಶಿಸಿದ. ಸುತ್ತಲೂ ಗಾಳಿ ಜೋರಾಗಿ ಹೊಡೆಯಿತು. ರಾತ್ರಿ ಮುಗಿಯುತ್ತಿರುವ ಲಕ್ಷಣಗಳು ಕಾಣಿಸತೊಡಗಿದವು.

''ಲೂಕೋ, ಸತ್ತು ಮಲಗಿರುವ ನಿನ್ನ ಹತ್ತಿರ ನಾನು ಬೇರೇನು ಹೇಳಲಿ ? ತೀರದಲ್ಲಿ ನೀವಿಲ್ಲದೆ ಕಳೆಯುವುದು ನನ್ನಿಂದ ಸಾಧ್ಯವೇ ? ಬದುಕು ಅಂದರೆ ಹೀಗೇ ಇರಬಹುದಲ್ಲವೇ ?''

ತೀರದಲ್ಲಿ ಗಾಳಿ ಬೀಸಿ ಮರಳ ಕಣಗಳನ್ನು ಸಿಡಿಸಿದವು. ನೆರಳು ನೀಡುವ ಮರಗಳಲ್ಲಿ ಹಲವು ಬಿದ್ದವು. ಇಮ್ಮಾನ್ಯುವಲ್ ಮೊಣಕಾಲೂರಿ ಕುಳಿತ. ನಂತರ ಎರಡೂ ಕೈಗಳ ಮುಷ್ಟಿ ಬಿಗಿಹಿಡಿದು ಬೇಡಿದ :

''ಬೆಳಗಾಗುತ್ತಿದೆ ನನ್ನನ್ನು ಕಾಪಾಡು... ಬೆಳಕಾಗುವುದಕ್ಕೆ ಮೊದಲು ನನ್ನ ಈ ಮೊಳೆಗಳನ್ನೆಲ್ಲ ಕಿತ್ತು ಒಗೆ...''

''ಇಮ್ಮಾನ್ಯುವಲ್, ನೀನು ದೂರ ನೋಡು... ದೋಣಿ ಬರುತ್ತಿರುವುದು ಕಾಣಿಸುತ್ತಿದೆಯೆ ? ಅದರಲ್ಲಿ ಮೂವರಿದ್ದರು. ಇಬ್ಬರು ಸತ್ತುಹೋದರು. ಒಬ್ಬ ಶವವಾಗಿ ಸಿಕ್ಕಿದ ಕೂಡಾ. ಅದನ್ನು ತೆಗೆದುಕೊಂಡು ಒಬ್ಬ ತಿರುಗಿ ಬರುತ್ತಾ ಇರುವುದನ್ನು ನಾವು ಕಾಣುತ್ತಿದ್ದೇವೆ. ಅವರು ಮೀನು ಹಿಡಿಯಲು ಹೋದವರಾಗಿದ್ದರು. ಒಬ್ಬೊಬ್ಬರು ಕಳೆದು ಹೋಗುವಾಗಲೂ ಅವರು ಯಾರನ್ನೂ ಆರೋಪಿಸಲಿಲ್ಲ. ತಾವು ಬಂದಿದ್ದು ಯಾಕೋ ಅದನ್ನು ಮಾತ್ರ ಮಾಡಿದರು. ನೀನು ಯಾವಾಗಲೂ ಆರೋಪಗಳ ಮೇಲೆಯೇ ಜೀವಿಸುತ್ತೀ.''

''ಇಲ್ಲ, ಎಂದೂ ಇಲ್ಲ''

''ಹೌದು ಇಮ್ಮಾನ್ಯುವಲ್, ನೀನು ಇನ್ನೊಬ್ಬರ ಮೇಲಿನ ಆರೋಪಗಳ ಹಿಂದೆ ಅಡಗುತ್ತೀ.. ಆರೋಪಗಳ ಮೇಲೆ ಜೀವಿಸಿದರೆ ನಿನಗೆ ಬಿಡುಗಡೆಯಿಲ್ಲ''

''ಹಾಗಾದರೆ ನಾನು ಅನುಭವಿಸಿದ ನೋವು ?''

''ಸಹಿಸಿಕೊಳ್ಳಬೇಕು. ಹೋರಾಟ ಮಾಡಲು ಒಂದು ಮನಸ್ಸನ್ನು ರೂಪುಗೊಳಿಸಬೇಕು. ದೂರದಿಂದ ಮಾತ್ರವೇ ಪ್ರೀತಿಸಬೇಕು. ನಿನ್ನೊಳಗಿನ ಹಿಡಿತಕ್ಕೆ ಸಿಗದ ಹುಡುಗನನ್ನು ಹಿಡಿದು ಪಳಗಿಸಬೇಕು.''

ಇಮ್ಮಾನ್ಯುವಲ್ ತನ್ನ ಮುಂದಿನ ಆಕೃತಿಯನ್ನು ತಳ್ಳಿ ಬದಿಗೆ ಸರಿಸಿ ಕಡಲಿನತ್ತ ಓಡಿದ. ಎದುರಿಗೆ ಬಂದ ತೆರೆಗಳಲ್ಲಿ ಮುಳುಗುವುದಕ್ಕೆ ಮೊದಲು, ನೀಡಿದ ಕೈಗಳಿಂದ ಅದನ್ನು ಬಾಚಿ ತೆಗೆದುಕೊಂಡು ತೀರದತ್ತ ಹಿಡಿದೆಳೆದ. ಹಿಡಿತವನ್ನು ಬಿಡದೆ ಇಬ್ಬರೂ ಮರಳಲ್ಲಿ ಉರುಳಿ ಬಿದ್ದು ಹೊರಳಾಡಿ ಕುಸ್ತಿ ನಡೆಯಿತು. ಮರಳ ಕಣಗಳು ಅವರನ್ನು ಮುಸುಕಿದವು. ಇಮ್ಮಾನ್ಯುವಲ್‌ನನ್ನು ಹಿಡಿದೆಬ್ಬಿಸಿ ಆತ ತನ್ನ ಶರೀರವನ್ನು ತೆರೆದು ತೋರಿಸಿದ.

''ಇದು ನೋಡಿದೆಯಾ ಇಮ್ಮಾನ್ಯುವಲ್, ನನ್ನ ದೇಹದ ತುಂಬ ಮೊಳೆಗಳು. ಇಬ್ಬರು ಕಳ್ಳರ ಮಧ್ಯೆ ನಿಲ್ಲಿಸಿ ಹೊಡೆದ ಮೂರು ಮೊಳೆಗಳು ಮಾತ್ರವಲ್ಲ ಇವು. ವಿಶ್ವಾಸಿಗಳೆಂಬ ಹೆಸರಿನಲ್ಲಿ ನನ್ನನ್ನು ಪೂಜಿಸುವವರೂ, ಮಾರಾಟ ಮಾಡುವವರೂ ಇಗೋ ಈ ನಿಮಿಷದಲ್ಲೂ ನನ್ನೊಳಗೆ ಚುಚ್ಚಿಕೊಳ್ಳುತ್ತಿದ್ದಾರೆ. ಇಲ್ಲಿ ಕಾಣುವ ಮೊಳೆಗಳೆಲ್ಲ ಇಲ್ಲಿ ನಡೆಯುವ ಒಂದೊಂದು ಸುಳ್ಳು ಪ್ರಾರ್ಥನೆಗಳೇ. ನಿನ್ನಿಂದ ಆಗುವುದಾದರೆ ಇವುಗಳಿಂದ ನೀನೇ ನನ್ನನ್ನೊಮ್ಮೆ ಬಿಡುಗಡೆಗೊಳಿಸು.''

ರಾತ್ರಿ ಮತ್ತು ಕಡಲುಗಳು ಅವರ ಮುಂದಿನ ಚಲನೆಗಾಗಿ ಕಾದು ಕುಳಿತವು. ತೆರೆಗಳೆಲ್ಲವೂ ಕಡಲೊಳಗೆ ಅವಿತುಕೊಂಡವು. ಸಣ್ಣದೊಂದು ಗಾಳಿಯೂ ಬೀಸಲಿಲ್ಲ. ಅವರು ಪರಸ್ಪರ ತಮ್ಮ ಶರೀರದಲ್ಲಿದ್ದ ಮೊಳೆಗಳನ್ನು ಕಿತ್ತು ತೆಗೆಯಲೆಂದು ಕೈಗಳನ್ನು ನೀಡಲು, ಕಡಲಿನ ಯಾವುದೋ ದಿಕ್ಕಿನಿಂದ ಭೀಮಾಕಾರದ ತಿಮಿಂಗಿಲದಂತೆ ಹಾರಿ ಬಿದ್ದ ತೆರೆಯ ಪೆಟ್ಟು ತಾಗಿ ಕಡಲೆದ್ದಿತು. ತೆರೆಗಳು ಎದ್ದು ಬಂದವು. ಕಡಲು ತೀರಕ್ಕೆಸೆದು ಅವು ಬಿರುಗಾಳಿಯಲ್ಲಿ ಸಿಕ್ಕಿಹಾಕಿಕೊಂಡು. ಅವರು ಎರಡು ಎಡೆಗಳಿಗೆ ಸ್ಥಳಾಂತರಗೊಂಡರು. ನೋವಿನ ಬಿಗಿ ಮುಷ್ಟಿಯಿಂದ ಬಿಡಿಸಿಕೊಳ್ಳಲಾಗದೆ, ಪರಸ್ಪರ ಸಹಾಯ ಮಾಡಲಾಗದೆ ಅವರು ಎರಡು ಕಡೆಗಳಲ್ಲಿ...

ದೂರ...

ಯಾತನೆಯಲ್ಲಿ... ಅಷ್ಟರಲ್ಲಿ ತೆರೆಗಳು ಬಂದು ಮರಗಳ ಮೇಲೆ ಹೀಗೆ ಬರೆದವು : 'ಇವರನ್ನು, ಹೀಗೆ ಮಾಡಿದವರನ್ನು ನೀನು ಕ್ಷಮಿಸಬೇಕು.'

*ಗೆತ್‌ಶೇಮನ ತೋಟ : ಯೇಸುಕ್ರಿಸ್ತನನ್ನು ಶಿಲುಬೆಗೇರಿಸುವುದಕ್ಕೆ ಮೊದಲು ಆತನ ಕೊನೆಯ ದಿನ ಆತ ತನ್ನ ಶಿಷ್ಯರೊಂದಿಗೆ ಕಳೆದ ಸುಂದರವಾದ ತೋಟ.*

*ಕಝೂನ್‌ಝೂಕಿ : ಜಗತ್ಪ್ರಸಿದ್ಧ ಲೇಖಕ. ಯೇಸುಕ್ರಿಸ್ತನ ಕುರಿತು ಆತ ಬರೆದ ಕಾದಂಬರಿ 'ಝೋರ್ಬಾದ ಗ್ರೀಕ್' ಚಲನಚಿತ್ರವಾಗಿಯೂ ಪ್ರಸಿದ್ಧವಾಗಿದೆ.*

ಮೂಲ ಕಥೆ : **ಅರ್ಷಾದ್ ಬತೇರಿ**
ಕನ್ನಡಕ್ಕೆ : **ಡಾ|| ಪಾರ್ವತಿ ಜಿ. ಐತಾಳ್**
ಅಸೋಸಿಯೇಟ್ ಪ್ರೊಫೆಸರ್, ಡಿಪಾರ್ಟ್‌ಮೆಂಟ್ ಆಫ್ ಇಂಗ್ಲಿಷ್
ಭಂಡಾರ್‌ಕರ್ಸ್ ಕಾಲೇಜು, ಕುಂದಾಪುರ - ೫೭೬ ೨೦೧

# ಬಿ. ವಿ. ಕಕ್ಕಿಲ್ಲಾಯರ ನೆನಪು

ನನ್ನ ಪ್ರಕಾರ, ನಮ್ಮ ಸಮಾಜಕ್ಕೆ ಬಿ. ವಿ. ಕಕ್ಕಿಲ್ಲಾಯರ ಅತಿ ದೊಡ್ಡ ಕೊಡುಗೆ ನವಕರ್ನಾಟಕ ಪ್ರಕಾಶನ ಸಂಸ್ಥೆಯ ಸ್ಥಾಪನೆ. ಡಾ॥ ಸುಬ್ಬರಾವ್, ಡಾ॥ ಶಾಸ್ತ್ರಿ ಹಾಗೂ ಇತರ ಸಮಾನ ಮನಸ್ಕರ ಜೊತೆಗೂಡಿ ಅವರು ಸ್ಥಾಪಿಸಿದ ಆ ಸಂಸ್ಥೆ ಕನ್ನಡ ಪುಸ್ತಕ ಪ್ರಕಾಶನ ಪ್ರಪಂಚದಲ್ಲಿ ಇಂದು ಹೆಮ್ಮರವಾಗಿ ಬೇರೂರಿದೆ. ಕನ್ನಡದಲ್ಲಿ, ಮೂರು ಸಾವಿರಕ್ಕೂ ಹೆಚ್ಚು ಮೌಲಿಕ ಪುಸ್ತಕಗಳನ್ನು ಪ್ರಕಟಿಸಿದೆ. ಪ್ರಗತಿಪರ ಪುಸ್ತಕಗಳ ಪ್ರಕಟಣೆಯಲ್ಲಂತೂ ಮುಂಚೂಣಿಯಲ್ಲಿದೆ. ತನ್ನ ಶಾಖೆಗಳ ಹಾಗೂ ಪುಸ್ತಕ ಪ್ರದರ್ಶನಗಳ ಮೂಲಕ ನಿರಂತರವಾಗಿ ಜ್ಞಾನ ಪ್ರಸಾರದ ಕೆಲಸ ಮಾಡುತ್ತಿದೆ.

ಬಿ. ವಿ. ಕಕ್ಕಿಲ್ಲಾಯರು ಇನ್ನಿಲ್ಲ. ೪ ಜೂನ್, ೨೦೧೨ರಂದು ನಮ್ಮನ್ನು ಅಗಲಿದರು. ಅವರೊಡನೆ ನನ್ನ ಗೆಳೆತನದ ಆರಂಭ ೧೯೪೧ರ ಫೆಬ್ರವರಿಯಲ್ಲಿ ಮಂಗಳೂರು ವಿದ್ಯಾರ್ಥಿ ಯೂನಿಯನ್ನಿನ ವಾರ್ಷಿಕ ಸಮ್ಮೇಳನದ ಸಂದರ್ಭದಲ್ಲಿ. ಕಕ್ಕಿಲ್ಲಾಯರು ೧೯೪೧-೪೨ರ ಅವಧಿಗೆ ವಿದ್ಯಾರ್ಥಿ ಯೂನಿಯನ್ನಿನ ಕಾರ್ಯದರ್ಶಿಯಾಗಿ ಆಯ್ಕೆಯಾದರು. ನಮ್ಮ ಕಚೇರಿ ಕೊಡಿಯಾಲಬೈಲಿನಲ್ಲಿತ್ತು. ಕಮ್ಯುನಿಸಂನ ತತ್ವಗಳನ್ನು ನಾವು ಪ್ರಚಾರ ಮಾಡಿದ್ದು ಅಲ್ಲಿಂದಲೇ. ಆ ಸಮಯದಲ್ಲಿ ಮಂಗಳೂರಿನಲ್ಲಿ ರಾಜಕೀಯವಾಗಿ ಸಕ್ರಿಯವಾಗಿದ್ದದ್ದು ನಮ್ಮ ಗುಂಪು ಮಾತ್ರ. ಆಗ ಎರಡನೆಯ ಜಾಗತಿಕ ಮಹಾಯುದ್ಧದ ಕಾಲ. ಜೀವನಾವಶ್ಯಕ ವಸ್ತುಗಳ ಬೆಲೆಗಳು ಏರುತ್ತಿದ್ದಂತೆ ಕಾಳಸಂತೆ ವ್ಯವಹಾರವೂ ಹೆಚ್ಚುತ್ತಿತ್ತು. ಅಂತಹ ಸನ್ನಿವೇಶದಲ್ಲಿ ಕಾರ್ಮಿಕರನ್ನು ಸಂಘಟಿಸಲು ನಾವು ನಿರ್ಧರಿಸಿದೆವು. ಅದರಂತೆ ಬೀಡಿ ಮತ್ತು ಕೈ ಮಗ್ಗ ಘಟಕಗಳ, ಹಂಚಿನ ಮತ್ತು ಗೇರು ಕಾರ್ಖಾನೆಯ ಮಂಗಳೂರಿನ ಹಳೆ ಬಂದರಿನ ಕೂಲಿಕಾರರನ್ನು ಸಂಘಟಿಸಲು ಶಕ್ತರಾದೆವು.

**ಅಡ್ಡೂರು ಶಿವಶಂಕರ ರಾವ್**

ವಿದ್ಯಾರ್ಥಿ ಯೂನಿಯನ್‌ನಲ್ಲಿ ನಾವು ಸಕ್ರಿಯವಾಗಿದ್ದೆವು. ಹಾಗಾಗಿ ಕಾರ್ಮಿಕ ಸಂಘಟನೆಗಳ ಪ್ರತಿನಿಧಿಗಳನ್ನು ಸೇರಿಸಿಕೊಂಡು ಜನ ಸಂಘಟನೆಗೆ ತೊಡಗಿದೆವು. ಆಹಾರ ಧಾನ್ಯಗಳ ಕೊರತೆಯಿಂದಾಗಿ ಜನಸಾಮಾನ್ಯರು ಬಳಲುತ್ತಿದ್ದಾಗ, ರೇಷನ್ ಕಾರ್ಡ್ ನೀಡಬೇಕೆಂಬ ಬೇಡಿಕೆಯನ್ನು ಸರ್ಕಾರದ ಮುಂದಿಟ್ಟೆವು. ರೇಷನ್ ಕಾರ್ಡ್ ಎಂದರೇನು? ಅದನ್ನು ಪಡೆಯಲು ಅರ್ಹರಾದವರ ಪಟ್ಟಿ ತಯಾರಿಸುವುದು ಹೇಗೆ? ಇವೆಲ್ಲ ಆಗ ಯಾರಿಗೂ ತಿಳಿದಿರಲಿಲ್ಲ. ಹಾಗಾಗಿ ರೇಷನ್ ಕಾರ್ಡ್ ಬರೆದು, ಅರ್ಹ ವ್ಯಕ್ತಿಗಳಿಗೆ ವಿತರಿಸುವ ಕೆಲಸವನ್ನು ಮುಖ್ಯವಾಗಿ ಕಮ್ಯುನಿಸ್ಟ್ ಪಾರ್ಟಿಯ ಸದಸ್ಯರೇ ಮಾಡಬೇಕಾಯಿತು. ಇದರಿಂದಾಗಿ ಜನಸಮುದಾಯದಲ್ಲಿ ಕಮ್ಯುನಿಸ್ಟ್ ಪಾರ್ಟಿಯ ಬಗ್ಗೆ ವಿಶ್ವಾಸ ಬೆಳೆಯಿತು. ದಕ್ಷಿಣ ಕನ್ನಡದ ಕಾರ್ಕಳ, ಬಂಟ್ವಾಳ, ಪುತ್ತೂರು, ಉಡುಪಿ ಮತ್ತು ಕುಂದಾಪುರಗಳಲ್ಲಿ ಕಾರ್ಮಿಕರ ಯೂನಿಯನ್‌ಗಳನ್ನು ಆರಂಭಿಸಿದೆವು. ಬೀಡಿ, ಹಂಚು ಮತ್ತು ಗೇರು ಕಾರ್ಖಾನೆಯ ಕಾರ್ಮಿಕರನ್ನು ಸಂಘಟಿಸಿ, ತುಟ್ಟಿಭತ್ತೆ ಮತ್ತು ಬೋನಸ್ ಪಾವತಿಗಾಗಿ ಹೋರಾಟ ಆರಂಭಿಸಿದೆವು. ಈ ಎಲ್ಲ ಕೆಲಸ ಕಾರ್ಯಗಳನ್ನು ಮುಂದೊತ್ತಲು ಹೊಸ ರೀತಿಯ ಚಿಂತನೆ ಮಾಡಬಲ್ಲ ನಾಯಕರ ಅಗತ್ಯವಿತ್ತು. ಆಯಾ ಕೈಗಾರಿಕೆಗಳ ಸಮಸ್ಯೆಯನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯ ಅವರಿಗೆ ಬೇಕಾಗಿತ್ತು. ಅಂತಹ ಸಮಯದಲ್ಲಿ ಕಾರ್ಮಿಕ ಸಂಘಟನೆಗಳ ಮುಂದಾಳುತನ ವಹಿಸಿದವರು ಬಿ. ವಿ. ಕಕ್ಕಿಲ್ಲಾಯರು ಮತ್ತು ಶಾಂತಾರಾಮ್ ಪೈ. ಅವರಿಗೆ ಬಿ. ಎಸ್. ಮುಂಡ್ಕೂರು, ಎಸ್. ಆರ್. ಭಟ್, ಪಿ. ಎಂ. ನಾರಾಯಣ ಮೂರ್ತಿ, ಸಿಂಪ್ಸನ್ ಸೋನ್ಸ್, ಕೇಶವ ಕಾಮತ್ ಮತ್ತು ಮೋನಪ್ಪ ಶೆಟ್ಟಿ ಇವರ ಸಮರ್ಥ ಬೆಂಬಲ. ಪ್ರತಿಭಟನಾ ಕಾರ್ಯಕ್ರಮಗಳ ಜೊತೆಗೆ ಜನಸಮುದಾಯದ ಸಂಘಟನೆಯನ್ನು ಬಲಪಡಿಸಬೇಕಾಗಿತ್ತು. ಈ ಕಾಯಕದಲ್ಲಿ ಮುಂಚೂಣಿಗೆ ನಿಂತವರು ಬಿ. ವಿ. ಕಕ್ಕಿಲ್ಲಾಯರು ಮತ್ತು ಶಾಂತಾರಾಮ ಪೈ.

ಬಿ. ವಿ. ಕಕ್ಕಿಲ್ಲಾಯರು ಉತ್ತಮ ಭಾಷಣಕಾರ. ಕಾರ್ಮಿಕರಿಗೆ ಅವರ ಬಗ್ಗೆ ತುಂಬ ಅಭಿಮಾನ. ಅವರ ಲೇಖನಿಯಿಂದ ಕಾರ್ಮಿಕರ ಹಕ್ಕೊತ್ತಾಯದ ಪತ್ರಗಳು ಹರಿತವಾಗಿ ಮೂಡಿಬರುತ್ತಿದ್ದವು. ಕಾರ್ಮಿಕರ ಹಕ್ಕು ಮಂಡನೆ ಬಗ್ಗೆ ಕರಪತ್ರಗಳನ್ನು ರೂಪಿಸುತ್ತಿದ್ದರು. ಎಲ್ಲ ರೀತಿಯಿಂದಲೂ ಉತ್ತಮ ನಾಯಕರಾಗಿದ್ದ ಅವರು, ಕಮ್ಯುನಿಸ್ಟ್ ಪಕ್ಷವನ್ನು ಕರಾವಳಿ ಕರ್ನಾಟಕದಲ್ಲಿ ಬಲಪಡಿಸುವ ಜವಾಬ್ದಾರಿ ವಹಿಸಿಕೊಂಡರು. ಅನಂತರ ೧೯೫೨ರಲ್ಲಿ




ಚುನಾವಣೆಯಲ್ಲಿ ಅವರ ಯೋಗ್ಯತೆಯನ್ನು ಕಮ್ಯುನಿಸ್ಟ್ ಪಕ್ಷ ಗುರುತಿಸಿತು. ಅವರು ರಾಜ್ಯ ಸಭೆಯ ಸದಸ್ಯರಾಗಿ ಚುನಾಯಿತರಾದರು. ಸಂಸದನಾಗಿ ಯಶಸ್ವಿಯಾಗಿ ಕಾರ್ಯ ನಿರ್ವಹಿಸಿದ ಅವರಿಂದಾಗಿ ಕರ್ನಾಟಕಕ್ಕೆ ಸಹಾಯವಾಯಿತು. ಕರ್ನಾಟಕದ ಕರಾವಳಿಯಲ್ಲಿ ಕಮ್ಯುನಿಸ್ಟ್ ಪಕ್ಷದ ಚಟುವಟಿಕೆಗಳನ್ನು ಮುನ್ನಡೆಸುತ್ತಿದ್ದ ಬಿ. ವಿ. ಕಕ್ಕಿಲ್ಲಾಯರನ್ನು ೧೯೪೨ರಲ್ಲಿ ಬಂಧಿಸ ಲಾಯಿತು. ಆಗ ವಿಚಾರಣಾಧೀನ ಖೈದಿಯಾಗಿ ಕೆಲವು ತಿಂಗಳು ಸೆರೆಮನೆಯಲ್ಲಿದ್ದರು. ೧೯೪೬ರಲ್ಲಿ ಪುನಃ ಅವರನ್ನು ಇತರ ನಾಲ್ವರೊಂದಿಗೆ ಬಂಧಿಸಿ ಕಣ್ಣಾನೂರು ಜೈಲಿನಲ್ಲಿ ಇರಿಸಲಾಯಿತು. ಮತ್ತೆ ಮತ್ತೆ ಬಂಧನಕ್ಕೆ ಒಳಗಾಗುತ್ತಿದ್ದ ಬಿ. ವಿ. ಕಕ್ಕಿಲ್ಲಾಯರು ಪ್ರತಿಭಟನೆಗಳಲ್ಲಿ ಭಾಗವಹಿಸ ಬಾರದೆಂದು ಅವರಿಗೆ ಅಣ್ಣಂದಿರಿಂದ ಬಹಳ ಒತ್ತಾಯವಿತ್ತು. ಆದರೆ ಕ್ರಮೇಣ ಈ ವಿಚಾರದಲ್ಲಿ ಅವರ ಅಣ್ಣಂದಿರು ಕೈ ಚೆಲ್ಲಿದರು. ಯಾಕೆಂದರೆ ಆಂದೋಲನಕ್ಕೆ ಪ್ರಬಲ ನಿಷ್ಠೆ ಹೊಂದಿದ್ದ ಬಿ. ವಿ. ಕಕ್ಕಿಲ್ಲಾಯರು ತಮ್ಮ ಧೋರಣೆ ಬದಲಾಯಿಸಲು ತಯಾರಿರಲಿಲ್ಲ. ಗೋವಾ ಬಿಡುಗಡೆ ಸತ್ಯಾಗ್ರಹದಲ್ಲಿ ಅವರು ಪಾಲ್ಗೊಂಡರು.

೧೯೪೮ರಿಂದ ೧೯೫೧ರವರೆಗೆ ಕಮ್ಯುನಿಸ್ಟ್ ಪಕ್ಷದ ಚಟುವಟಿಕೆಗಳಿಗೆ ನಿಷೇಧವಿದ್ದಾಗ ಅವರು ಭೂಗತರಾಗಿ ಚಟುವಟಿಕೆಯಿಂದಿದ್ದರು - ಮೊದಲು ದಕ್ಷಿಣ ಕನ್ನಡದಲ್ಲಿ, ಅನಂತರ ದಾವಣಗೆರೆಯಲ್ಲಿ. ದಕ್ಷಿಣ ಕನ್ನಡದಲ್ಲಿ ಅವರ ಬಂಧನಕ್ಕೆ ಪೊಲೀಸರು ಬಲೆ ಬೀಸಿದ್ದರು. ಅವರೊಮ್ಮೆ ರೈಲ್ವೇ ಹಳಿಯ ಗುಂಟ ನಡೆದುಹೋಗುತ್ತಿದ್ದಾಗ, ಕೆಲವು ಪೊಲೀಸರು ಅವರ ಬೆನ್ನುಹತ್ತಿದರು. ಕಕ್ಕಿಲ್ಲಾಯರು ಬೇಗ ಬೇಗ ಹೆಜ್ಜೆ ಹಾಕತೊಡಗಿದಾಗ ಪೊಲೀಸರು ಚುರುಕಾಗಿ ಮುಂದೊತ್ತಿದರು. ಪೊಲೀಸರು ಹತ್ತಿರ ಬರುತ್ತಿದ್ದಂತೆ ಕಕ್ಕಿಲ್ಲಾಯರು ರೈಲ್ವೇ ಹಳಿಗಳ ಪಕ್ಕದ ಇಳಿಜಾರಿನಲ್ಲಿ ಜಿಗಿದರು. ಅಲ್ಲಿ ಕೆಳಗೆ ಬಯಲಿನಲ್ಲಿ ಬಯಲಾಟ ನಡೆಯುತ್ತಿತ್ತು. ಅಲ್ಲಿದ್ದ ಕಮ್ಯುನಿಸ್ಟ್ ಪಾರ್ಟಿಯ ಹಲವು ಕಾರ್ಯಕರ್ತರು ಜಿಗಿದು ಗಾಯಗೊಂಡಿದ್ದ ಕಕ್ಕಿಲ್ಲಾಯರನ್ನು ಗುರುತಿಸಿದರು. ಅವರೆಲ್ಲ ಸೇರಿ ಕಕ್ಕಿಲ್ಲಾಯರನ್ನು ಪಕ್ಕಕ್ಕೆ ಕರೆದೊಯ್ದು ಅವಿತಿಟ್ಟರು. ಪೊಲೀಸರು ಅಲ್ಲಿಗೆ ಬಂದು ಹುಡುಕಾಡಿದರೂ ಅವರಿಗೆ ಕಕ್ಕಿಲ್ಲಾಯರನ್ನು ಪತ್ತೆಮಾಡಲು ಸಾಧ್ಯವಾಗಲಿಲ್ಲ. ''ರೈಲ್ವೇ ಹಳಿಯಿಂದ ಕೆಳಗೆ ಹಾರಿದವರು ಕಕ್ಕಿಲ್ಲಾಯರೇ, ಬೇರಾರೂ ಅಲ್ಲ'' ಎಂದು ಮಾತನಾಡಿಕೊಳ್ಳುತ್ತಾ ಪೊಲೀಸರು ಅಲ್ಲಿಂದ ಹೊರಟುಹೋದರು.

ಭೂಗತರಾಗಿದ್ದ ದಿನಗಳಲ್ಲಿ ಕಕ್ಕಿಲ್ಲಾಯರು ಕಮ್ಯುನಿಸ್ಟ್ ಪಕ್ಷದ ಕಾರ್ಯಕರ್ತರೊಂದಿಗೆ ವಾಸಮಾಡುತ್ತಿದ್ದರು. ಆಗ ಅವರು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ನಡೆದೇ ಹೋಗುತ್ತಿದ್ದರು. ಒಮ್ಮೆ ಕೊಡಗಿನ ಗಡಿಯವರೆಗೆ ಕಾಲ್ನಡಿಗೆಯಲ್ಲಿಯೇ ಹೋಗಿದ್ದರು.

ನಾನು ದಾವಣಗೆರೆಯಲ್ಲಿ ಭೂಗತನಾಗಿದ್ದು, ಕಮ್ಯುನಿಸ್ಟ್ ಪಕ್ಷವನ್ನು ಬಲಪಡಿಸುವ ಕೆಲಸದಲ್ಲಿ ತೊಡಗಿದ್ದೆ. ಅಲ್ಲಿ ನಾನು ವಡ್ಡರ ಮನೆಯಲ್ಲಿ ವಾಸಿಸುತ್ತಿದ್ದೆ. ಕಕ್ಕಿಲ್ಲಾಯರು ಅಲ್ಲಿಂದ ನನ್ನನ್ನು ಭದ್ರಾವತಿಗೆ ಕಳಿಸಿದರು. ನಾನು ಭದ್ರಾವತಿಯಲ್ಲಿ ಕಾರ್ಮಿಕ ಸಂಘಟನೆಗೆ ಅಡಿಪಾಯ ಹಾಕತೊಡಗಿದೆ. ಬಿ. ವಿ. ಕಕ್ಕಿಲ್ಲಾಯರು ದಾವಣಗೆರೆಯಲ್ಲಿ ಸಂಘಟನೆ ಬಲಪಡಿಸುವ ಕೆಲಸ ಮುಂದುವರಿಸಿದರು. ಅವರು ಅಲ್ಲೊಂದು ಮನೆಯಲ್ಲಿ ಭೂಗತವಾಗಿದ್ದು ಪಕ್ಷದ ಕೆಲಸ ಮಾಡುತ್ತಿದ್ದರು. ಅವರಿಗೆ ಪತ್ರಗಳು ಬರುತ್ತಿದ್ದವು. ಅಂಚೆ ಇಲಾಖೆಯ ನೆರವಿನಿಂದ ಆ ಪತ್ರಗಳ ಜಾಡು ಹಿಡಿದು ಪೊಲೀಸರು ಅವರ ನೆಲೆಯನ್ನು ಪತ್ತೆಮಾಡಿ ಅವರನ್ನು ಪುನಃ ಬಂಧಿಸಿದರು. ಆಗ ದಾವಣಗೆರೆಯ ಸಬ್‌ಜೈಲಿನಲ್ಲಿ ಬೆಂಗಳೂರಿನ ಶ್ರೀಕಾಂತೇಶ್ವರರ ಜೊತೆ ಕಕ್ಕಿಲ್ಲಾಯರಿಗೆ ಜೈಲುವಾಸ. ಆ ಸಬ್‌ಜೈಲಿನಿಂದ ತಪ್ಪಿಸಿಕೊಂಡದ್ದು ಬಿ. ವಿ. ಕಕ್ಕಿಲ್ಲಾಯರ ಸಾಹಸ ಪ್ರವೃತ್ತಿಗೆ ನಿದರ್ಶನ. ಕಿಟಕಿಯ ಸರಳುಗಳನ್ನು ಕತ್ತರಿಸಿ ಅವರು ಸಬ್‌ಜೈಲಿನಿಂದ ಸಂಗಾತಿಯ ಜೊತೆ ಹೊರಬಂದರು. ಅವರಿಗೆ ಜೈಲಿನ ಹೊರಗಡೆಯಿಂದ ಯಾರೂ ಸಹಾಯಮಾಡಿರಲಿಲ್ಲ. ಅವರಿಬ್ಬರು ರೈಲು ಹಳಿಯ ಪಕ್ಕದಲ್ಲೇ ನಡೆದುಕೊಂಡು ಹೋಗಿ, ತುಂಗಭದ್ರಾ ನದಿ ದಾಟಿದರು. ಅನಂತರ ತೆಲಗಿಯಲ್ಲಿ ರೈಲು ಹತ್ತಿದಾಗ ಪೊಲೀಸರು ಅವರನ್ನು ಪುನಃ ಬಂಧಿಸಿ ರಾಣೆಬೆನ್ನೂರು ಸಬ್‌ಜೈಲಿಗೆ ಒಯ್ದರು. ಅಲ್ಲಿಂದ ಅವರನ್ನು ಬೆಂಗಳೂರಿನ ಜೈಲಿಗೆ ಒಯ್ದು ಬಂಧನದಲ್ಲಿ ಇರಿಸಲಾಯಿತು. ಅಂತೂ ೧೯೫೧ರಲ್ಲಿ ಮಹಾಚುನಾವಣೆಯ ಸಂದರ್ಭದಲ್ಲಿ ಅವರನ್ನು ಬಿಡುಗಡೆ ಮಾಡಲಾಯಿತು.

ಜೈಲಿನಿಂದ ಬಿಡುಗಡೆಯಾದ ಬಳಿಕ ಅವರು ದಕ್ಷಿಣ ಕನ್ನಡಕ್ಕೆ ಹಿಂತಿರುಗಿ, ಕಮ್ಯುನಿಸ್ಟ್ ಪಕ್ಷವನ್ನು ಬಲಪಡಿಸುವ ಜವಾಬ್ದಾರಿ ವಹಿಸಿದರು. ಲೋಕಸಭಾ ಚುನಾವಣೆಗೆ ನಾಮಪತ್ರ ಸಲ್ಲಿಸಿದರು. ಅನಂತರ ಹಿಂತೆಗೆದುಕೊಂಡರು. ಲೋಕಸಭಾ ಚುನಾವಣೆಯಲ್ಲಿ ಪಕ್ಷದ ಪ್ರಚಾರದ ಹೊಣೆಹೊತ್ತರು. ಮಂಗಳೂರು, ಬಂಟ್ವಾಳ ಮತ್ತು ಮಂಜೇಶ್ವರ ತಾಲೂಕುಗಳಲ್ಲಿ ತಳಮಟ್ಟದಲ್ಲಿ ಚುನಾವಣಾ ಪ್ರಚಾರ ನಿರ್ವಹಿಸಿದರು.

ಆ ಚುನಾವಣೆಯಲ್ಲಿ ಕಮ್ಯೂನಿಸ್ಟ್ ಪಕ್ಷಕ್ಕೆ ಹಿನ್ನಡೆ ಉಂಟಾಯಿತು. ಆದರೆ ಬಿ. ವಿ. ಕಕ್ಕಿಲ್ಲಾಯರ ಉತ್ಸಾಹ ಕುಗ್ಗಲಿಲ್ಲ. ಅವರು ಕಮ್ಯುನಿಸ್ಟ್ ಪಕ್ಷದ ಚಟುವಟಿಕೆಗಳನ್ನು ನಿರಂತರವಾಗಿ ಮುಂದುವರಿಸಿದರು.

ಅನಂತರ ಅವರು ರಾಜ್ಯಸಭೆಗೆ ಆಯ್ಕೆಯಾಗಿ, ಅಲ್ಲಿ ಕರ್ನಾಟಕವನ್ನು ಸಮರ್ಥವಾಗಿ ಪ್ರತಿನಿಧಿಸಿದುದು ಈಗ ಇತಿಹಾಸ. ಎರಡು ವರುಷ ರಾಜ್ಯಸಭಾ ಸದಸ್ಯರಾಗಿದ್ದಾಗ, ಕರ್ನಾಟಕದಲ್ಲಿ ಕಮ್ಯುನಿಸ್ಟ್ ಪಕ್ಷದ ಪ್ರಭಾವ ಹೆಚ್ಚಿಸಲು ಕಾರಣರಾದರು. ೧೯೬೦-೬೧ರ ಭಾರೀ ಮಳೆಯಲ್ಲಿ ಮಂಗಳೂರಿನ ಕಮ್ಯುನಿಸ್ಟ್ ಪಕ್ಷದ ಕಚೇರಿ ಬಿದ್ದುಹೋಯಿತು. ಅನಂತರ ಪಕ್ಷದ ಕಚೇರಿಯನ್ನು ಉರ್ವ ಮಾರ್ಕೆಟ್ಟಿನ ಹತ್ತಿರದ ಕಾಂಪೌಂಡಿಗೆ ಸ್ಥಳಾಂತರಿಸಲಾಯಿತು. ಅದರ ಪಕ್ಕದ ಮನೆಯಲ್ಲಿ ನನ್ನ ಪತ್ನಿ ಸುಶೀಲಳ ತಂಗಿ ಅಹಲ್ಯ ಮತ್ತು ತಮ್ಮಂದಿರು ವಾಸವಾಗಿದ್ದರು. ಕ್ರಮೇಣ ಅವರಿಗೆ ಪರಿಚಯವಾಗಿ ೧೯೬೪ರಲ್ಲಿ ಬಿ. ವಿ. ಕಕ್ಕಿಲ್ಲಾಯ ಮತ್ತು ಅಹಲ್ಯ ವಿವಾಹವಾದರು.

ಅನಂತರ ಅವರು ಮಂಗಳೂರಿನಲ್ಲಿ, ಮುಂದೆ ಬೆಂಗಳೂರಿನಲ್ಲಿ ಮನೆ ಮಾಡಿಕೊಂಡು ಕಮ್ಯುನಿಸ್ಟ್ ಪಕ್ಷದ ಚಟುವಟಿಕೆಯನ್ನು ಮುಂದುವರಿಸಿದರು. ತದನಂತರ, ಕೇರಳದ ಬದಿಯಡ್ಕದಲ್ಲಿ ತಮ್ಮ ಮಿಂಚಿಪದವಿನ ಜಮೀನಿನ ಹತ್ತಿರ ವಾಸವಾಗಿದ್ದರು. ಅಷ್ಟರಲ್ಲಿ ಕರ್ನಾಟಕ ವಿಧಾನಸಭಾ ಚುನಾವಣೆ ನಿಗದಿಯಾಯಿತು.

ಬಂಟ್ವಾಳ ಕ್ಷೇತ್ರದಿಂದ ಬಿ. ವಿ. ಕಕ್ಕಿಲ್ಲಾಯರು ಸ್ಪರ್ಧಿಸಿ (ಕಾಂಗ್ರೆಸ್ ಪಾರ್ಟಿ ಸಹಯೋಗದಲ್ಲಿ) ಗೆದ್ದರು.

ಶಾಸಕರಾಗಿ ಚುನಾಯಿತರಾದ ಬಳಿಕ ಬಿ. ವಿ. ಕಕ್ಕಿಲ್ಲಾಯರು ಹೊಸ ಜವಾಬ್ದಾರಿಗಳನ್ನು ಸಮರ್ಥವಾಗಿ ನಿರ್ವಹಿಸಿದರು.

ನನ್ನ ಪ್ರಕಾರ, ನಮ್ಮ ಸಮಾಜಕ್ಕೆ ಬಿ. ವಿ. ಕಕ್ಕಿಲ್ಲಾಯರ ಅತಿ ದೊಡ್ಡ ಕೊಡುಗೆ ನವಕರ್ನಾಟಕ ಪ್ರಕಾಶನ ಸಂಸ್ಥೆಯ ಸ್ಥಾಪನೆ. ಡಾ॥ ಸುಬ್ಬರಾವ್, ಡಾ॥ ಶಾಸ್ತ್ರಿ ಹಾಗೂ ಇತರ ಸಮಾನ ಮನಸ್ಕರ ಜೊತೆಗೂಡಿ ಅವರು ಸ್ಥಾಪಿಸಿದ ಆ ಸಂಸ್ಥೆ ಕನ್ನಡ ಪುಸ್ತಕ ಪ್ರಕಾಶನ ಪ್ರಪಂಚದಲ್ಲಿ ಇಂದು ಹೆಮ್ಮರವಾಗಿ ಬೇರೂರಿದೆ. ಕನ್ನಡದಲ್ಲಿ, ಮೂರು ಸಾವಿರಕ್ಕೂ ಹೆಚ್ಚು ಮೌಲಿಕ ಪುಸ್ತಕಗಳನ್ನು ಪ್ರಕಟಿಸಿದೆ. ಪ್ರಗತಿಪರ ಪುಸ್ತಕಗಳ ಪ್ರಕಟಣೆಯಲ್ಲಂತೂ ಮುಂಚೂಣಿಯಲ್ಲಿದೆ. ತನ್ನ ಶಾಖೆಗಳ ಹಾಗೂ ಪುಸ್ತಕ ಪ್ರದರ್ಶನಗಳ ಮೂಲಕ ನಿರಂತರವಾಗಿ ಜ್ಞಾನ ಪ್ರಸಾರದ ಕೆಲಸ ಮಾಡುತ್ತಿದೆ.

ಬಿ. ವಿ. ಕಕ್ಕಿಲ್ಲಾಯರು ನಮ್ಮನ್ನು ಅಗಲಿದ್ದಾರೆ. ಆದರೆ ಅವರು ಮಾಡಿದ ಮೌಲಿಕ ಕೆಲಸಗಳಿಗೆ ಅಳಿವಿಲ್ಲ. ತಮ್ಮ ಪುಸ್ತಕಗಳ ಮೂಲಕ ಅವರು ಬಹುಕಾಲ ಬಾಳುತ್ತಾರೆ.

**ಅಡ್ಡೂರು ಶಿವಶಂಕರ ರಾವ್**
'ಸುಮ', ೫ನೇ ಅಡ್ಡರಸ್ತೆ, ಬಿಜೈ ಹೊಸ ರಸ್ತೆ
ಮಂಗಳೂರು - ೫೭೫ ೦೦೫

## ರೂಪರ್ಟ್ ಮುರ್ಡೋಕ್ ಎಂಬ ಮಾಧ್ಯಮ ಭಕ್ಷಕ

**ಬಂ**ಡವಾಳಶಾಹಿ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ವೃತ್ತಪತ್ರಿಕೆಗಳು ಮತ್ತು ವಿದ್ಯುನ್ಮಾನ ಮಾಧ್ಯಮಗಳ ಪ್ರಭಾವ ಅಗಾಧ. ಜನಾಭಿಪ್ರಾಯ ಮೂಡಿಸುವುದರಲ್ಲಿ, ಜನನಾಯಕರನ್ನು ಪೋಷಿಸಿ, ಬೆಳೆಸುವುದರಲ್ಲಿ, ರಾಜಕೀಯ ಪ್ರಭಾವ ಬೀರುವಲ್ಲಿ ಮಾಧ್ಯಮಗಳ ಪಾತ್ರ ಹಿರಿದು. ಇಂಥ ಪ್ರಬಲ ಅಸ್ತ್ರ ಉದ್ಯಮಪತಿಗಳ ಕೈಗೆ ಸಿಕ್ಕಾಗ, ಅದರ ದುರುಪಯೋಗವನ್ನು ಅಂದಾಜು ಮಾಡುವುದು ಕಷ್ಟ. ಪ್ರಜಾಪ್ರಭುತ್ವದ ನಾಲ್ಕನೆಯ ಆಧಾರ ಎನ್ನುವ ಮಾಧ್ಯಮ ದೊಡ್ಡ ಉದ್ಯಮಿಗಳ ಹಿಡಿತಕ್ಕೆ ಸಿಕ್ಕಾಗ ಅದು ಪತ್ರಿಕಾಸ್ವಾತಂತ್ರ್ಯಕ್ಕೆ ಧಕ್ಕೆ ತರುತ್ತದೆ. ಉದ್ಯಮಗಳ ಲಾಭಕೋರತನಕ್ಕೆ ಬಳಕೆಯಾಗುತ್ತದೆ. ಓದುಗರನ್ನು, ನೋಡುಗರನ್ನು ಆಕರ್ಷಿಸಲು ಉತ್ಪ್ರೇಕ್ಷೆ, ಅನಗತ್ಯ ರಂಜನೆ ಹೆಚ್ಚುತ್ತದೆ. ಇಂಥ ಸುದ್ದಿಗಳನ್ನು ಸೃಷ್ಟಿಸಲು ಅಕ್ರಮ ವಿಧಾನಗಳಿಗೆ ಶರಣಾಗುವುದು ಅನಿವಾರ್ಯವಾಗುತ್ತದೆ. ಇದಕ್ಕೆ ಉದಾಹರಣೆಗಳು ಬೇಕಾದಷ್ಟು ದೊರೆಯುತ್ತವೆ. ಭಾರತದ ರಕ್ಷಣಾ ಸಚಿವರಾಗಿದ್ದ ವಿ. ಕೆ. ಕೃಷ್ಣ ಮೆನನ್ ಅಂಥ ಗುತ್ತೇದಾರಿ ಪತ್ರಿಕೆಗಳನ್ನು 'ಜೂಟ್ ಪ್ರೆಸ್' ಎಂದು ಕರೆಯುತ್ತಿದ್ದರು.

ಪ್ರಿಂಟ್ ಮತ್ತು ಇಲೆಕ್ಟ್ರಾನಿಕ್ ಮಾಧ್ಯಮದ ದುರುಪಯೋಗಕ್ಕೆ, ಅಕ್ರಮಗಳಿಗೆ ಇನ್ನೊಂದು ಹೆಸರು ರೂಪರ್ಟ್ ಮುರ್ಡೋಕ್. ಈತ ಕಳೆದ ನಾಲ್ಕೈದು ದಶಕಗಳಲ್ಲಿ ಕಬಳಿಸಿರುವ ವೃತ್ತಪತ್ರಿಕೆಗಳು ಮತ್ತು ಇಲೆಕ್ಟ್ರಾನಿಕ್ ಮಾಧ್ಯಮಗಳಿಗೆ ಲೆಕ್ಕವಿಲ್ಲ. ಆಸ್ಟ್ರೇಲಿಯಾ ಮೂಲದ ಈತನ ಜಾಲ ಆಸ್ಟ್ರೇಲಿಯಾ, ಅಮೆರಿಕ ಮತ್ತು ಬ್ರಿಟನ್‌ಗಳಿಗೆ ವ್ಯಾಪಿಸಿದೆ. ಬ್ರಿಟಿಷ್ ಸರಕಾರವನ್ನು ತನ್ನ ಮುಷ್ಟಿಯಲ್ಲಿರಿಸಿಕೊಂಡಿದ್ದ ಮಾಧ್ಯಮ ಮಹಾಭಕ್ಷಕನ ಅಕ್ರಮ ಚಟುವಟಿಕೆಗಳು ಈಗ ಬಯಲಾಗಿವೆ. ಬ್ರಿಟನ್ನಿನ ಜನಪ್ರಿಯ ಪತ್ರಿಕೆಗಳಾದ ದಿ ಸನ್, ದಿ ಟೈಂಸ್, ದಿ ಸಂಡೇ ಟೈಂಸ್ ಮೊದಲಾದವನ್ನು ಪಡೆದುಕೊಂಡ ಮುರ್ಡೋಕ್ ಅವನ್ನು ತನ್ನ ಉದ್ಯಮಗಳ ಸಾಮ್ರಾಜ್ಯದ ವಿಸ್ತರಣೆಗೆ ಬಳಸಿಕೊಂಡ. ಪತ್ರಿಕೆಗಳು ತನಗೆ ಪ್ರಾಬಲ್ಯ ನೀಡುವುದೆಂಬುದನ್ನು ಚೆನ್ನಾಗಿ ತಿಳಿದುಕೊಂಡಿದ್ದ ಈತ ರಾಜಕೀಯವಾಗಿ ಅದನ್ನೂ ತನ್ನ ಸ್ವಂತ ಹಿತಾಸಕ್ತಿಗಾಗಿ ಬಳಸಿಕೊಂಡ. ಬ್ರಿಟನ್ನಿನಲ್ಲಿ ಮಾರ್ಗರೆಟ್ ಥ್ಯಾಚರ್ ಅಧಿಕಾರದಲ್ಲಿದ್ದಾಗ ಆಕೆಯೊಂದಿಗೆ ಗೆಳೆತನ ಸಾಧಿಸಿದ ಮುರ್ಡೋಕ್ ಟೋನಿ ಬ್ಲೇರ್ ಮತ್ತು ಡೇವಿಡ್ ಕ್ಯಾಮರೂನ್, ಈ ಇಬ್ಬರು ಪ್ರಧಾನಿಗಳನ್ನು ತನ್ನ ಜೇಬಿನಲ್ಲೇ ಇರಿಸಿಕೊಂಡಿದ್ದ ಎನ್ನಲಾಗಿದೆ. ತನ್ನ ಪತ್ರಿಕಾಸಮೂಹದ ಪ್ರಸಾರ ಹೆಚ್ಚಿಸಲು ಈತ ಪ್ರತಿಷ್ಠಿತರ ಟೆಲಿಫೋನ್ ಕದ್ದಾಲಿಕೆ, ಕೊಲೆ ಮೊದಲಾದ ಅಕ್ರಮಗಳನ್ನು ನಡೆಸಿದ್ದನೆಂಬ ಆರೋಪಗಳನ್ನು ಎದುರಿಸುತ್ತಿದ್ದಾನೆ. ಪತ್ರಕರ್ತರನ್ನು ತನಗೆ ಬೇಕಾದ ಹಾಗೆ ಬಳಸಿಕೊಂಡಿರುವ ಭೂಪ ಈತ. ಎಂಬತ್ತು ವಯಸ್ಸಿನ ಈತ ಈಗ ಬ್ರಿಟನ್ನಿನ ತನ್ನ ವ್ಯೂಹದಿಂದ ಹೊರಬರಲು ನಿಶ್ಚಯಿಸಿದ್ದಾನೆ. ಕಂಪೆನಿಗಳ ಅಧಿಕಾರಸ್ಥಾನದಿಂದ ಇಳಿದರೂ ಈತನ ಪ್ರಭಾವವೇನೂ ಕಮ್ಮಿಯಾಗದು.




ಮೀಡಿಯ ಮೊಗಲ್ ಎಂದು ಪ್ರಖ್ಯಾತನಾಗಿರುವ ಮುರ್ಡೋಕ್ ಹುಟ್ಟಿದ್ದು ಆಸ್ಟ್ರೇಲಿಯದಲ್ಲಿ (೧೯೩೧) ನೆಲೆಸಿದ್ದು ಅಮೆರಿಕದಲ್ಲಿ. ವ್ಯವಹಾರ ನಡೆಸಿದ್ದು ಮೂರು ಖಂಡಗಳಲ್ಲಿ – ಆಸ್ಟ್ರೇಲಿಯ, ಅಮೆರಿಕ, ಯೂರೋಪು (ಮುಖ್ಯವಾಗಿ ಬ್ರಿಟನ್). ೧೯೫೨ರಲ್ಲಿ ಪತ್ರಿಕಾಮಾಧ್ಯಮ ಪ್ರವೇಶಿಸಿದ ಈತ ೧೯೬೦ರಲ್ಲಿ ಗ್ಲೋಬಲ್ ಮೀಡಿಯ ಎಂಬ ಕಂಪನಿ ಹುಟ್ಟುಹಾಕಿ ಪತ್ರಿಕೆಗಳನ್ನು ನುಂಗಲು ಪ್ರಾರಂಭಿಸಿದ. ೧೯೮೫ರಲ್ಲಿ ಅಮೆರಿಕದ ನಾಗರಿಕನಾದ ಈತ, ಅಮೆರಿಕದ ಟೈಮ್ಸ್ ಮ್ಯಾಗಝೀನ್, ಹಾರ್ಪರ್ ಕಾಲಿನ್ಸ್ ಪ್ರಕಾಶನ ಸಂಸ್ಥೆ, ವಾಲ್‌ಸ್ಟ್ರೀಟ್ ಜರ್ನಲ್ (ದಿನಪತ್ರಿಕೆ/ಟ್ವೆಂಟಿಯೆತ್ ಸೆಂಚುರಿ ಫಾಕ್ಸ್ ಸಿನಿಮಾ ಸ್ಟುಡಿಯೋ ಮೊದಲಾದವುಗಳನ್ನು ಪಡೆದುಕೊಂಡ. ಬ್ರಿಟನ್ನಿನ ಮಾಧ್ಯಮಗಳ ಒಡೆತನ ಪಡೆದುಕೊಂಡು ೧೯೮೬ರಲ್ಲಿ ಇಲೆಕ್ಟ್ರಾನಿಕ್ ಮಾಧ್ಯಮಗಳ ಕ್ಷೇತ್ರ ಪ್ರವೇಶಿಸಿದ. ೨೧ನೇ ಶತಮಾನದ ಪ್ರಾರಂಭದ ಹೊತ್ತಿಗೆ ಮುರ್ಡೋಕ್‌ನ ಸಾಮ್ರಾಜ್ಯ ೮೦೦ ಕಂಪೆನಿಗಳ ಒಡೆತನ ಹೊಂದಿತ್ತು ಮೂರೂ ಖಂಡಗಳಲ್ಲಿ . ಈತನ ವ್ಯವಹಾರ ೫೦ ದೇಶಗಳಿಗೆ ವಿಸ್ತರಿಸಿದ್ದು, ಒಟ್ಟು ವಹಿವಾಟು ಐದು ಬಿಲಿಯ ಡಾಲರುಗಳಷ್ಟಾಗಿತ್ತು ವರ್ಷಕ್ಕೆ. ಈತನ ಅವ್ಯವಹಾರ ಬಹಿರಂಗಗೊಂಡದ್ದು ೨೦೧೧ರಲ್ಲಿ ಬ್ರಿಟನ್ನಿನಲ್ಲಿ. ಈತ ತೆರೆಯ ಹಿಂದೆ ಸರಿದರೂ ಸೂತ್ರ ಮಾತ್ರ ಅವನ ಕೈಯಲ್ಲೇ ಇರುತ್ತದೆಂಬುದರಲ್ಲಿ ಸಂದೇಹವಿಲ್ಲ.

## ಜೂಲಿಯನ್ ಅಸಾಂಜ್‌ನ ಬೆನ್ನು ಹತ್ತಿರುವ ಬೇತಾಳ

**ಜೂ**ಲಿಯನ್ ಅಸಾಂಜ್ ಮೂಲತಃ ಪತ್ರಕರ್ತ. ಸರಕಾರದ ಅಕ್ರಮ, ರಹಸ್ಯ ಕಾರ್ಯಾಚರಣೆಗಳನ್ನು ಬಯಲಿಗೆಳೆಯುವುದರಲ್ಲಿ ನಿಷ್ಣಾತ. ವಿಕಿಲೀಕ್ಸ್ ವೆಬ್‌ಸೈಟ್ ಅವನು ಸ್ಥಾಪಿಸಿದ ಸಂಸ್ಥೆ. ಅಮೆರಿಕದ ವಿದೇಶಾಂಗ ಇಲಾಖೆ ಮತ್ತು ರಕ್ಷಣಾ ಇಲಾಖೆ ಪೆಂಟಗನ್‌ನ ನೂರಾರು ರಹಸ್ಯಗಳನ್ನು ಬಯಲಿಗೆಳೆದು ಪ್ರಖ್ಯಾತನಾದ. ಅವನು ಹೊರಗೆಡಹಿದ ದಾಖಲೆಗಳು ಪ್ರಪಂಚದ ಎಲ್ಲೆಡೆ ಜನರನ್ನು ದಿಗ್ಭ್ರಮೆಗೊಳಿಸಿದವು. ಅಮೆರಿಕವನ್ನು ಒಳಗೊಂಡಂತೆ ಹಲವು ದೇಶಗಳ ಆಡಳಿತವನ್ನು ಬೆಚ್ಚಿಬೀಳಿಸಿದವು. ಅಮೆರಿಕದ ಗುಪ್ತಚರ ಪಡೆ ಸಿಪಿಐ ನಡೆಸಿದ ದುಷ್ಕೃತ್ಯಗಳು, ಹಿಂಸಾಚಾರ, ವಿಧ್ವಂಸಗಳ ದೊಡ್ಡ ಪಟ್ಟಿಯೇ ದಾಖಲೆ ಸಹಿತ ಬೆಳಕಿಗೆ ಬಂದಿತು. ಒಡನೆಯೇ ಅಮೆರಿಕಾ ಸರಕಾರ ಎಚ್ಚೆತ್ತು ಅಸಾಂಜನ ಬೆನ್ನು ಹತ್ತಿತು. ರಾಷ್ಟ್ರೀಯ ಭದ್ರತೆಗೆ ಭಂಗ ತರುವ ರಹಸ್ಯ ದಾಖಲೆಗಳನ್ನು ಹೊರಗೆಡಹಿದ. ದೇಶದ್ರೋಹದ ಆಪಾದನೆಯ ಮೇಲೆ ಆತನನ್ನು ವಿಚಾರಣೆಗೆ ಗುರಿಪಡಿಸುವುದು ಉದ್ದೇಶ. ಬರಾಕ್ ಒಬಾಮಾ ಸರಕಾರ ಇದಕ್ಕಾಗಿ ವಿಶೇಷ ಜ್ಯೂರಿಯನ್ನು ನೇಮಕ ಮಾಡಿ ವಿಚಾರಣೆ ನಡೆಸಲು ತೀರ್ಮಾನಿಸಿತ್ತು. ಹಾಗೇನಾದರೂ ಆಗಿದ್ದರೆ ಅಸಾಂಜ್ ಜೀವಾವಧಿ ಅಮೆರಿಕದ ಕಾರಾಗಾರದಲ್ಲಿ ಕೊಳೆಯುತ್ತಿದ್ದ. ಈಗಲೂ ಆ ಭೀತಿ ತಪ್ಪಿಲ್ಲ.

ಅಮೆರಿಕ ಸರಕಾರದ ಕ್ರಮದ ಸೂಚನೆ ಗೊತ್ತಾಗುತ್ತಿದ್ದ ಹಾಗೆ ಅಸಾಂಜ್ ಯೂರೋಪಿನ ರಾಷ್ಟ್ರ ಸ್ವೀಡನ್ನಿಗೆ ಹೋಗಿ ನೆಲೆಸಿ ತನ್ನ ಚಟುವಟಿಕೆಗಳನ್ನು ಮುಂದುವರಿಸಿದ. ಅಮೆರಿಕದ ಒತ್ತಡಕ್ಕೆ ಸಿಲುಕಿದ ಸ್ವೀಡಿಷ್ ಸರಕಾರ ಅಸಾಂಜ್‌ನ ಮೇಲೆ ಅತ್ಯಾಚಾರದ ಆಪಾದನೆ ಹೊರಿಸಿ ತನಿಖೆಗೆ ಆದೇಶ ನೀಡಿತು. ಅತ್ಯಾಚಾರಕ್ಕೆ ಬಲಿಯಾದವರೆಂಬ ಇಬ್ಬರು ಮಹಿಳೆಯರ ದೂರೇ ಈ ಆಪಾದನೆಗೆ ಆಧಾರ. ಇದರ ಬಗ್ಗೆ ತನಿಖೆ ನಡೆಸಿದ ಪಬ್ಲಿಕ್ ಪ್ರಾಸಿಕ್ಯೂಟರ್ ಆಪಾದನೆಯಲ್ಲಿ ಏನೇನೂ ಹುರುಳಿಲ್ಲವೆಂದು ಮೊಕದ್ದಮೆಯನ್ನು ತಳ್ಳಿ ಹಾಕಿದ. ಈ ಮಧ್ಯೆ ಅಸಾಂಜ್ ತನ್ನ ಕಾರ್ಯಚಟುವಟಿಕೆಯನ್ನು ಬ್ರಿಟನ್ನಿಗೆ ವರ್ಗಾಯಿಸಿ ಲಂಡನ್‌ನಲ್ಲಿ ನೆಲೆಸಿದ. ಸ್ವೀಡಿಷ್ ಸರಕಾರ ದಿಢೀರನೆ ಬೇರೊಬ್ಬ ತನಿಖಾಧಿಕಾರಿಯನ್ನು ನೇಮಿಸಿ ಮೊಕದ್ದಮೆಯನ್ನು ಪುನರುಜ್ಜೀವನಗೊಳಿಸಿತು. ಈ ತನಿಖಾಧಿಕಾರಿ ಬ್ರಿಟನ್ನಿನಲ್ಲಿ ನೆಲೆಸಿರುವ ಆರೋಪಿ ಅಸಾಂಜ್‌ನನ್ನು ವಿಚಾರಣೆಗೆ ಒಪ್ಪಿಸಬೇಕೆಂದು ಬ್ರಿಟಿಷ್ ಸರಕಾರಕ್ಕೆ ಅರ್ಜಿ ಸಲ್ಲಿಸಿದ ಸ್ವೀಡಿಷ್ ವಿದೇಶಾಂಗ ಸಚಿವಾಲಯದ ನೆರವಿನಿಂದ. ಇಲ್ಲಿಂದ ಶುರುವಾಯಿತು ಲಂಡನ್ನಿನ ನ್ಯಾಯಾಲಯಗಳಲ್ಲಿ ಕಾನೂನಿನ ಸಮರ. ನಿಲ್ಲಲು ಶಾಶ್ವತ ನೆಲೆ ಇಲ್ಲದೆ ಅನಿಶ್ಚಿತ ವಾತಾವರಣದಲ್ಲೇ ಲಂಡನ್ನಿನಲ್ಲೇ ಕಾರ್ಯಚಟುವಟಿಕೆ ಮುಂದುವರಿಸಿದ ಅಸಾಂಜ್‌ಗೆ ಬ್ರಿಟಿಷ್ ಶ್ರೇಷ್ಠ ನ್ಯಾಯಾಲಯದ ತೀರ್ಪು ಆಘಾತಕಾರಿಯಾಯಿತು. ನ್ಯಾಯಾಲಯ ಆರೋಪಿಯನ್ನು ಸ್ವೀಡನ್ನಿಗೆ ಒಪ್ಪಿಸಲು ಆದೇಶ ನೀಡಿತು. ಹಾಗೇನಾದರೂ ಆಗಿದ್ದರೆ ಆತನ ಕತೆ ಮುಗಿದಂತೆಯೇ. ಏಕೆಂದರೆ ಈ ಹಿಂದೆ ಬ್ರಿಟನ್ ಮತ್ತು ಸ್ವೀಡನ್ ಆಶ್ರಯ ಪಡೆದಿದ್ದ ಆರೋಪಿಗಳನ್ನು ಅಮೆರಿಕಾಗೆ ಒಪ್ಪಿಸಿರುವ ಉದಾಹರಣೆಗಳಿವೆ. ಉಗ್ರಗಾಮಿಗಳೊಂದಿಗೆ ಸಂಪರ್ಕದ ಆರೋಪ ಎದುರಿಸುತ್ತಿರುವ ಅನೇಕ ಮಂದಿಯನ್ನು ಈ ರೀತಿ ಅಮೆರಿಕ ಸರಕಾರಕ್ಕೆ ಒಪ್ಪಿಸಿದ್ದು, ವಿಚಾರಣೆ ಇಲ್ಲದೆ ಅಮೆರಿಕದ ಜೈಲುಗಳಲ್ಲಿ ಕೊಳೆಯುತ್ತಿದ್ದಾರೆ. ಹಾಗಾಗಿ ಅಸಾಂಜ್ ಬೇರೆಲ್ಲಾದರೂ ಆಶ್ರಯ ಹುಡುಕಬೇಕಾಗಿ ಬಂತು. ಅಮೆರಿಕದಂಥ ಪ್ರಬಲ ರಾಷ್ಟ್ರವನ್ನು ಎದುರು ಹಾಕಿಕೊಳ್ಳಲು ಯಾವ ರಾಷ್ಟ್ರತಾನೆ ಮುಂದೆ ಬಂದೀತು ? ಆದರೂ ಆತನಿಗೆ ಆಶ್ರಯ ನೀಡಿದ್ದು ದಕ್ಷಿಣ ಅಮೆರಿಕದ ಪುಟ್ಟ ದೇಶ ಈಕ್ವೆಡಾರ್. ಈ ಜೂನ್ ತಿಂಗಳಲ್ಲಿ ಅಸಾಂಜ್ ಲಂಡನ್ನಿನಲ್ಲಿರುವ ಈಕ್ವೆಡಾರ್ ರಾಯಭಾರಿ ಕಛೇರಿಯಲ್ಲಿ ಅಡಗಿ ಕುಳಿತಿದ್ದಾನೆ. ಅಸಾಂಜ್‌ನನ್ನು ಸ್ವೀಡನ್ನಿಗೆ ಒಪ್ಪಿಸಲು ಆದೇಶ ನೀಡಿದ ಬ್ರಿಟನ್ನಿನ ನ್ಯಾಯಾಲಯ ಸಾವಿರಾರು ಜನ ಚಿಲಿಯನ್ನರನ್ನು ಕಗ್ಗೊಲೆ ಮಾಡಿದ್ದ ಚಿಲಿಯ ಸರ್ವಾಧಿಕಾರಿ ಆಗುಸ್ಟೊ ಪಿನೋಷೆಯನ್ನು ಮಾತ್ರ ಚಿಲಿಗೆ ವಿಚಾರಣೆಗೆ ಒಪ್ಪಿಸಲು ನಿರಾಕರಿಸಿದ್ದುದನ್ನು ನೆನಪಿಸಿಕೊಳ್ಳಬಹುದು. ಇದು ಬ್ರಿಟಿಷ್ ನ್ಯಾಯ ಹೇಗಿದೆ ಎನ್ನುವುದಕ್ಕೆ ಉದಾಹರಣೆ. ಬ್ರಿಟನ್ ಮತ್ತು ಇತರ ರಾಷ್ಟ್ರಗಳಲ್ಲಿ ಅಸಾಂಜ್‌ಗೆ ಬೆಂಬಲ ಸೂಚಿಸಲು ಜನ ಪ್ರದರ್ಶನಗಳನ್ನು ನಡೆಸಿದ್ದಾರೆ.

ಕಾನೂನು ಸಮರ ಮುಗಿದ ಮೇಲೆ ಈಗ ರಾಜಕೀಯ ಒತ್ತಡದ ಸಮರ ಪ್ರಾರಂಭವಾಗಿದೆ. ಮೊದಲಿನಲ್ಲಿ ಬ್ರಿಟನ್ನಿನ ಸರಕಾರ ಎಲ್ಲ ಅಂತರರಾಷ್ಟ್ರೀಯ ನಿಯಮಗಳನ್ನು ಉಲ್ಲಂಘಿಸಿ ಈಕ್ವೆಡಾರ್ ರಾಯಭಾರಿ ಕಛೇರಿಯ ಮೇಲೆ ದಾಳಿ ನಡೆಸಿ ಅಡಗಿ ಕುಳಿತಿರುವ ಜೂಲಿಯನ್ ಅಸಾಂಜ್‌ನನ್ನು ವಶಪಡಿಸಿಕೊಳ್ಳುವ ಬೆದರಿಕೆ ಹಾಕಿತು. ಪ್ರಪಂಚದಾದ್ಯಂತ ಇದಕ್ಕೆ ಬಂದ ಪ್ರತಿಕ್ರಿಯೆ ಮತ್ತು ಖಂಡನೆಗೆ ಹೆದರಿ ಸುಮ್ಮನಾಗಬೇಕಾಯಿತು. ಈಗ ದಕ್ಷಿಣ ಅಮೆರಿಕದ ಎಲ್ಲ ರಾಷ್ಟ್ರಗಳೂ ಈಕ್ವೆಡಾರ್‌ನ ಬೆಂಬಲಕ್ಕೆ ನಿಂತಿವೆ. ರಾಯಭಾರಿ ಕಛೇರಿಯ ಸಾರ್ವಭೌಮತ್ವ ಮತ್ತು ಅನುಲ್ಲಂಘನೀಯತೆಯನ್ನು ಎತ್ತಿ ಹಿಡಿದಿವೆ. ಈಕ್ವೆಡಾರ್‌ನ ಕೋರಿಕೆಯ ಮೇರೆಗೆ ಆಗಸ್ಟ್ ೨೪ರಂದು ವಾಷಿಂಗ್ಟನ್ನಿನಲ್ಲಿ ಅಮೆರಿಕದ ದೇಶಗಳ ಸಂಘಟನೆ (ಓಎಸ್-ಆರ್ಗನೈಸೇಷನ್ ಆಫ್ ಅಮೆರಿಕನ್ ಸ್ಟೇಟ್ಸ್)ಯ ಸಭೆ ನಡೆಯಿತು. ಮೂವತ್ತ ನಾಲ್ಕು ದೇಶಗಳ ಈ ಸಂಘಟನೆಯ ಸಭೆ ಬಹುಮತದಿಂದ ಈಕ್ವೆಡಾರ್‌ಗೆ ಬೆಂಬಲ ಸೂಚಿಸಿತು. ರಾಯಭಾರಿ ಕಛೇರಿಯ ಅನುಲ್ಲಂಘನೀಯತೆಯನ್ನು ಎತ್ತಿ ಹಿಡಿಯಿತು.

ಅಮೆರಿಕ ಮತ್ತು ಕೆನಡಾಗಳು ಈ ಸಭೆಯಲ್ಲಿ ಮುಖಭಂಗ ಅನುಭವಿಸಬೇಕಾಯಿತು. ಎಷ್ಟೇ ಒತ್ತಡ ತಂದರೂ ಅಮೆರಿಕದ ಪರವಾಗಿ ನಿಂತದ್ದು ಟ್ರಿನಿಡಾಡ್, ಟೊಬಾಗೊ ಮತ್ತು ಪನಾಮ ದೇಶಗಳು ಮಾತ್ರ ತನ್ನ ಮೂಗಿನ ನೇರಕ್ಕೆ ನಡೆದುಕೊಳ್ಳುವ ಸಂಸ್ಥೆ ಎಂದು ಅಮೆರಿಕ ಪರಿಗಣಿಸಿದ್ದ ಈ ಓಎಸ್‌ನಲ್ಲಿ ಇಂಥ ಮುಖಭಂಗವನ್ನು ಎಂದೂ ಎದುರಿಸಲಿಲ್ಲ. ಈಕ್ವೆಡಾರ್‌ನ ಬೆಂಬಲಕ್ಕೆ 'ಬೊಲಿವಿಯನ್ ಆಲ್ಟರ್‌ನೇಟಿವ್ ಫಾರ್ ಅಮೆರಿಕಾಸ್' (ಎಎಲ್‌ಬಿಎ) ಸಂಸ್ಥೆ ಕೂಡ ನಿಂತಿದೆ. ಈ ಸಂಸ್ಥೆಯ ಸದಸ್ಯ ರಾಷ್ಟ್ರಗಳು ವೆನೆಜುವೇಲ, ಈಕ್ವೆಡಾರ್, ಬೊಲಿವಿಯ, ನಿಕರಾಗುವ ಮತ್ತು ಕ್ಯೂಬಾ. ಈ ಸಂಸ್ಥೆಯ ಅಧ್ಯಕ್ಷ ವಿಕ್ಟರ್ ಹ್ಯೂಗೊ ಚಾವೆಜ್ ಲ್ಯಾಟಿನ್ ಅಮೆರಿಕದ ದೇಶಗಳ ಒಕ್ಕೊರಲಿನ ಬೆಂಬಲವನ್ನು ಬ್ರಿಟನ್ ಗೌರವಿಸಬೇಕು ಎಂದು ಎಚ್ಚರಿಸಿದ್ದಾರೆ. ದಕ್ಷಿಣ ಅಮೆರಿಕದ ದೇಶಗಳ ಇನ್ನೊಂದು ಸಂಘಟನೆ ದಕ್ಷಿಣ ಅಮೆರಿಕ ದೇಶಗಳ ಒಕ್ಕೂಟ ಕೂಡ ಈಕ್ವೆಡಾರ್‌ಗೆ ಬೆಂಬಲ ವ್ಯಕ್ತಪಡಿಸಿದೆ.

ಇಷ್ಟೆಲ್ಲ ಇದ್ದರೂ ಅಮೆರಿಕ ಸರಕಾರ ಮಾತ್ರ ಅಸಾಂಜ್‌ನನ್ನು ವಶಕ್ಕೆ ಪಡೆದುಕೊಳ್ಳಲು ಪ್ರಯತ್ನ ಮುಂದುವರಿಸಿದೆ. ಸರಕಾರದ ರಹಸ್ಯ ಕೃತ್ಯಗಳನ್ನು, ಹಗರಣಗಳನ್ನು ಬಯಲಿಗೆಳೆಯುವವರಿಗೆ ಇಂಥ ಪೀಡನೆ ತಪ್ಪಿದ್ದಲ್ಲ. ಅನ್ಯಾಯ, ಅಕ್ರಮಗಳನ್ನು ಹೊರಗೆಡಹುವವರ ಮೇಲೆ ಆಡಳಿತ ಯಂತ್ರ ಎಲ್ಲೆಲ್ಲೂ ಕಣ್ಣಿರಿಸಿರುತ್ತದೆ. ಕಟ್ಟೆಚ್ಚರದಿಂದ ಅಂಥವರ ಬಾಯಿ ಮುಚ್ಚಿಸಲು ಎಲ್ಲ ತಂತ್ರಗಳನ್ನು ಬಳಸುತ್ತದೆ. ಅಗತ್ಯ ಬಿದ್ದರೆ ವ್ಯಕ್ತಿಯನ್ನೇ ಮುಗಿಸಿಬಿಡುತ್ತದೆ. ಇಂಥವು ಎಷ್ಟೋ ನಡೆದಿವೆ ಅಮೆರಿಕದ ಸಿಐಎ ಕಾರ್ಯಾಚರಣೆಯಿಂದ. ನಮ್ಮ ಭಾರತ ದೇಶ ಈ ವಿಷಯದಲ್ಲಿ ಹಿಂದೆ ಬಿದ್ದಿಲ್ಲ. ಸರಕಾರದ ವಿರುದ್ಧ ಬಂಡೆದ್ದವರನ್ನು ಬಗ್ಗು ಬಡೆದಿರುವ ಅನೇಕ ನಿದರ್ಶನಗಳಿವೆ. ಮಾಹಿತಿ ಹಕ್ಕು ಕಾಯಿದೆ (ಆರ್‌ಟಿಐ) ಜಾರಿಗೆ ಬಂದಮೇಲೆ ಹಗರಣಗಳ, ಅಕ್ರಮ ವ್ಯವಹಾರಗಳ ಸರಮಾಲೆಯೇ ಬಯಲಾಗಿದೆ. ಇದರಿಂದ ಮತಿಗೆಟ್ಟ ಅಧಿಕಾರಶಾಹಿಗಳು, ರಾಜಕಾರಣಿಗಳು ಆರ್‌ಟಿಐ ಕಾರ್ಯಕರ್ತರ ಮೇಲೆ ಹಲ್ಲೆ ನಡೆಸಿರುವ, ಬೆದರಿಕೆ ಹಾಕಿರುವ ಪ್ರಕರಣಗಳು ಮಾಧ್ಯಮದಲ್ಲಿ ವರದಿಯಾಗಿವೆ. ಮಹಾರಾಷ್ಟ್ರ, ಮಧ್ಯಪ್ರದೇಶ, ಕರ್ನಾಟಕಗಳಲ್ಲಿ ಕೊಲೆಗಳೇ ನಡೆದಿವೆ. ಅವ್ಯವಹಾರಗಳನ್ನು ಬಯಲಿಗೆಳೆಯುವವರ ಜೀವನ ಅಸಾಂಜ್‌ನಂತೆಯೇ ಕಷ್ಟಕರ. ಆದರೂ ಭ್ರಷ್ಟಾಚಾರ ಮತ್ತು ಅಕ್ರಮಗಳ ವಿರುದ್ಧ ಸಮರ ಮಾತ್ರ ನಿಲ್ಲದು. ಇಂಥ ಕಾರ್ಯಕರ್ತರಿಗೆ ಇನ್ನೂ ಹೆಚ್ಚಿನ ಜನ ಬೆಂಬಲ ಅಗತ್ಯ.

## ನಗಣ್ಯವಾಗಿರುವ ಅಲಿಪ್ತ ಚಳವಳಿ

ಇರಾನಿನ ರಾಜಧಾನಿ ಟೆಹರಾನ್‌ನಲ್ಲಿ ಅಲಿಪ್ತ ರಾಷ್ಟ್ರಗಳ ಶೃಂಗಸಭೆ ನಡೆಯಿತು. ಸದ್ದುಗದ್ದಲವಿಲ್ಲದೆ ಮುಗಿಯಿತು. ಮಾಧ್ಯಮಗಳಲ್ಲಿ ಈ ಶೃಂಗಸಭೆ ಮುಖ್ಯವಾದ ಸುದ್ದಿ ಆಗಲೇ ಇಲ್ಲ. ಇರಾನಿನ ಮಟ್ಟಿಗೆ ಅದರದೇ ಸಮಸ್ಯೆಗಳು. ಮುಖ್ಯವಾಗಿ ಅದರ ನ್ಯೂಕ್ಲಿಯರ್ ಸ್ಥಾಪನೆಗಳ ಹಿಂದೆ ಬಿದ್ದಿರುವ ಅಮೆರಿಕ ಮತ್ತು ಅದು ವಿಧಿಸಿರುವ ಆರ್ಥಿಕ ದಿಗ್ಬಂಧನದ ಚಿಂತೆ. ಅದರಿಂದ ಅದಕ್ಕೇ ಹೆಚ್ಚು ಒತ್ತು. ಭಾರತದ ಮಟ್ಟಿಗೆ ಅಲಿಪ್ತ ನೀತಿ ಇಂದು ಅಮುಖ್ಯ. ಪ್ರಧಾನಿ ಮನಮೋಹನ್ ಸಿಂಗ್ ನಮ್ಮ ವಿದೇಶೀ ನೀತಿಯನ್ನು ಅಮೆರಿಕಾದ ಮರ್ಜಿಗೆ ತಕ್ಕಂತೆ ರೂಪಿಸಿದ ಮೇಲೆ ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಹೊಸ ಉಪಕ್ರಮಗಳಿಗೆ ಮುಂದಾಗದಂತಿದ್ದಾರೆ. ಅಲಿಪ್ತ ರಾಷ್ಟ್ರಗಳ ಚಳವಳಿಯು ಇಂದು ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಿದೆ. ಎರಡು ದಿನಗಳು ನಡೆದ ವಿದೇಶಾಂಗ ಸಚಿವರ ಸಭೆಯಲ್ಲಿ ಚರ್ಚೆಯಾದ ವಿಷಯಗಳು ಹಲವು. ವಿಶ್ವಸಂಸ್ಥೆಯ ಅಂಗರಚನೆಯಲ್ಲಿ ಸುಧಾರಣೆ, ೧೯೬೭ರ ಗಡಿ ಹೊಂದಿರುವ ಪ್ಯಾಲಸ್ಟೈನ್ ರಾಜ್ಯದ ಸ್ಥಾಪನೆ, ವಿಶ್ವಸಂಸ್ಥೆಯಲ್ಲಿ ಪ್ಯಾಲಸ್ಟೈನ್‌ಗೆ ಸದಸ್ಯತ್ವ, ಇರಾನಿನ ಮೇಲೆ ವಿಧಿಸಿರುವ ಆರ್ಥಿಕ ದಿಗ್ಬಂಧನ ಮೊದಲಾದವು. ಎಲ್ಲವೂ ಚರ್ವಿತ ಚರ್ವಣ..... ಶೃಂಗಸಭೆಯಲ್ಲಿ ಭಾಷಣಗಳೂ ಅಷ್ಟೆ. ಎಲ್ಲವೂ ಔಪಚಾರಿಕ.

ಅರವತ್ತು ವರ್ಷಗಳಿಂದಲೂ ಅಸ್ತಿತ್ವದಲ್ಲಿರುವ ಅಲಿಪ್ತ ಚಳವಳಿ ಕಳೆದ ಶತಮಾನದ ಅರವತ್ತರ ದಶಕದಲ್ಲಿದ್ದ ಉತ್ಸಾಹವನ್ನು ಕಳೆದುಕೊಂಡಿದೆ. ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಅಲಿಪ್ತ ರಾಷ್ಟ್ರಗಳು ಪರಿಣಾಮಕಾರಿಯಾಗಿ ಪ್ರಭಾವ ಬೀರುತ್ತಿದ್ದ ಕಾಲವೊಂದಿತ್ತು. ಜಾಗತೀಕರಣದ ಭರಾಟೆಯಲ್ಲಿ ಈಗ ಚಳವಳಿ ಕೊಚ್ಚಿಹೋಗಿದೆ. ನೆಪಮಾತ್ರಕ್ಕೆ ಉಳಿದುಕೊಂಡಿದೆ. ಕಾಮನ್‌ವೆಲ್ತ್ ರಾಷ್ಟ್ರಗಳ ಕೂಟದಂತೆ ಅದೂ ಕೂಡ ಮಾತಿನ ಮನೆಯಾಗುತ್ತಿದೆ. ಪ್ರಸ್ತುತ ಅಂತರರಾಷ್ಟ್ರೀಯ ಪರಿಸ್ಥಿತಿಯಲ್ಲಿ ಅಲಿಪ್ತ ಚಳವಳಿಯನ್ನು ಪುನರ್ ಸಂಘಟಿಸುವುದು ಅಗತ್ಯವಾಗಿದೆ. ಆದರೆ ಅದರ ಬಗ್ಗೆ ಕಾಳಜಿ ವಹಿಸುವವರು ಯಾರು? ಮೂರು ದಶಕಗಳ ಹಿಂದೆ ಸೋವಿಯೆತ್ ಒಕ್ಕೂಟದ ವಿಘಟನೆಯ ನಂತರ ಅಮೆರಿಕದ ಪ್ರಾಬಲ್ಯ ಹೆಚ್ಚಿ ಅದರ ನೇತೃತ್ವದಲ್ಲಿ ಏಕ ಕೇಂದ್ರೀಯ ವ್ಯವಸ್ಥೆ ರೂಪುಗೊಂಡಮೇಲೆ ಒಂದಲ್ಲ ಒಂದು ರೀತಿಯಲ್ಲಿ ಪ್ರಮುಖ ರಾಷ್ಟ್ರಗಳು ಅಮೆರಿಕಾಗೆ ಋಣಿಯಾಗಿವೆ. ಹಾಗಾಗಿ ಇಂದು ಪ್ರಾದೇಶಿಕ ಕೂಟಗಳು ಪ್ರಾಮುಖ್ಯತೆ ಪಡೆದುಕೊಳ್ಳುತ್ತಿವೆ. ಇಂದು ಅಮೆರಿಕಾಗೆ ನೇರವಾಗಿ ಸವಾಲಾಗಿರುವುದು ದಕ್ಷಿಣ ಅಮೆರಿಕದ ದೇಶಗಳು. ಅಲಿಪ್ತ ಚಳವಳಿಯ ಪುನರುಜ್ಜೀವನಕ್ಕೆ ಈ ದೇಶಗಳೇ ರಕ್ಷೆ.

ಕಳೆದ ಕೆಲವರ್ಷಗಳಿಂದ ದಕ್ಷಿಣ ಅಮೆರಿಕದ ದೇಶಗಳು ರಾಜಕೀಯವಾಗಿ, ಆರ್ಥಿಕವಾಗಿ ಸ್ವತಂತ್ರವಾದ ನಿರ್ಧಾರಗಳನ್ನು ತೆಗೆದುಕೊಳ್ಳುತ್ತಿವೆ. ಮುಖ್ಯವಾಗಿ ವೆನೆಜುವೇಲ, ಪೆರು, ಅರ್ಜೆಂಟೈನ, ಈಕ್ವೆಡಾರ್ ದೇಶಗಳಲ್ಲಿ ಪುರೋಗಾಮಿ ಸರಕಾರಗಳು ಅಸ್ತಿತ್ವದಲ್ಲಿವೆ. ಕ್ಯೂಬಾದೊಂದಿಗೆ ಈ ದೇಶಗಳು ಕೈಜೋಡಿಸಿವೆ. ಅಮೆರಿಕ ಆ ದೇಶದ ಮೇಲೆ ವಿಧಿಸಿರುವ ದಿಗ್ಬಂಧನ ವಿರೋಧಿಸಿವೆ. ಅಮೆರಿಕ ನೀತಿಗಳನ್ನು ಎದುರಿಸಿ ಒಂದು ಚಳವಳಿಯನ್ನೇ ನಡೆಸುತ್ತಿವೆ. ಈ ದೇಶಗಳು ತಮ್ಮಲ್ಲೇ ಆರ್ಥಿಕ ಸಹಕಾರವನ್ನು ವರ್ಧಿಸಿಕೊಂಡಿವೆ. ಹೊಸ ಹಾದಿಹಿಡಿದಿವೆ. ಇದು ಇದರ ಅಲಿಪ್ತ ರಾಷ್ಟ್ರಗಳಿಗೆ ಮಾದರಿಯಾದೀತು.

**ಸೀಯಾರ್ಕೆ**
'ಚೌಬೀನ', ನಂ. ೪೪೪, ೭ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್
ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

## ಗಝಲ್ (ಮನಸು)

ಶಿಲೆಯಲ್ಲಿ ಮೂರ್ತಿಯಿದೆ ಮೂರ್ತಿಯಿದೆ ಮನದಲ್ಲಿ ಕಾಣುವುದ್ಹೇಗೆ ?
ನನ್ನೊಳಗೆ ನೀನಿರುವೆ ನಾನಿರುವುದೇ ನಿನ್ನಲ್ಲಿ ನೋಡುವುದ್ಹೇಗೆ ?

ಬೀಜದಲಿ ವೃಕ್ಷವಿದೆ ವೃಕ್ಷದ ತುಂಬ ಬೀಜಗಳಿವೆ ಹೊಳೆವ ಕಣ್ಣಿಗೆ
ಏಕದಲಿ ಅನೇಕ ಇವೆ ಅನೇಕಗಳೇ ಈ ಲೋಕದಲ್ಲಿ ಕಾಣುವುದ್ಹೇಗೆ ?

ಜಲದಲಿ ಕಿಚ್ಚಿದೆ ಕಿಚ್ಚು ಒಡಲ ತುಂಬಿದೆ ತಿಳಿದ ಮನಸಿಗೆ
ಹೂವಿನಲಿ ದಳಗಳಿವೆ ದಳಗಳೇ ಬಣ್ಣವಾಗಿವೆ ಇಲ್ಲಿ ನೋಡುವುದ್ಹೇಗೆ ?

ಮುಗಿಲ ಮರೆಯಲಿ ಮಿಂಚಿದೆ ಮಿಂಚಿನ ಸಂಚಾರ ಒಳಗೊಳಗೆ
ಇರುಳಲಿ ಬೆಳಕಿನ ಬೀಜವಿದೆ ಬೆಳಕೇ ಬಯಲಾಗಿದೆ ಇಲ್ಲಿ ಕಾಣುವುದ್ಹೇಗೆ ?

ಕನಸೆಲ್ಲ ನನಸಾಗಿದೆ ನನಸೇ ಆವರಿಸಿದೆ ಈ ಮನಸಿನೊಳಗೆ
ಮನಸಲ್ಲಿ ಮನಸಿಲ್ಲ ಮನಸೇ ಮೈಲಿಗೆಯಾಗಿದೆ ಇಲ್ಲಿ ತಿಳುವುದ್ಹೇಗೆ ?

**ಡಾ|| ಬಸವರಾಜ ಸಬರದ**
ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ
ಗುಲಬರ್ಗಾ - ೫೮೫ ೧೦೬

# ಮುಹಮ್ಮದ್ ಕಲೀಂಉಲ್ಲ




ದೊಡ್ಡಜಟಕದ ಶ್ರೀ ಚನ್ನಕೇಶವ ದೇವಾಲಯದ ಮೊದಲಿನ ಸ್ಥಿತಿ

**ಕೆ. ಪಿ. ಸ್ವಾಮಿ**

ಪ್ರಾಥಮಿಕ ಶಾಲಾ ಶಿಕ್ಷಕರಾಗಿ ತಮ್ಮ ವೃತ್ತಿಜೀವನ ಪ್ರಾರಂಭಿಸಿದ ಕಲೀಂಉಲ್ಲ ಈಗ ಪ್ರೌಢಶಾಲಾ ಶಿಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಮಕ್ಕಳಿಗೆ ಪಾಠ ಹೇಳಿ, ತಿಂಗಳಾಗುತ್ತಲೇ ಸಂಬಳ ಎಣಿಸಿಕೊಂಡು ಜನ್ಮ ಸಾರ್ಥಕವಾಯಿತೆಂದು ತೆಪ್ಪಗಿದ್ದುಬಿಡುವ ಜಾಯಮಾನದವರಲ್ಲ. ಲೇಖಕ, ಪತ್ರಕರ್ತ, ಇತಿಹಾಸಾಸಕ್ತ, ಪ್ರಾಚೀನ ದೇವಾಲಯಗಳ ಜೀರ್ಣೋದ್ಧಾರ, ವೀರಗಲ್ಲು, ಮಾಸ್ತಿಕಲ್ಲು, ಶಾಸನಗಳನ್ನೂ ಗುರುತಿಸಿ ಅವುಗಳ ಬಗ್ಗೆ ಜನರಲ್ಲಿ ಅರಿವು ಮೂಡಿಸುವುದು, ಅವನ್ನು ಸಂರಕ್ಷಿಸುವುದು – ಹೀಗೆ ಇವರ ಆಸಕ್ತಿ ಮತ್ತು ಚಟುವಟಿಕೆಗಳು ಹಲವು ಕ್ಷೇತ್ರಗಳಿಗೆ ವ್ಯಾಪಿಸಿವೆ.

ನಾಗಮಂಗಲದವರಾದ ಇವರ ತಂದೆ ಮುಹಮದ್ ಗೌಸ್ ಅವರು ಷೇಕ್‌ದಾರ್ ಹುದ್ದೆಯಲ್ಲಿದ್ದರು. ತಾಯಿ ಶ್ರೀಮತಿ ನೂರ್‌ಜಾನ್, ಕಲೀಂಉಲ್ಲ ಶಾಲೆಗೆ ಸೇರಬೇಕಾದ ಸಂದರ್ಭದಲ್ಲಿ ಅವರಿದ್ದ ಹಳ್ಳಿಯಲ್ಲಿ ಉರ್ದು ಶಾಲೆಯಿಲ್ಲದ ಕಾರಣ ತಂದೆ ಇವರನ್ನೂ ಕನ್ನಡ ಶಾಲೆಗೆ ಸೇರಿಸಿದರು. ತಂದೆ ವರ್ಗವಾದ ಕಡೆಗಳಲ್ಲಿ ಇವರ ಅಭ್ಯಾಸ ಸಾಗಿತು. ಹೈಸ್ಕೂಲು ಶಿಕ್ಷಣ ಪೂರ್ಣಗೊಳಿಸುವ ಮೊದಲೇ ತಂದೆ ತೀರಿಕೊಂಡು ಕುಟುಂಬದ ಜವಾಬ್ದಾರಿ ಇವರ ಹೆಗಲಿಗೇರಿತು. ಉದ್ಯೋಗಕ್ಕಾಗಿ ಹುಡುಕಾಟ ಪ್ರಾರಂಭವಾಯಿತು. ಬೆಂಗಳೂರಿನ ಎನ್.ಜಿ.ಇ.ಎಫ್. ಸಂಸ್ಥೆಯಲ್ಲಿ ಸಂದರ್ಶನ. ಲಿಖಿತ ಪರೀಕ್ಷೆಯಲ್ಲಿ ಪಾಸು, ಮೌಖಿಕ ಪರೀಕ್ಷೆಯಲ್ಲಿ ನಪಾಸು – ಸರಿಯಾಗಿ ಇಂಗ್ಲಿಷ್ ಮಾತಾಡಲು ಬಾರದು ಎಂಬ ಕಾರಣಕ್ಕೆ. ದುಡಿಯುವ ಮನಸ್ಸಿದ್ದರೆ ನಿರಾಶೆಗೊಳ್ಳಬೇಕಾಗಿಲ್ಲವಷ್ಟೆ. ಒಂದು ಫೌಂಡ್ರಿಯ ಲಾರಿಯಲ್ಲಿ ಮೇಲ್ವಿಚಾರಕ. ಅದು ಬೆಂಗಳೂರು-ಮದರಾಸು ಮಧ್ಯೆ ಸಂಚರಿಸುತ್ತಿದ್ದ ಲಾರಿ. ಕ್ಲೀನರ್ ಕೆಲಸ ಮೇಲ್ವಿಚಾರಕನ ತಲೆಗೇ! ಅದಕ್ಕೂ ಮುಂಚೆ ಸಿನಿಮಾ ಥಿಯೇಟರಿನಲ್ಲಿ ಟಿಕೆಟ್ ಮಾರಿದ್ದರು, ಸಹಕಾರ ಸಂಘದ ಸೇಲ್ಸ್‌ಮ್ಯಾನ್ ಆಗಿ ಕೆಲಸ ಮಾಡಿದ್ದರು.

ಪ್ರಾಥಮಿಕ ಶಾಲಾ ಶಿಕ್ಷಕರಾದ ನಂತರ ಅವರ ಅಧ್ಯಯನವೂ ಮುಂದುವರಿಯಿತು. ಬಿ.ಎ., ಬಿ.ಎಡ್., ಪದವಿ ಪಡೆದರು. ನಾಗಮಂಗಲದ ಸುತ್ತಲಿನ ಹಳ್ಳಿಗಳ ಸ್ಕೂಲುಗಳು ಅವರನ್ನು ಹಿಡಿದಿಟ್ಟುಕೊಂಡವು. ಯಾವ ಹಳ್ಳಿಗೆ ವರ್ಗವಾದರೂ ಇವರ ಮೂಲ ಆಸಕ್ತಿಯೇನೂ ಕುಂದಲಿಲ್ಲ. ಪಾಳುಬಿದ್ದ ದೇವಾಲಯಗಳು, ಮಾಸ್ತಿಕಲ್ಲು, ವೀರಗಲ್ಲು, ಶಾಸನಗಳು ಅವರ ಗಮನ ಸೆಳೆಯುತ್ತಿದ್ದವು.

ನಾಗಮಂಗಲ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ (ಮೂರು ಅವಧಿಗೆ) ಕಾರ್ಯ ನಿರ್ವಹಿಸಿದರು. ಆಗ ಹಲವಾರು ಕನ್ನಡ ಸಾಹಿತಿಗಳನ್ನು, ಇತಿಹಾಸತಜ್ಞರನ್ನು ಕರೆಸಿ ಉಪನ್ಯಾಸ, ಸಂವಾದ ಕಾರ್ಯಕ್ರಮ ಏರ್ಪಾಟು ಮಾಡಿ ಜನರಲ್ಲಿ ಪ್ರಾಚೀನ ದೇವಾಲಯಗಳನ್ನು ಸಂರಕ್ಷಿಸುವ ಬಗೆಗೆ ತಿಳಿವಳಿಕೆ ಮೂಡಿಸಲು ಪ್ರಯತ್ನಿಸಿದರು.

ಹೀಗೆ, ಒಮ್ಮೆ ಸಮಾರಂಭವೊಂದಕ್ಕೆ ಅತಿಥಿಗಳಾಗಿ ಬಂದಿದ್ದ ಡಾ|| ಶಿವರಾಮ ಕಾರಂತರು ಮೂರು ದಿನ ಉಳಿದುಕೊಂಡಿದ್ದರು. ಅವರು ಶ್ರವಣಬೆಳಗೊಳಕ್ಕೆ ಹೋಗಿಬರಲು ಆಸಕ್ತಿ ತೋರಿಸಿದಾಗ, ಕಲೀಂಉಲ್ಲ ಅವರಿಗೆ ಮಾರ್ಗದರ್ಶಿಯಾದರು. ದಾರಿಯಲ್ಲಿ ಕಾರಂತರನ್ನು ಸಾವಿರ ವರ್ಷಗಳಷ್ಟು ಹಳತಾದ ಕಂಬದಹಳ್ಳಿಯ ಪಂಚಕೂಟ ಜೈನ ಬಸದಿಗೂ ಕರೆದೊಯ್ದರು. ಪಾಳುಬಿದ್ದ ಸ್ಥಿತಿಯಲ್ಲಿದ್ದ ಆ ಬಸದಿಯನ್ನು ನೋಡಿ ಕಾರಂತರು ಬಹಳ ಬೇಸರಗೊಂಡರಲ್ಲದೆ, ಸರಕಾರ ಎಷ್ಟೋ ಹಣ ಪೋಲು ಮಾಡುತ್ತದೆ, ಹೀಗೆ ಪಾಳುಬಿದ್ದಿರುವ ಪ್ರಾಚೀನ ಸಂಸ್ಕೃತಿಯನ್ನು ದುರಸ್ತಿ ಮಾಡಲು ಅದಕ್ಕೆ ಮನಸ್ಸಿಲ್ಲ ಎಂದು ದೂರಿದರು.

ಕೆಲವು ದೇವಾಲಯಗಳ ಆವರಣಗಳು ಬಯಲು ಶೌಚಾಲಯಗಳಾಗಿ ಬಳಕೆಯಾಗುತ್ತಿದ್ದವು. ಕೆಲವರು ಅಲ್ಲಿ ದನಕರುಗಳನ್ನು ಕಟ್ಟಿಹಾಕುತ್ತಿದ್ದರು. ಕೆಲವರು ದೇವಾಲಯದ ಒಂದು ಭಾಗವನ್ನು ವಶಪಡಿಸಿಕೊಂಡು ಚಪ್ಪಡಿಗಳನ್ನು, ದಿಂಡುಗಳನ್ನು ಹಟ್ಟಿಗಳ ವಿಸ್ತರಣೆಗೆ ಬಳಸುತ್ತಿದ್ದರು. ಈ ಬಗ್ಗೆ ಜನರಲ್ಲಿ ಅರಿವು ಮೂಡಿಸುವುದು ಅಷ್ಟು ಸರಳವಾಗಿರಲಿಲ್ಲ. ಅಪೂರ್ವ ಶಾಸನಗಳ, ವೀರಗಲ್ಲುಗಳ ಮಹತ್ವ ತಿಳಿಯದೆ ಅವನ್ನು ದನಗಳ ಗೂತ್ತಿಗೆ, ಬಟ್ಟೆ ಒಗೆಯಲು, ಕೆಲವು ಪ್ರಕರಣಗಳಲ್ಲಿ ಮೆಟ್ಟಲುಗಳಾಗಿ ಉಪಯೋಗಿಸುತ್ತಿದ್ದವರ ವಿರೋಧ ಎದುರಿಸಿ ಮುಂದುವರಿಯಬೇಕಾಗಿತ್ತು. ತಮ್ಮ ಸಹಉಪಾಧ್ಯಾಯರುಗಳ, ವಿದ್ಯಾರ್ಥಿಗಳ ಸಹಕಾರದಿಂದ ಇಂಥವನ್ನೆಲ್ಲ ನಿಭಾಯಿಸಲು ಸಾಧ್ಯವಾಯಿತು.

ಪ್ರಾಚೀನ ಸ್ಮಾರಕಗಳ ಬಗ್ಗೆ ಜನಜಾಗೃತಿ ಉಂಟುಮಾಡುವುದರ ಜೊತೆಗೆ ಸರಕಾರದ ಗಮನ ಸೆಳೆಯುವುದೂ ಮುಖ್ಯವೆಂದು ಅವರಿಗೆ ಅರ್ಥವಾಯಿತು.

ಕಲೀಂಉಲ್ಲ ಮೇಸ್ಟರು ದೇವಾಲಯಗಳ ಸುತ್ತಲೇ ಸುಳಿದಾಡುತ್ತಿದ್ದುದರಿಂದ ಮುಸ್ಲಿಂ ಬಾಂಧವರ ಗುಮಾನಿಗೆ ಗುರಿಯಾಗಬೇಕಾಯಿತಲ್ಲದೆ, 'ನಮ್ ದೇವರ್ ಗುಡಿಗಳ ಜೀರ್ಣೋದ್ಧಾರಕ್ಕೆ ಈ ಮೇಸ್ಟರ್ದೇನ್ಲ ಮಧ್ಯಸ್ಥಿಕೆ?' – ಎಂಬ ಕೊಂಕುನುಡಿಗಳನ್ನೂ ಎದುರಿಸಬೇಕಾಯಿತು! ಪ್ರಾಚೀನ ದೇವಾಲಯಗಳನ್ನು, ಮಾಸ್ತಿಕಲ್ಲು, ವೀರಗಲ್ಲುಗಳನ್ನು ಅರಸುತ್ತ ಅವರು ಹಲವು ಊರುಗಳಿಗೆ ಹೋಗಿಬಂದರು. ಫೋಟೋಗ್ರಫಿಯ ಹವ್ಯಾಸವೂ ಅಂಟಿಕೊಂಡದ್ದರಿಂದ ಹೋದ ಕಡೆ ದೇವಾಲಯಗಳ ಫೋಟೋ



ಶಾಲಾಕಾಲೇಜುಗಳಲ್ಲಿ ವಿದ್ಯಾರ್ಥಿಗಳಿಗೆ ಇತಿಹಾಸದಲ್ಲಿ ಆಸಕ್ತಿ ಮೂಡಿಸಲು ಉಪನ್ಯಾಸ ಕಾರ್ಯಕ್ರಮ. ವೀರಗಲ್ಲುಗಳ ಪರಿಚಯ. ಬಲಗಡೆ ಇರುವವರು ಕಲೀಂಉಲ್ಲ




ನೇತ್ರ ಶಿಬಿರ

ತೆಗೆದು ಅವುಗಳ ಬಗ್ಗೆ ಮಾಹಿತಿ ಸಂಗ್ರಹಿಸಿ 'ಆಂದೋಲನ' ಪತ್ರಿಕೆಗೆ ಲೇಖನ ಬರೆಯತೊಡಗಿದರು. ಪತ್ರಿಕೆಯಲ್ಲಿ ಪ್ರಕಟವಾದ ಒಂದು ಲೇಖನದ ಪ್ರತಿಯ ಜೊತೆಗೆ ಪಾಳುಬಿದ್ದಿರುವ ದೇವಾಲಯದ ಸ್ಥಿತಿಗತಿಯನ್ನು ವಿವರಿಸಿ ಧರ್ಮಸ್ಥಳದ ಶ್ರೀ ವೀರೇಂದ್ರ ಹೆಗ್ಗಡೆಯವರಿಗೆ ಒಂದು ಪತ್ರ ಬರೆದರು. ಹೆಗ್ಗಡೆಯವರಿಂದ ಸಕಾರಾತ್ಮಕ ಉತ್ತರ ಬಂದಿತು. ಜೀರ್ಣೋದ್ಧಾರದ ವೆಚ್ಚ ಅಂದಾಜು ಮಾಡಲು ಧರ್ಮೋತ್ಥಾನ ಪರಿಷತ್ ವತಿಯಿಂದ ಇಂಜಿನಿಯರೊಬ್ಬರನ್ನೂ ಕಳಿಸಿಕೊಟ್ಟರು. ಅವರ ಅಂದಾಜಿನಂತೆ ಸುಮಾರು ೫೦ ಲಕ್ಷ ವೆಚ್ಚವಾಗಬಹುದು, ಊರಿನವರು ವೆಚ್ಚದ ಶೇಕಡ ೨೦ರಷ್ಟನ್ನು ಭರಿಸಿದರೆ ತಾವು ದೇವಸ್ಥಾನದ ಜೀರ್ಣೋದ್ಧಾರ ಪೂರ್ತಿಗೊಳಿಸಲು ಸಿದ್ಧರಾಗಿದ್ದೇವೆಂದು ತಿಳಿಸಿದರು.

ಮೇಸ್ಟರ ಜವಾಬ್ದಾರಿ ಮತ್ತಷ್ಟು ಹೆಚ್ಚಿತು. ಊರಿನವರನ್ನು ಒಪ್ಪಿಸುವುದು ಅಷ್ಟು ಸಲೀಸಾದ ಕೆಲಸವಾಗಿರಲಿಲ್ಲ. ಬೆಂಗಳೂರಿನಲ್ಲಿ ಉದ್ಯೋಗದಲ್ಲಿರುವ ಆ ಹಳ್ಳಿಗಳ ಅನೇಕರು ಸಹಾಯಕ್ಕೆ ಬಂದರು. ಜೀರ್ಣೋದ್ಧಾರದ ಕೆಲಸ, ಸುಸೂತ್ರವಾಗಿ ನೆರವೇರಿತು. ಜನರಿಗೆ ಮೇಸ್ಟರ ಮೇಲಿನ ನಂಬಿಕೆಯೂ ಹೆಚ್ಚಾಯಿತು !

ಹೀಗೆ ಕಲೀಂಉಲ್ಲ ಅವರು ಪಟ್ಟುಬಿಡದೆ ಪ್ರಯತ್ನಿಸಿ, ಧರ್ಮಸ್ಥಳ ಕ್ಷೇತ್ರದ ಸಹಕಾರದಿಂದ ಮಾಚಲಘಟ್ಟ ಮಲ್ಲೇಶ್ವರ ದೇವಾಲಯ, ದೊಡ್ಡ ಜಟಕದ ಚನ್ನಕೇಶವ ದೇವಾಲಯ ಮತ್ತು ಚಾರೇನಹಳ್ಳಿಯ ಚನ್ನಕೇಶವ ದೇವಾಲಯಗಳ ಮತ್ತು ಕೇಂದ್ರ ಸರಕಾರದ ಪ್ರಾಚ್ಯವಸ್ತು ಇಲಾಖೆಯ ಸಹಕಾರದಿಂದ ಕಂಬದಹಳ್ಳಿಯ ಪಂಚಕೂಟ ಬಸದಿಯ ಜೀರ್ಣೋದ್ಧಾರ ನೆರವೇರಿಸಿದರು !

ನಾಗಮಂಗಲ ತಾಲ್ಲೂಕಿನ ದಿಡಿಗ ಗ್ರಾಮದ ಚೆನ್ನಿಗರಾಯಪ್ಪನ ದೊಡ್ಡ ದೇವಾಲಯ ಎಲ್ಲಕ್ಕಿಂತ ಹೆಚ್ಚು ದುಸ್ಥಿತಿಗೀಡಾಗಿತ್ತು. ಕಲೀಂಉಲ್ಲ ಹತ್ತೆಂಟು ಬಾರಿ ಆ ಊರಿಗೆ ಹೋಗಿ ಅಲ್ಲಿನ ಮುಖ್ಯಸ್ಥರಿಗೆ ಆ ದೇವಸ್ಥಾನದ ಬಗ್ಗೆ ತಿಳಿಸಿಕೊಟ್ಟುದಲ್ಲದೆ, ಜೆಸಿಬಿ ಯಂತ್ರದ ಸಹಾಯದಿಂದ ದೇವಸ್ಥಾನದ ಆವರಣದಲ್ಲಿ ಬೆಳೆದಿದ್ದ ಗಿಡಮರಗಳನ್ನು ತೆಗೆಸಿ ಸ್ವಚ್ಛಗೊಳಿಸಿದಾಗ ಊರಿನಲ್ಲಿ ಹಬ್ಬದ ವಾತಾವರಣ ಮೂಡಿದ್ದು ಜನರು ಸಡಗರಪಟ್ಟರು.

ಅಳೀಸಂದ್ರ ಎಂಬ ಗ್ರಾಮದಲ್ಲಿ ಹೊಯ್ಸಳರ ಕಾಲದ ಒಂದು ದೊಡ್ಡ ಶಾಸನವನ್ನೂ ಅಲ್ಲಿನ ರೈತನೊಬ್ಬ ದನಗಳಿಗೆ ಮೇವು ಹಾಕಲು 'ಗೊತ್ತು' ಮಾಡಿಕೊಂಡಿದ್ದ. ಅದರ ಮಹತ್ವ ತಿಳಿಸಿ ಅದನ್ನು ಬಿಡುಗಡೆಗೊಳಿಸಬೇಕಾದರೆ ಆ ಊರಿಗೆ ಹತ್ತಾರು ಬಾರಿ ಹೋಗಿ ಬರಬೇಕಾಯಿತು. ಕೊನೆಗೆ ಅದಕ್ಕೆ ವಿಮೋಚನೆ ನೀಡಲು ರೈತ ಸಮ್ಮತಿಸಿದ. ಅದನ್ನು ಎಲ್ಲಿ ಸಂರಕ್ಷಿಸಿಡಬೇಕು ಎಂಬ ಸಮಸ್ಯೆ ಎದುರಾದಾಗ, ಆ ಊರಿನ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರು ಅದನ್ನು ತಮ್ಮ ಶಾಲೆಯಲ್ಲಿ ಸ್ಥಾಪಿಸಲು ಸಮ್ಮತಿಸಿದರು.

ಹೀಗೆ ಕಲೀಂಉಲ್ಲ ಹಲವು ವೀರಗಲ್ಲುಗಳನ್ನೂ, ಶಾಸನಗಳನ್ನೂ, ಮಾಸ್ತಿಕಲ್ಲುಗಳನ್ನೂ ಸಂರಕ್ಷಿಸುವಲ್ಲಿ ಮುಖ್ಯಪಾತ್ರ ವಹಿಸಿದ್ದಾರೆ.

'ನಾಗಮಂಗಲ ತಾಲ್ಲೂಕು ದರ್ಶನ', 'ನಾಗಮಂಗಲ ತಾಲ್ಲೂಕಿನ ಶಾಸನ ಪರಿಚಯ', 'ಮಳವಳ್ಳಿ ತಾಲ್ಲೂಕಿನ ಶಾಸನ ಪರಿಚಯ' ಮತ್ತು 'ಪ್ರವಾದಿ ವಚನಾಮೃತ' ಇವರು ರಚಿಸಿದ ಮುಖ್ಯ ಕೃತಿಗಳು.

ಮಂಡ್ಯ ಜಿಲ್ಲೆಯ ಅನೇಕ ಊರುಗಳ ಶಾಲೆಗಳಲ್ಲಿ ಬೋಧಕರಾಗಿ ಸಾವಿರಾರು ವಿದ್ಯಾರ್ಥಿಗಳಿಗೆ ಮಾರ್ಗದರ್ಶಕರಾಗಿದ್ದಾರೆ. ವಿದ್ಯಾರ್ಥಿಗಳಲ್ಲಿ ಸಾಹಿತ್ಯಾಸಕ್ತಿಯ ಜೊತೆಗೆ ನಮ್ಮ ಸಂಸ್ಕೃತಿಯ ಪಳೆಯುಳಿಕೆಗಳಾದ ಸ್ಮಾರಕಗಳ ಬಗೆಗೆ ಒಲವು ಮೂಡಲೂ ಸಹಾಯಕರಾಗಿದ್ದಾರೆ. ೧೯೯೦ರಲ್ಲಿ ಇವರು ಕಾರ್ಯ ನಿರ್ವಹಿಸಿದ ಶಾಲೆ ಅತ್ಯುತ್ತಮ ಶಾಲೆಯೆಂದು ಪರಿಗಣಿಸಲ್ಪಟ್ಟು ೨೫ ಸಾವಿರ ರೂಪಾಯಿ ನಗದು ಬಹುಮಾನಕ್ಕೆ ಪಾತ್ರವಾಯಿತು. ಮಂಡ್ಯ ಜಿಲ್ಲೆಯಲ್ಲಿ ಹತ್ತಾರು ಬಾರಿ ತಿರುಗಾಡಿ ಅಲ್ಲಿ ಗಮನಕ್ಕೆ ಬಂದ ಹಲವು ವೀರಗಲ್ಲುಗಳ ಬಗ್ಗೆ ಸ್ಥಳೀಯರಿಗೆ ಮಾತ್ರವಲ್ಲದೆ ಲೇಖನಗಳ ಮೂಲಕ ಇತರರಿಗೂ ತಿಳಿಸಿಕೊಡಲು ಶ್ರಮಿಸಿದ್ದಾರೆ.

ಇವರು ನಾಗಮಂಗಲದ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಸಂದರ್ಭದಲ್ಲಿ, 'ದೇಶಭಕ್ತರು' ಬಾಬರಿ ಮಸೀದಿಯನ್ನು ಧ್ವಂಸಗೊಳಿಸಿದ ಪರಿಣಾಮವಾಗಿ ಧರೆ ಹತ್ತಿ ಉರಿಯುತ್ತಿರುವಾಗ, ಕಲೀಂಉಲ್ಲ ಬೇರೆ ಬೇರೆ ಭಾಷೆಗಳಲ್ಲಿ ಪ್ರಕಟವಾಗಿರುವ ರಾಮಾಯಣ ಕಾವ್ಯಗಳ ತೌಲನಿಕ ಅಧ್ಯಯನ ಕಾರ್ಯಕ್ರಮವನ್ನೂ ಹಮ್ಮಿಕೊಂಡಿದ್ದರು. ರಾಮಚರಿತಮಾನಸ, ರಾಮಾಯಣದರ್ಶನಂ (ಕನ್ನಡ) ಹಾಗೂ ತಮಿಳು, ತೆಲುಗು ಭಾಷೆಗಳಲ್ಲಿ ಪ್ರಕಟವಾಗಿರುವ ರಾಮಾಯಣ ಕಾವ್ಯಗಳ ತೌಲನಿಕ ಅಧ್ಯಯನದಲ್ಲಿ ನಾಡಿನ ಅನೇಕ ವಿದ್ವಾಂಸರು ಭಾಗವಹಿಸಿದ್ದರು.

ತಾಲ್ಲೂಕಿನ ಉಪಾಧ್ಯಾಯರುಗಳಿಗಾಗಿ ಸ್ಥಳೀಯ ದೇವಾಲಯಗಳು, ಸ್ಮಾರಕಗಳ ಬಗ್ಗೆ ವಿಚಾರ ಸಂಕಿರಣ, ಸುಮಾರು ೫೦ ಪ್ರೌಢಶಾಲೆಗಳಿಗೆ ಭೇಟಿ ನೀಡಿ ವಿದ್ಯಾರ್ಥಿಗಳಿಗಾಗಿ ಕನ್ನಡ ಕವಿ-ಕಾವ್ಯ ಕುರಿತ ಕ್ವಿಜ಼್ ಕಾರ್ಯಕ್ರಮ, ಕನ್ನಡ ಸಾಹಿತಿಗಳನ್ನು ಬರಮಾಡಿಕೊಂಡು ಗೆದ್ದ ವಿದ್ಯಾರ್ಥಿಗಳಿಗೆ ಬಹುಮಾನ ವಿತರಣೆ – ಇವು ಇವರು ಯಶಸ್ವಿಯಾಗಿ ನಡೆಸಿದ ಕಾರ್ಯಕ್ರಮಗಳಲ್ಲಿ ಕೆಲವು.

ನಲಿ ಕಲಿ, ಪಠ್ಯಪುಸ್ತಕರಹಿತ ಕಲಿಕೆ – ಮುಂತಾದ ಹೊಸ ವಿಚಾರಗಳು ಬಳಕೆಗೆ ಬರುವ ಮುಂಚೆಯೇ ಇವರು ತಮ್ಮದೇ ರೀತಿಯ ಕಲಿಕಾ ಕ್ರಮವನ್ನು ಅನುಸರಿಸಿದ್ದರು. ವಿದ್ಯಾರ್ಥಿಗಳು ಪಠ್ಯದ ಗಿಳಿಗಳಾಗದೆ ವ್ಯಾವಹಾರಿಕ ಜ್ಞಾನ ಸಂಪಾದನೆಗೆ ಒತ್ತುನೀಡಿ ವಿದ್ಯಾರ್ಥಿಪ್ರಿಯ ಶಿಕ್ಷಕರೆಂದು ಖ್ಯಾತರಾದರು. ರಜೆಯ ದಿನಗಳಲ್ಲಿ ಬೇಸಿಗೆ ಶಿಬಿರಗಳನ್ನು ಹಮ್ಮಿಕೊಂಡು ವಿದ್ಯಾರ್ಥಿಗಳಿಗೆ ಚಾರಣ, ಯೋಗ, ಚಿತ್ರಕಲೆ, ಕೋಲಾಟ – ಮುಂತಾದುವುಗಳಲ್ಲಿ ತೊಡಗಿಕೊಳ್ಳುವಂತೆ ಮಾಡುತ್ತಿದ್ದರು.

ಕಲೀಂಉಲ್ಲ ಮೇಸ್ಟರ ಚಟುವಟಿಕೆಗಳು ಇಷ್ಟಕ್ಕೇ ಮುಗಿಯುವಂಥವಲ್ಲ. ಫೋಟೋಗ್ರಫಿಯಲ್ಲಿ ಆಸಕ್ತಿ ಇರುವ ಇವರು ತಾವು ಮಂಡ್ಯ ಜಿಲ್ಲೆಯ ಅನೇಕ ಊರುಗಳನ್ನು ತಿರುಗಾಡಿ ತೆಗೆದಿರುವ ನೂರಾರು ದೇವಾಲಯಗಳ, ಸಾಂಸ್ಕೃತಿಕ ಸ್ಮಾರಕಗಳ ಫೋಟೋ ಪ್ರದರ್ಶನ ಏರ್ಪಡಿಸುವ ಮೂಲಕವೂ ಜನರ ತಿಳಿವಳಿಕೆ ಹೆಚ್ಚಿಸಲು ಪ್ರಯತ್ನಿಸಿದ್ದಾರೆ.

ರೋಟರಿ ಸಂಸ್ಥೆಯ ಅಧ್ಯಕ್ಷರಾಗಿದ್ದ ಸಂದರ್ಭದಲ್ಲಿ ಗ್ರಾಮೀಣ ಪ್ರದೇಶದ ಅತಿ ಹೆಚ್ಚು ಜನರಿಗೆ ಕಣ್ಣಿನ ಶಸ್ತ್ರಚಿಕಿತ್ಸೆಗೆ ಸಹಾಯಕರಾಗಿದ್ದಾರೆ. ಗ್ರಾಮೀಣ ಜನರ ಆರೋಗ್ಯ ತಪಾಸಣೆ ಮತ್ತು ಜಾನುವಾರುಗಳ ತಪಾಸಣೆಯಂಥ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಇವರು ನಡೆಸಿದ ಚಟುವಟಿಕೆಗಾಗಿ ಮುಖ್ಯಮಂತ್ರಿಯವರ ಪಾರಿತೋಷಕ ಗಳಿಸಿದ್ದಾರೆ.

ರಂಗಭೂಮಿ ಚಟುವಟಿಕೆಗಳಲ್ಲೂ ಇವರಿಗೆ ಆಸಕ್ತಿ. ಮಂಡ್ಯ ರಮೇಶ್ ನಿರ್ದೇಶನದಲ್ಲಿ ನಾಟಕಗಳಲ್ಲಿ ಪಾತ್ರವಹಿಸಿದ್ದಾರೆ. ರಾಜ್ಯಮಟ್ಟದ ನಾಟಕ ಸ್ಪರ್ಧೆಯಲ್ಲಿ ಇವರ ತಂಡ ನಾಲ್ಕು ಬಾರಿ ಮೊದಲ ಬಹುಮಾನ ಗಳಿಸಿದೆ. 'ಮಣ್ಣಿನ ಗಾಡಿ', 'ಅಗ್ನಿ ಮತ್ತು ಮಳೆ', 'ನಾಗಮಂಡಲ' ಮತ್ತು 'ಯುಯುತ್ಸು' – ಇವರು ಪಾತ್ರವಹಿಸಿದ ನಾಟಕಗಳಲ್ಲಿ ಕೆಲವು. 'ಅಗ್ನಿ ಮತ್ತು ಮಳೆ' ಬೆಂಗಳೂರು ಮತ್ತು ಗೋವಾ ಸೇರಿದಂತೆ ಹಲವು ನಗರಗಳಲ್ಲಿ ಪ್ರದರ್ಶನಗೊಂಡಿದೆ.

ನಮ್ಮೂರ ಶಾಲೆಗಳಲ್ಲೂ ಇಂಥ ಮೇಸ್ಟರಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎನ್ನಿಸುತ್ತದೆಯಲ್ಲವೆ ?

ಕಲೀಂಉಲ್ಲ ಮೇಸ್ಟರು ನಾಗಮಂಗಲದಲ್ಲಿ ಸ್ಥಾಪಿಸಿದ ಅಲ್ ಫಲ್ಹಾ ಎಂಬ ಅಲ್ಪ ಸಂಖ್ಯಾತರ ಸಹಕಾರ ಸಂಘ, ಅವರು ಅಧ್ಯಕ್ಷರಾಗಿದ್ದ ಅವಧಿಯಲ್ಲಿ ಮಂಡ್ಯ ಜಿಲ್ಲೆಯ ಉತ್ತಮ ಸಹಕಾರ ಸಂಘ ಪ್ರಶಸ್ತಿ ಗಳಿಸಿದೆ. ಇವರಿಗೆ ಇತಿಹಾಸ ಅಕಾಡೆಮಿಯ ರಾಜ್ಯಪ್ರಶಸ್ತಿ, ಬೆಂಗಳೂರು ಗೆಳೆಯರ ಬಳಗದ ಸನ್ಮಾನ, ಮಂಡ್ಯ ಜಿಲ್ಲೆಯ ರಾಜ್ಯೋತ್ಸವ ಪ್ರಶಸ್ತಿ, 'ಆಂದೋಲನ' ಪತ್ರಿಕೆಯ ಅಂಕಣಶ್ರೀ ಪ್ರಶಸ್ತಿ ಲಭಿಸಿವೆ.

ಸ್ವಂತ ಆಸಕ್ತಿಯಿಂದ ಇಷ್ಟೆಲ್ಲ ಚಟುವಟಿಕೆಗಳಲ್ಲಿ ತೊಡಗಿಕೊಂಡಿರುವ ಇವರು ಸರಕಾರದ ನೆರವಿಗೆ ಕೈಚಾಚಿದವರಲ್ಲ. ಈಗಲೂ ವಾರದಲ್ಲಿ ಎರಡು ದಿನ ಸ್ಮಾರಕಗಳ ವೀಕ್ಷಣೆ, ಅವುಗಳ ಸಂರಕ್ಷಣೆ ಬಗ್ಗೆ ಜನರಲ್ಲಿ ತಿಳಿವಳಿಕೆ ಉಂಟುಮಾಡಲು ವಿನಿಯೋಗಿಸುತ್ತಿದ್ದಾರೆ. ಬೌದ್ಧಿಕ ಕ್ರಿಯಾಶಕ್ತಿಗೆ ಇವರೊಬ್ಬ ಶ್ಲಾಘನೀಯ ಮಾದರಿ.

**ಕೆ. ಪಿ. ಸ್ವಾಮಿ**
ನಂ. ೧೦, ೧ನೇ ಮಹಡಿ, ೩ನೇ ಕ್ರಾಸ್, ಶ್ರೀರಾಮ ದೇವಾಲಯ ರಸ್ತೆ, ಈಜಿಪುರ
ವಿವೇಕನಗರ ಅಂಚೆ, ಬೆಂಗಳೂರು - ೫೬೦ ೦೪೭

ಜನಪದ ಸಾಹಿತ್ಯದ ಮೇರುಬಿಂದುಗಳಲ್ಲಿ ಪ್ರಮುಖವಾದದ್ದು ಜನಪದ ಮಹಾಕಾವ್ಯಗಳು. ಕೇವಲ ಮೌಖಿಕ ಪರಂಪರೆಯನ್ನು ಹೊಂದಿರುವ ಜನಪದ ಸಾಹಿತ್ಯವೂ ಶಿಷ್ಟಸಾಹಿತ್ಯದಂತೆ ಎಲ್ಲಾ ಪ್ರಕಾರಗಳಲ್ಲಿಯೂ ತನ್ನನ್ನು ತಾನು ಒಗ್ಗೂಡಿಸಿಕೊಂಡಿದೆ. ಜನಪದರ ಶಿಷ್ಟ ಕಲೆಗಾರಿಕೆಯೊಂದಿಗೆ ತನ್ನದೇ ಆದ ಸಂಸ್ಕೃತಿ, ಸಂಪ್ರದಾಯ, ಆಚಾರ-ವಿಚಾರಗಳ ಹಿನ್ನೆಲೆಯಲ್ಲಿ ರಚನೆಯಾಗಿದ್ದರೂ ಯಾವುದೇ ವಿಮರ್ಶಾ ಮಾದರಿಗೂ ಒಗ್ಗುವಂತಹದ್ದು ಜನಪದದ ವಿಶೇಷವಾಗಿದೆ. ಅದರಲ್ಲಿ ಸ್ತ್ರೀವಾದಿ ನೆಲೆಯೂ ಒಂದಾಗಿದೆ. ಇತ್ತೀಚೆಗೆ ಜಾನಪದವನ್ನು ಅಂತರರಾಷ್ಟ್ರೀಯ ನೆಲೆಯಲ್ಲಿ ಹಾಗೂ ವಿವಿಧ ಸಿದ್ಧಾಂತಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗುತ್ತಿದೆ. ಇದರಿಂದಾಗಿ ಜಾನಪದವು ಒಂದು ಸಾಂಸ್ಕೃತಿಕ ಸಂಕಥನದ ರೂಪದಲ್ಲಿ ಬೆಳೆಯುತ್ತಿದೆ. ಇದೀಗ ಜೆಂಡರ್ ನೆಲೆಯಲ್ಲಿ ನೋಡುವ ಹೊಸ ಪರಿಕಲ್ಪನೆಯಾಗಿ ಸ್ತ್ರೀವಾದಿ ಜಾನಪದ ಬೆಳಕಿಗೆ ಬರುತ್ತದೆ.

ಲಿಖಿತ ಸಂದರ್ಭಕ್ಕಿಂತ ಭಿನ್ನವಾಗಿ ಜಾನಪದವು ವಿಶಿಷ್ಟ ಮಹಿಳಾ ಪರಂಪರೆಯನ್ನು

'ಸಂಕಮ್ಮನ ಸಾಲು', 'ಬೇವಿನಹಟ್ಟಿ ಕಾಳಿಯ ಸಾಲು' ಪ್ರತ್ಯೇಕ ಸಾಲುಗಳಾಗಿ ಪರಿಗಣಿತವಾದ ಸ್ವತಂತ್ರ ಸ್ತ್ರೀ ಪಾತ್ರಗಳ ಮಾದರಿಗಳು. ಆದರೆ ಕಾವ್ಯದ ಮೂಲ ಉದ್ದೇಶ ಪೂರೈಕೆಯಲ್ಲಿ ಮಾತ್ರ ಪೂರಕ ಪಾತ್ರಗಳೇ ಆಗಿ ಉಳಿಯುತ್ತವೆ. 'ಆದಿಶಕ್ತಿ ಸಾಲಿನ' ಆದಿಶಕ್ತಿಯ ಸ್ತ್ರೀಪಾತ್ರ ಸೃಷ್ಟಿಯ ಮೂಲದ ಪ್ರತೀಕ, ಅವಳ ಶಕ್ತಿ ವಿದ್ಯೆ ಬುದ್ಧಿಗಳು ಮಾತೃಪ್ರಧಾನ ವ್ಯವಸ್ಥೆಯ ಪ್ರತೀಕ. ಆದರೆ ಮಾದೇಶ್ವರ ತನ್ನ ಬುದ್ಧಿ ತಂತ್ರಗಳಿಂದ ಆದಿಶಕ್ತಿಯ ಸಕಲ ವಿದ್ಯೆಗಳನ್ನು ಪಡೆದು ಕೊನೆಗೆ ಅವಳನ್ನು ಭಸ್ಮ ಮಾಡುತ್ತಾನೆ. ಇದು ಇಡೀ ಪುರುಷಪ್ರಧಾನ ವ್ಯವಸ್ಥೆಯ ಜಾರಿಯನ್ನು ಪ್ರತಿನಿಧಿ



# ಸ್ತ್ರೀವಾದಿ ನೆಲೆಯಲ್ಲಿ ಕನ್ನಡ ಜನಪದ ಮಹಾಕಾವ್ಯಗಳು – ಒಂದು ನೋಟ

ಎಂ. ರೇಖಾ

ಹೊಂದಿದೆ. ಬಹುತೇಕ ಜಾನಪದ ಪ್ರಕಾರಗಳ ರಚನಕಾರರು, ನಿರೂಪಕರು, ಗಾಯಕರು ಮಹಿಳೆಯರಾಗಿದ್ದು, ಅವಳ ಅಭಿವ್ಯಕ್ತಿ ಶಕ್ತಿಯನ್ನು, ಲೋಕದೃಷ್ಟಿಯನ್ನು ದಾಖಲಿಸಿವೆ. ೧೯ನೇ ಶತಮಾನದಲ್ಲಿ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಪಿತೃಪ್ರಧಾನ ವ್ಯವಸ್ಥೆಯ ವಿರುದ್ಧ ತಲೆ ಎತ್ತಿದ ಧ್ವನಿಯೇ 'ಸ್ತ್ರೀವಾದ'. ಇದು ಕ್ರಮೇಣ ಪೌರ್ವಾತ್ಯ ರಾಷ್ಟ್ರಗಳಿಗೂ ವ್ಯಾಪಿಸಿತು. ಸ್ತ್ರೀ-ಪುರುಷರು ಬೇರೆ ಬೇರೆ ಲಿಂಗಕ್ಕೆ ಸೇರಿದವರು ಎಂಬ ಜೈವಿಕ ಸಂಗತಿಯನ್ನು ಆಶ್ರಯಿಸಿ ರಾಜಕೀಯ, ಆರ್ಥಿಕ, ಸಾಮಾಜಿಕ, ಕೌಟುಂಬಿಕ ಮೊದಲಾದ ಕ್ಷೇತ್ರಗಳಲ್ಲಿ 'ಸ್ತ್ರೀ'ಯನ್ನು ಪ್ರತ್ಯೇಕ ನೆಲೆಯಲ್ಲಿ ಪಿತೃಪ್ರಧಾನ ವ್ಯವಸ್ಥೆ ನಿಲ್ಲಿಸಿದೆ. ಇವುಗಳ ವಿರುದ್ಧ ತಲೆಯೆತ್ತಿದ್ದ ಧ್ವನಿಯೇ ಸ್ತ್ರೀವಾದ. ಸಾಹಿತ್ಯ ಕ್ಷೇತ್ರದಲ್ಲಿಯೂ, ಸಾಹಿತ್ಯ ಕೃತಿಗಳಲ್ಲಿಯೂ 'ಸ್ತ್ರೀ'ಯನ್ನು ಪ್ರಧಾನ ನೆಲೆಗೆ ತರದೆ ಕೇವಲ ಪೂರಕ ಪಾತ್ರಗಳಿಗೆ ಸೀಮಿತಗೊಳಿಸಿರುವುದು ಸಹಜವಾಗಿದೆ. ಇವೆಲ್ಲದರ ವಿರುದ್ಧ ಸ್ತ್ರೀವಾದಿ ನೆಲೆಯ ವಿಮರ್ಶೆ ಅಸ್ತಿತ್ವವನ್ನು ಪಡೆದುಕೊಂಡಿತು. ಕನ್ನಡದ ಜನಪದ ಮಹಾಕಾವ್ಯಗಳು ಸಹ ಸ್ತ್ರೀ ಪಾತ್ರಗಳನ್ನು ಅಧೀನತೆಯ ನೆಲೆಯಲ್ಲಿಯೇ ಪೋಷಿಸಿ ಚಿತ್ರಿಸಿವೆ. ಹಾಗೆಂದು ಈ ಪಾತ್ರಗಳಿಗೆ ಯಾವುದೇ ಮನ್ನಣೆ ಇಲ್ಲವೆಂದಲ್ಲ, ಪೂರಕ, ಅಧೀನತೆಯಲ್ಲಿಯೂ ತಮ್ಮ ವಿಶೇಷತೆಯನ್ನು ಕಾಪಾಡಿಕೊಂಡಿರುವುದು ಈ ಪಾತ್ರಗಳ ಔಚಿತ್ಯವಾಗಿದೆ. ಮಲೆಮಾದೇಶ್ವರ ಕಾವ್ಯ, ಮಂಟೇಸ್ವಾಮಿ ಕಾವ್ಯ, ಮೈಲಾರಲಿಂಗನ ಕಾವ್ಯ, ಜುಂಜಪ್ಪನ ಕಾವ್ಯಗಳನ್ನು ಗಮನಿಸಿದರೂ ಈ ಮಹಾಕಾವ್ಯಗಳು ಪುರುಷರು-ಪುರುಷರಿಗಾಗಿ ರಚಿಸಿದ ಕಾವ್ಯಗಳೆಂದು ಹೇಳಲು ಸಾಧ್ಯವಿಲ್ಲದಿದ್ದರೂ ಇಲ್ಲಿನ ಕಥಾನಾಯಕರು ಮಾತ್ರ ಪುರುಷರೇ ಆಗಿದ್ದಾರೆ. ಸವದತ್ತಿ ಎಲ್ಲಮ್ಮನ ಕಾವ್ಯವೊಂದೇ ಇದಕ್ಕೆ ಅಪವಾದವಾಗಿ ಸಿಗುವುದಾಗಿದೆ. ಇಲ್ಲಿನ ಕಥಾನಾಯಕರ ವಿಶೇಷವೆಂದರೆ ಐತಿಹಾಸಿಕ ವ್ಯಕ್ತಿಗಳು ದೈವತ್ವಕ್ಕೆ ಏರಲ್ಪಟ್ಟಿರುವುದು ಮತ್ತು ಒಂದು ಜನಾಂಗದ ಪ್ರತಿನಿಧಿಗಳು, ರಕ್ಷಕರು ಸೃಷ್ಟಿಯ ಮೂಲವೆನಿಸಿದವರು. ಮನುಷ್ಯಕುಲದ ಪ್ರತಿನಿಧಿಗಳಂತೆಯೂ ಚಿತ್ರಿತವಾಗಿದ್ದಾರೆ. ಪಿತೃಪ್ರಧಾನ ವ್ಯವಸ್ಥೆಯ ಮೌಲ್ಯಗಳನ್ನು ಉಳಿಸುವವರಾಗಿದ್ದಾರೆ. ಪುರುಷನೇ ಈ ಸಮಾಜದ ಕೇಂದ್ರ ಮತ್ತು ನಿಯಂತ್ರಕನಾಗಿ ಕಾಣಬರುತ್ತಾನೆ. ಈ ನಾಯಕರನ್ನು ಪವಾಡಗಳ ಮೂಲಕ ಚಿತ್ರಿಸಿರುವುದು ಇದಕ್ಕೆ ಮತ್ತಷ್ಟು ಪುಷ್ಟಿ ದೊರೆಯುತ್ತದೆ. ಇನ್ನು ಇಲ್ಲಿ ಕಾಣಬರುವ ಸ್ತ್ರೀಪಾತ್ರಗಳು ಪೂರಕ ಪಾತ್ರಗಳಿಗೆ ಸೀಮಿತವಾಗಿದೆ. ಇದರ ಜೊತೆಜೊತೆಯಾಗಿ ಹಲವು ಸ್ವತಂತ್ರ ಸ್ತ್ರೀ ಪಾತ್ರದ ಮಾದರಿಗಳು ಕಾಣಬರುತ್ತವೆಯಾದರೂ ಕಾವ್ಯದ ಮುಖ್ಯ ನೆಲೆಗೆ ಮಾತ್ರ ಬರುವುದಿಲ್ಲ.

'ಮಲೆ ಮಾದೇಶ್ವರ' ಕಾವ್ಯದಲ್ಲಿ ಕಾಣಿಸಿಕೊಳ್ಳುವ 'ಆದಿಶಕ್ತಿ ಮಾದಪ್ಪನ ಸಾಲು', ಸುತ್ತದೆ. ಮಾತೃಪ್ರಧಾನ ವ್ಯವಸ್ಥೆಯಿಂದ ಪಿತೃಪ್ರಧಾನ ವ್ಯವಸ್ಥೆಯಾಗಿ ಪರಿವರ್ತನೆ, ಅಧಿಕಾರ ಹಸ್ತಾಂತರದ ಮೇಲೆ ಸಹ ಇದು ಬೆಳಕು ಚೆಲ್ಲುತ್ತದೆ. ಅದೇ ರೀತಿ ಈಡಿಪಸ್ ಕಾಂಪ್ಲೆಕ್ಸ್‌ನ ಚಿತ್ರಣವೂ ಇಲ್ಲಿದೆ. ತಾಯಿ ಮಗನ ಸಂಬಂಧ ಬಯಸುವುದು ಅಸಾಂಪ್ರದಾಯಿಕವೆನಿಸಿದರೂ ಇದರ ಹಿಂದಿನ ಉದ್ದೇಶ 'ಮುಂದಿನ ಪೀಳಿಗೆ'ಯ ಉಳಿಕೆಯಾಗಿದೆ. ''ಬಾಳಾಟ ಮಾಡ್ದೆ ಹೋದ್ರೆ ಪ್ರಪಂಚಕ್ಕೆ ಸುಳಿನೇ ಇರೋಲ್ವ'' ಎಂಬ ಆದಿಶಕ್ತಿಯ ಮಾತಿನಿಂದಲೇ ಇದು ವೇದ್ಯವಾಗುತ್ತದೆ. ಆದರೆ ಮುಂದೆ ಮಾದೇಶ್ವರ ಮಾಡಿದ್ದೇನು? ನಂಬಿಕೆಗೆ ದ್ರೋಹ. ತಾಯಿಯನ್ನು ಸುಟ್ಟು ತಾನು ಜೀವಕೋಟಿಯ ಸೃಷ್ಟಿಕರ್ತನಾಗುತ್ತಾನೆ. ಅಧಿಕಾರ ಹಸ್ತಾಂತರದ ಸಂಪೂರ್ಣ ಚಿತ್ರಣವೇ ಇಲ್ಲಿ ನಮ್ಮ ಕಣ್ಣಮುಂದೆ ಬರುತ್ತದೆ. 'ಜಗತ್ತನ್ನು ಗಂಡು ತನಗೆ ಬೇಕಾದಂತೆ ಸೃಷ್ಟಿಸಿದ್ದಾನೆ. ಅವನ ದೃಷ್ಟಿಕೋನಕ್ಕೆ ಅನುಗುಣವಾಗಿ ಜಗತ್ತಿನ ನಿಯಂತ್ರಣವನ್ನು ಮಾಡುತ್ತಾನೆ' ಎಂಬ ಸೈಮನ್ ಡಿಬುವಾರ ನಿಲುವು ಇಲ್ಲಿ ಮನನೀಯ. ಈ ನಿಲುವು ಇಲ್ಲಿಯವರೆಗಿನ ಒಟ್ಟು ನಂಬಿಕೆಗಳನ್ನೇ ಪ್ರಶ್ನಿಸುವಂಥದ್ದು. ಹೊಸ ಆಲೋಚನಾಕ್ರಮವನ್ನು ಸೃಜಿಸುವಂಥದ್ದು ಕೂಡ. ಕಾವ್ಯದ ಪ್ರಾರಂಭ ಸ್ತ್ರೀ ಪ್ರಧಾನ ಹಿನ್ನೆಲೆಯಲ್ಲಿ ಪ್ರಾರಂಭವಾದರೂ ಕ್ರಮೇಣ ಆಕ್ರಮಣಕಾರಿ ಧೋರಣೆಯಿಂದ ಪುರುಷನೇ ಕೇಂದ್ರ ಮತ್ತು ನಿಯಂತ್ರಕನಾಗಿ ನಾಯಕ ಸ್ಥಾನವನ್ನು ಭದ್ರಪಡಿಸಿಕೊಳ್ಳುತ್ತಾನೆ.

ಸಮಾಜ ವ್ಯವಸ್ಥೆ ಮತ್ತು ನಿರ್ವಹಣೆಯಲ್ಲಿ ಪುರುಷನಿಗೆ ಪ್ರಾಮುಖ್ಯತೆಯಿದೆ. ಕೌಟುಂಬಿಕ, ಧಾರ್ಮಿಕ, ರಾಜಕೀಯ, ಆರ್ಥಿಕ, ಸಾಮಾಜಿಕ, ನ್ಯಾಯಿಕ, ಕಲಾತ್ಮಕ, ಸಾಂಸ್ಕೃತಿಕ ಮೊದಲಾದ ಎಲ್ಲಾ ಚಟುವಟಿಕೆಗಳಲ್ಲಿ ಹೆಣ್ಣು ಗಂಡಿಗೆ ಅಧೀನಳಾಗಿಯೇ ಬದುಕಬೇಕಾಗಿದೆ. ಪ್ರಾಚೀನ ಸಾಹಿತ್ಯದಿಂದ ಆಧುನಿಕ ತತ್ವಚಿಂತನೆಯಲ್ಲಿಯೂ ಹೆಣ್ಣನ್ನು ನಿಷೇಧಾತ್ಮಕವಾಗಿಯೇ ನಿರ್ವಚಿಸಲಾಗಿದೆ. ಇದಕ್ಕೊಂದು ಉತ್ತಮ ಉದಾಹರಣೆಯಾಗಿ 'ಸಂಕಮ್ಮನ ಸಾಲು' ನಿರೂಪಿತವಾಗಿದೆ. ಪುರುಷ ದೌರ್ಜನ್ಯ, ದಬ್ಬಾಳಿಕೆ, ಸ್ತ್ರೀಯ ಅಸಹಾಯಕತೆಯನ್ನು ಸಾಂಪ್ರದಾಯಿಕವಾಗಿಯೇ ಈ ಸಾಲು ಚಿತ್ರಿಸುತ್ತದೆ. ಕೊನೆಗೆ ಸಂಕಮ್ಮನ ಕಷ್ಟ ನಿವಾರಣೆಯಾಗುತ್ತದೆಯಾದರೂ ಅದಕ್ಕೆ ಕಾರಣವಾಗುವುದು ಒಬ್ಬ ಪುರುಷ ದೇವರು ಎಂಬುದು ಮಾತ್ರ ವಿಪರ್ಯಾಸ. ಸಂಪ್ರದಾಯವನ್ನು ಮೀರದ ಹೆಣ್ಣಿನ ಪಾತ್ರವಾಗಿ ಸಂಕಮ್ಮನ ಪಾತ್ರ ವಿಶಿಷ್ಟವೆನಿಸುತ್ತದೆ. ಸಾಂಸ್ಕೃತಿಕ ಕಟ್ಟಳೆಗಳ ಪರಿಧಿಯಲ್ಲಿಯೇ ಬದುಕುತ್ತ ಗಂಡಸಿನ ಕ್ರೂರತೆಯನ್ನು ಅಧಿಕಾರದ ಪರಿಧಿಯನ್ನು ದಾಟುವ ಹೆಣ್ಣಿನ ಮನಸ್ಸನ್ನು ಮತ್ತು ಕ್ರಿಯೆಗಳನ್ನು ಸೂಕ್ಷ್ಮವಾಗಿ ಇಲ್ಲಿನ ಸಂಕಥನ ನಿರೂಪಿಸುತ್ತದೆ. ಆದರೆ ಅದು ಸಹ ನೆರವೇರುವುದು ಸಾಂಪ್ರದಾಯಿಕ ನೆಲೆಯಲ್ಲಿ ದೇವರ ಕೃಪೆಯಿಂದ ಎಂಬುದು

ಮಾತ್ರ ಮತ್ತೆ ಪುರುಷ ಕೇಂದ್ರಿತ ನೆಲೆಯನ್ನು ಸುತ್ತುವರೆಯುತ್ತದೆ. ಈ ಹಿನ್ನೆಲೆಯಲ್ಲಿ ಸಂಕಮ್ಮ ಮಾದೇಶ್ವರನ ಹಿರಿಮೆಯನ್ನು ಎತ್ತಿಹಿಡಿಯುವ ಸ್ತ್ರೀ ಪಾತ್ರವಾಗಿ ಕಂಡುಬರುತ್ತಾಳೆ. ಕಾವ್ಯದ ಮೂಲ ಆಶಯವನ್ನು ಹೊರತುಪಡಿಸಿ ನೋಡಿದರೆ ಸಂಕಮ್ಮನ ಧಾರ್ಮಿಕ ಭಕ್ತಿ, ನಿಷ್ಠೆ, ನಿಲುವುಗಳ ಜೊತೆಗೆ ಆಕೆಯ ತಾಯ್ತನದ ಸಹಜ ಬಯಕೆಯನ್ನು ಸಾಂಪ್ರದಾಯಿಕ ನೆಲೆಯಲ್ಲಿಯೇ ಪೂರೈಸಿಕೊಳ್ಳುವ ಹೆಣ್ಣಾಗಿ ಗಮನಸೆಳೆಯುವ ಪಾತ್ರವಾಗುತ್ತಾಳೆ. ತಾಳ್ಮೆ, ನಿಷ್ಠೆಗಳು ಹೆಣ್ಣಿನ ವಿಶಿಷ್ಟ ಗುಣಗಳು. ಈ ಗುಣಗಳ ಅಭಿವ್ಯಕ್ತಿಯ ರೂಪ ಸಂಕಮ್ಮಳ ಪಾತ್ರವಾಗಿದೆ. ಜೊತೆಗೆ ಪಿತೃಪ್ರಧಾನ ವ್ಯವಸ್ಥೆಯ ಧೋರಣೆಗಳನ್ನು, ಗಂಡಿನ ಹಿರಿಮೆಯನ್ನು ಅಪ್ರಜ್ಞಾಪೂರ್ವಕವಾಗಿ ಒಪ್ಪಿಕೊಳ್ಳುವಂತೆ ಮಾಡಲಾಗಿದೆ. ಸಂಕಮ್ಮ ತನ್ನ ಅಧೀನತೆಗೆ ತಾನೇ ಸಹಕರಿಸುವಂತೆ ಮಾಡಲಾಗಿದೆ.

'ಬೇವಿನಹಟ್ಟಿ ಕಾಳಿ'ಯ ಪಾತ್ರ ಆದಿಶಕ್ತಿ ಮತ್ತು ಸಂಕಮ್ಮನ ಪಾತ್ರಗಳಿಗಿಂತ ಭಿನ್ನವಾದದ್ದು. ಈ ಪಾತ್ರ ಹೆಣ್ಣಿನ ಮತ್ತೊಂದು ವಿಭಿನ್ನ ಮುಖವನ್ನು ತೋರಿಸುತ್ತದೆ. ಉದ್ಧಟತನ, ದರ್ಪ, ಅಟ್ಟಹಾಸ, ಠೇಂಕಾರಗಳ ಪ್ರತೀಕವಾಗಿ ಈ ಪಾತ್ರ ಗಮನ ಸೆಳೆಯುತ್ತದೆ. ಸಂಕಮ್ಮಳು ತಾಳ್ಮೆ, ಸಂಯಮಗಳ ನಿಧಿಯಾದರೆ, ಬೇವಿನಹಟ್ಟಿ ಕಾಳಿ ಇದಕ್ಕೆ ಸಂಪೂರ್ಣ ವಿರುದ್ಧಳು. ಬಹುಶಃ ಹೆಣ್ಣಿನ ಈ ಸ್ವಭಾವ ಸಮಾಜದಲ್ಲಿ ಸ್ವೀಕೃತಕ್ಕಿಂತ ತಿರಸ್ಕೃತವೇ ಹೆಚ್ಚು. ಇದು ಕಾವ್ಯದ ಸಂದರ್ಭದಲ್ಲಿಯೂ ದಿಟವಾದ ಮಾತು. ಸ್ತ್ರೀಯ ಲಕ್ಷಣವೆನ್ನುವ ಅಧೀನತೆ, ಹಿಂಜರಿಕೆಗಳನ್ನೊಳಗೊಂಡ ಸಂಕಮ್ಮ ದರ್ಪದ ಕಾಳಿಗಿಂತ ವಿಶಿಷ್ಟವೆನಿಸುತ್ತಾಳೆ. ಕಾವ್ಯದಲ್ಲಿ ಕಾಳಿಗಿಂತ ಸಂಕಮ್ಮಳೇ ಹೆಚ್ಚು ಮನ್ನಣೆಯನ್ನು ಪಡೆದುಕೊಳ್ಳುತ್ತಾಳೆ. ಇದು ಒಪ್ಪಿತ ಸಮಾಜವೊಂದರ ಮನ್ನಣೆಯೂ ಹೌದು. ಒಟ್ಟಾರೆ ಬೇವಿನಹಟ್ಟಿ ಕಾಳಿಯ ದರ್ಪವನ್ನು, ಅಡಗಿಸುವ ಮಾದೇಶ್ವರ, ಸಂಕಮ್ಮನ ಕಷ್ಟ ನಿವಾರಿಸುವ ಮಾದೇಶ್ವರ ಮತ್ತೆ ನಮ್ಮನ್ನು ಪುರುಷ ಪೂರ್ವಗ್ರಹಗಳ ಕಡೆ ಹೋಗುವಂತೆ ಮಾಡುತ್ತದೆ. ಆದರೆ ಅದಕ್ಕಿಂತಲೂ ಇಲ್ಲಿ ಮುಖ್ಯವಾಗಿ ಗಮನಿಸಬೇಕಾಗಿರುವುದು ಸ್ತ್ರೀಯ ದೃಷ್ಟಿಕೋನ, ಕಾಳಜಿ, ಮೌಲ್ಯಗಳು. ಈ ಹಿನ್ನೆಲೆಯಲ್ಲಿ ಆದಿಶಕ್ತಿ, ಸಂಕಮ್ಮ, ಬೇವಿನಹಟ್ಟಿ ಕಾಳಿಯ ಪಾತ್ರಗಳು ಸ್ತ್ರೀ ಸಂವೇದನೆಯ ವಿವಿಧ ಮುಖಗಳಾಗಿವೆ.

'ಮಂಟೇಸ್ವಾಮಿ' ಕಾವ್ಯ ಮಲೆ ಮಾದೇಶ್ವರ ಕಾವ್ಯಕ್ಕಿಂತ ಸ್ತ್ರೀವಾದಿ ನೆಲೆಯಲ್ಲಿ ವಿಭಿನ್ನವಾಗಿ ಅಭ್ಯಾಸಾರ್ಹವಾದದ್ದು. ೧೨ನೇ ಶತಮಾನದ ಸಾಮಾಜಿಕ, ರಾಜಕೀಯ, ಆರ್ಥಿಕ ಕ್ಷೇತ್ರಗಳಿಗೆ ಪ್ರವೇಶಿಸಿದ ಧಾರ್ಮಿಕ ಕ್ರಾಂತಿ ಸಾಹಿತ್ಯದ ಮೇಲೂ ಪ್ರಭಾವ ಬೀರಿತು. ಕೇವಲ ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ ಸ್ವಾತಂತ್ರ್ಯವೇ ಅಲ್ಲದೆ ಸಾಹಿತ್ಯ ರಚನೆಯಲ್ಲೂ ಸ್ತ್ರೀಯರಿಗೆ ಅವಕಾಶ ದೊರೆಯಿತು. ಒಟ್ಟಾರೆ 'ಸ್ತ್ರೀ'ಯನ್ನು ನೋಡುವ ದೃಷ್ಟಿಕೋನವೇ ಬದಲಾಯಿತು. ಸಮಾನತೆ, ಸ್ವಾತಂತ್ರ್ಯಗಳ ಜೊತೆಗೆ ಅಭಿವ್ಯಕ್ತಿಯ ಸ್ವಾತಂತ್ರ್ಯವೂ ದೊರೆಯಿತು. ಮಂಟೇಸ್ವಾಮಿ ಕಾವ್ಯದ ನಾಯಕ ಪುರುಷನೇ ಆದರೂ, ಆತನ ಹಿರಿಮೆಯನ್ನು ಹೆಚ್ಚಿಸುವಲ್ಲಿ ಸ್ತ್ರೀ ಪಾತ್ರಗಳು ಪ್ರಮುಖವಾಗುತ್ತವೆ. ನೀಲಮ್ಮ, ಚೆನ್ನಾಜಮ್ಮ, ಕಲ್ಯಾಣಮ್ಮ ಇಲ್ಲಿನ ಪ್ರಮುಖ ಸ್ತ್ರೀ ಪಾತ್ರಗಳು. ನೀಲಮ್ಮನ ಪಾತ್ರ ಸ್ತ್ರೀಯ ಸ್ವತಂತ್ರ ಅಭಿವ್ಯಕ್ತಿಯ ಪ್ರತೀಕವಾಗಿದೆ. ಧಾರ್ಮಿಕ ಕಾರ್ಯಗಳಲ್ಲಿ ಗಂಡ ಬಸವಣ್ಣನೊಡನೆ ಆಕೆಯ ಸಹಭಾಗಿತ್ವ, ಆಕೆಯ ಆಲೋಚನೆಗಳನ್ನು ಒಪ್ಪಿಕೊಳ್ಳುವ ಬಸವಣ್ಣ ಇವೆಲ್ಲ ಅಂದಿನ ಸಮಾಜದಲ್ಲಿ ಸ್ತ್ರೀ-ಸ್ಥಾನವನ್ನು ನಿರ್ಧರಿಸುವಂತಹದ್ದು. ನೀಲಮ್ಮನ ಭಕ್ತಿಯ ಉತ್ಕಟತೆ, ಧಾರ್ಮಿಕ ನಿಲುವು ಇಲ್ಲಿ ಮುಖ್ಯವಾಗುತ್ತದೆ. ಚೆನ್ನಾಜಮ್ಮ, ಕಲ್ಯಾಣಮ್ಮನ ಪಾತ್ರಗಳು ಕೇವಲ ನಾಯಕನ ಸಿದ್ಧಿ-ಸಾಧನೆಗಳನ್ನು ಎತ್ತಿಹಿಡಿಯುವ ಪ್ರಚುರಗೊಳಿಸುವ ಕಾರ್ಯಕ್ಕೆ ಸೀಮಿತಗೊಂಡಿವೆ.

ಮೈಲಾರಲಿಂಗ ಕಾವ್ಯದಲ್ಲಿ ಸ್ತ್ರೀ ಪಾತ್ರಗಳು ಹೆಚ್ಚಾಗಿ ಕಾಣಬರುತ್ತವೆ. 'ಗಂಗಿ ಮಾಳವ್ವನ ಕಥೆ', 'ಕುರುಬರ ಮಾಳವ್ವನ ಕಥೆ', 'ಕೋಮಲಾಯ ಕಥೆ', 'ಶೀಲವಂತಿಕೆಯ ಕಥೆ', 'ರಡ್ಡೇರ ನೀಲವ್ವನ ಕಥೆ' – ಹೀಗೆ ಒಂದೊಂದು ಸ್ತ್ರೀಪಾತ್ರವೂ ಪ್ರತ್ಯೇಕ ಪ್ರಸಂಗವಾಗಿ ನಿಲ್ಲುವುದು ಈ ಕಾವ್ಯದ ವಿಶೇಷವೆನಿಸುತ್ತದೆ. ಇಲ್ಲಿನ ಸ್ತ್ರೀ ಪಾತ್ರಗಳ ಮುಖಾಂತರ ನಮಗೆ ಪ್ರಾಚೀನ ಸಂಸ್ಕೃತಿಯ ಕುರುಹುಗಳು ದೊರೆಯುತ್ತವೆ. 'ಗಂಗಿಮಾಳವ್ವನ ಕಥೆ' ಮೂಲಕ ನಮಗೆ ಮೊದಲು 'ವಧುದಕ್ಷಿಣೆ' ತೆತ್ತು ವಿವಾಹವಾಗುವ ಪದ್ಧತಿ ಇತ್ತು ಎನಿಸುತ್ತದೆ. ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಾದ ಬುಡಕಟ್ಟು ಜನಾಂಗದಲ್ಲಿ ಸಹ ಇಂದಿನ ವರದಕ್ಷಿಣೆಯಂತೆ ವಧುದಕ್ಷಿಣೆಯ ಪರಿಪಾಠವಿದ್ದಿರಬೇಕು. ''ಏಳು ಕೋಟಿ ಹೊನ್ನು ನೀಡಿದರೆ ಮಾತ್ರ ಹೆಣ್ಣು ನೀಡುವುದಾಗಿ ಹೇಳುವ ತಿಮ್ಮಪ್ಪ ಅದಕ್ಕೆ ಒಪ್ಪುವ ಗೊರವ.'' ಇದನ್ನು ನೋಡಿದರೆ ಬಹುಶಃ ಗೊಲ್ಲ ಸಂಸ್ಕೃತಿಯಲ್ಲಿಯೇ ಈ ಪದ್ಧತಿ ಇದ್ದಿರಬಹುದು ಎನಿಸುತ್ತದೆ. ಗಂಗಿಮಾಳವ್ವ, ಕುರುಬರಮಾಳವ್ವ ಇಬ್ಬರನ್ನು ಮದುವೆ ಮಾಡಿಕೊಂಡು ಸವತಿಯರ ಜಗಳ ನೋಡುವ ಮೈಲಾರಲಿಂಗನ ಪಾತ್ರ ಸ್ತ್ರೀ ಶೋಷಣೆಯನ್ನು ಕಣ್ಣಮುಂದೆ ತರುತ್ತದೆ. ಇನ್ನು ಶೀಲವಂತಿಕೆ, ನೀಲವ್ವ, ಕೋಮಲಿ ಪಾತ್ರಗಳು ಮೈಲಾರಲಿಂಗನ ಪವಾಡಗಳನ್ನು, ಮಹಿಮೆಯನ್ನು ಎತ್ತಿಹಿಡಿಯುವ ಪಾತ್ರಗಳಾಗಿ ಹಿಂದಿನ ಸಂಸ್ಕೃತಿಯ ನೆಲೆಯಲ್ಲಿಯೇ ಹೆಣ್ಣನ್ನು ನಿಲ್ಲಿಸುತ್ತವೆ.

ಪುರುಷ ಪಾತ್ರಗಳನ್ನು ಎತ್ತಿಹಿಡಿಯುವ ಸ್ತ್ರೀ ಪಾತ್ರಗಳನ್ನು ಅಲ್ಲಗಳೆಯುವಂತಿಲ್ಲ. ಕಾರಣ ಅಲ್ಲಿ ಸ್ತ್ರೀ ಪಾತ್ರಗಳ ಚಿತ್ರಣವೇ ವಿಶೇಷ. ಒಂದು ವೇಳೆ ಆಸ್ಥಾನದಲ್ಲಿ ಪುರುಷ ಪಾತ್ರಗಳೇನಾದರೂ ಇದ್ದರೆ ಕಾವ್ಯಕ್ಕೆ ಅಷ್ಟು ಸೊಗಸು ಬರುತ್ತಿರಲಿಲ್ಲ. ಕಾವ್ಯದ ಮೂಲ ಆಶಯವನ್ನು ಪೂರೈಸುವಲ್ಲಿಯೂ ವಿಫಲವಾಗುತ್ತಿದ್ದವು. ತಾಳ್ಮೆ, ಸಂಯಮ, ಸ್ವಾಭಿಮಾನ ಹೆಣ್ಣಿನ ಸ್ವಯಂಸಿದ್ಧಿ ಗುಣವಾಗಿದೆ. ಅಂತೆಯೇ ಆಕೆಯ ಧಾರ್ಮಿಕ ನಿಲುವು, ದೃಢಭಕ್ತಿಯು ಆಕೆಗೆ ಹೇಳಿಮಾಡಿಸಿದ ಲಕ್ಷಣದಂತೆ ಇವೆ. ಕಥಾಪುರುಷರ ಪೂರಕತೆಗೆ ಈ ಪಾತ್ರಗಳು ಬಂದಿವೆ ಎಂದು ಮೇಲುನೋಟಕ್ಕೆ ನಮಗೆ ಅನಿಸಿದರೂ ಸೂಕ್ಷ್ಮವಾಗಿ ಗಮನಿಸಿದಾಗ ಸ್ತ್ರೀ ಪಾತ್ರಗಳ ವೈಶಿಷ್ಟ್ಯ ನಮಗೆ ಅರಿವಾಗುತ್ತದೆ. ಸ್ತ್ರೀವಾದದ ಪ್ರಮುಖ ಆಶಯವೂ ಇದೆ. ಈ ವಿಮರ್ಶೆ ಓದುವ ರೀತಿಯನ್ನೇ ಬದಲಿಸುತ್ತದೆ.

ಸಂಪೂರ್ಣವಾಗಿ 'ಸ್ತ್ರೀ' ಕೇಂದ್ರಿತವಾದ ಜನಪದ ಮಹಾಕಾವ್ಯ 'ಸವದತ್ತಿ ಎಲ್ಲಮ್ಮ'ನ ಕಾವ್ಯ. ಎಲ್ಲಮ್ಮನ ಜನನ, ಬಾಲ್ಯ, ವಿವಾಹ, ದಾಂಪತ್ಯ ಜೀವನ ಮೊದಲ ಸಾಮಾನ್ಯ ಘಟ್ಟ. ಆದರೆ ಮುಂದಿನ ಎರಡನೆಯ ಘಟ್ಟ ವಿಶೇಷವಾದದ್ದು. ಇತರೆ ಎಲ್ಲಾ ಜನಪದ ಮಹಾಕಾವ್ಯಗಳಲ್ಲಿ ಪುರುಷದೇವರು ತಮ್ಮ ಜನಾಂಗದ ರಕ್ಷಕರಾಗಿದ್ದರೆ, ಇಲ್ಲಿ 'ಸ್ತ್ರೀ' ಆಸ್ಥಾನವನ್ನು ಪಡೆದಿದ್ದಾಳೆ. ಪುರುಷನ ಅನುಮಾನಕ್ಕೆ, ದೌರ್ಜನ್ಯಕ್ಕೆ ಬಲಿಯಾಗಿ ಅಗ್ನಿಕುಂಡವನ್ನು ಪ್ರವೇಶಿಸುವ ಅಥವಾ ಚಿತೆಯೇರುವ ಸ್ತ್ರೀ ಪಾತ್ರಗಳನ್ನು ಶಿವಪುರಾಣಗಳಲ್ಲಿ ಕಾಣಬಹುದು. ಆದರೆ ಜನಪದರು ಅದೇ ಹೆಣ್ಣನ್ನು ದೈವತ್ವಕ್ಕೆ ಏರಿಸಿರುವುದು ವಿಶೇಷವಾಗಿದೆ. ಎಲ್ಲಮ್ಮ ದುಷ್ಟರನ್ನು ನಿಗ್ರಹಿಸಿ, ಭಕ್ತರನ್ನು ಸಂಪಾದಿಸಿ ಐತಿಹಾಸಿಕ ವ್ಯಕ್ತಿಯಾಗಿ ನಿಲ್ಲುತ್ತಾಳೆ.

ಒಂದು ಜನಾಂಗದ ರಕ್ಷಕಳಾಗಿ, ಕುಲದೈವವಾಗಿ ಇಂದಿಗೂ ತನ್ನ ಸ್ಥಾನವನ್ನು ಎಲ್ಲಮ್ಮ ಉಳಿಸಿಕೊಂಡಿದ್ದಾಳೆ. ಮಾದಿಗ ಜನಾಂಗದ ದೈವವಾಗಿ, ಗ್ರಾಮದೇವತೆಯಾಗಿ ಇಂದಿಗೂ ಜೀವಂತಿಕೆಯ ಕುರುಹಾಗಿದ್ದಾಳೆ. ಮಂಟೇಸ್ವಾಮಿ, ಮಾದೇಶ್ವರ, ಮೈಲಾರ, ಜುಂಜಪ್ಪರಂತೆ ಎಲ್ಲಮ್ಮ ಸಹಾ ಇತಿಹಾಸದ ಪುಟಗಳಲ್ಲಿ ಕಾಣಬರುತ್ತಾಳೆ. ಈಕೆ ಸಾಮಾನ್ಯ ಸ್ತ್ರೀಯಾದರೂ ತದನಂತರದಲ್ಲಿ ಆಕೆಯ ಸಾಹಸ ಜೀವನದಿಂದ ದೈವತ್ವಕ್ಕೆ ಏರಿರಬಹುದು. ಎಲ್ಲಮ್ಮ ಪ್ರತಾಪರುದ್ರನ ಸಮಕಾಲೀನಳು ಮತ್ತು ರಟ್ಟರಲ್ಲಿ ಯಾರೋ ಒಬ್ಬ ಕಾರ್ತವೀರ್ಯನ ತಂಗಿಯೂ ಆಗಿದ್ದಳೆಂಬುದರಿಂದ ಎಲ್ಲಮ್ಮ ೧೨-೧೩ನೇ ಶತಮಾನಗಳ ಅಂತರದಲ್ಲಿ ಜೀವಿಸಿದ್ದಳೆಂದು ಊಹಿಸಬಹುದಾಗಿದೆ.

ಒಟ್ಟಾರೆ ಜನಪದ ಮಹಾಕಾವ್ಯಗಳಲ್ಲಿ 'ಸ್ತ್ರೀ ಪಾತ್ರ'ಗಳ ಚಿತ್ರಣ ವಿಭಿನ್ನವಾಗಿ ಮೂಡಿಬಂದಿದೆ. ಕಥಾಪುರುಷರೊಂದಿಗೆ ಅವರ ಮಹಿಮೆಯನ್ನು, ಹಿರಿಮೆಯನ್ನು ಎತ್ತಿಹಿಡಿಯುವಲ್ಲಿ ಈ ಪಾತ್ರಗಳ ನೆರವು ಗಮನಾರ್ಹವಾಗಿದೆ. ಸ್ತ್ರೀ ಪಾತ್ರಗಳನ್ನು ಪುರುಷ ಪಾತ್ರಗಳ ಏಳಿಗೆಗೆ ದುಡಿಸಿಕೊಂಡಿರುವುದು ನೋಡಿದರೆ ಕಾಲಾಂತರದಲ್ಲಿ ಸಂದರ್ಭಾನುಸಾರ ಉದ್ದೇಶಪೂರ್ವಕವಾಗಿ ಈ ಅಂಶಗಳು ಸೇರಿದಂತೆ ಇದೆ. ಮಹಾಕಾವ್ಯಗಳ ಬಿಡಿಬಿಡಿ ಭಾಗಗಳು ಹೆಚ್ಚಾಗಿ ಪುರುಷರಲ್ಲಿ ಮೌಲಿಕವಾಗಿ ಹಾಡುವ ಸಂಪ್ರದಾಯವನ್ನು ಗಮನಿಸಿದರೆ ಈ ವಾದಕ್ಕೆ ಮತ್ತಷ್ಟು ಪುಷ್ಟಿ ದೊರೆಯುತ್ತದೆ.

ಆದರೆ ಶಿಷ್ಟ ಮಹಾಕಾವ್ಯಗಳಿಗೆ ಹೋಲಿಸಿಕೊಂಡರೆ ಜನಪದ ಮಹಾಕಾವ್ಯಗಳಲ್ಲಿನ ಸ್ತ್ರೀ ಪಾತ್ರಗಳ ಸ್ಥಾನಮಾನವೇ ನೂರು ಪಾಲು ಲೇಸು ಎನಿಸುತ್ತದೆ. ರಾಮಾಯಣ, ಮಹಾಭಾರತ, ಭಗವದ್ಗೀತೆ, ವೇದಗಳಲ್ಲಿ ಸ್ತ್ರೀ ಶೋಷಿತಳು, ಕೇವಲ ಪುರುಷ ಹಾದಿಯನ್ನೇ ಹಿಡಿದು, ಪುರುಷನ ಸಾಧನೆಗಾಗಿಯೇ ದುಡಿದವಳು ಆದರೂ ಆ ಪಾತ್ರಗಳಿಗೆ ಅಲ್ಲಿ ನೀಡಿದ ಬಿರುದು ಯಾವುದು ? 'ಕರುಣಾಳು ರಾಘವನಲ್ಲಿ ತಪ್ಪಿಲ್ಲ, ಹೆಣ್ಣಾಗಿ ಹುಟ್ಟಿದ ತನ್ನದೇ ತಪ್ಪು' ಎನ್ನುವ ರಾಮಾಯಣ, 'ಹೆಣ್ಣು ಎಲ್ಲಾ ಕೆಡುಕಿನ ಮೂಲ' ಎನ್ನುವ ಮಹಾಭಾರತ, 'ಹೆಣ್ಣು ಪಾಪಿ, ಗುಲಾಮಳು' ಎನ್ನುವ ಭಗವದ್ಗೀತೆ, 'ಎಲ್ಲಾ ಪ್ರಾರ್ಥನೆಗಳು ಗಂಡು ಮಗುವಿಗಾಗಿ' ಎನ್ನುವ ವೇದಗಳು ಪುರುಷಪೂರ್ವಾಗ್ರಹಿತವೂ, ಲಿಂಗಾಧಾರಿತವೂ ಆಗಿದೆಯಲ್ಲದೆ, ಇವು ಪುರುಷರು ಪುರುಷರಿಗಾಗಿ ರಚಿಸಿದ ಸಾಹಿತ್ಯ ಎನ್ನುವುದರಲ್ಲಿ ಎರಡು ಮಾತಿಲ್ಲ.

**ಎಂ. ರೇಖಾ**
ಕನ್ನಡ ಉಪನ್ಯಾಸಕರು, ಸರ್ಕಾರಿ ಪದವಿಪೂರ್ವ ಕಾಲೇಜು
ಚೇಳೂರು - ೫೬೩ ೧೨೪, ಬಾಗೇಪಲ್ಲಿ ತಾಲೂಕು, ಚಿಕ್ಕಬಳ್ಳಾಪುರ ಜಿಲ್ಲೆ

# ಮೂರನೇ ಕಿವಿ







ಲೇಖಕರು : **ರವೀಂದ್ರಭಟ್ಟ**
ಪುಟ : ೧೪೬
ಬೆಲೆ : **ರೂ. ೯೦/-**
ಪ್ರಕಾಶಕರು : **ಸುಮುಖ ಪ್ರಕಾಶನ**
ನಂ. ೧೭೪-ಇ, ೧ನೇ ಮುಖ್ಯರಸ್ತೆ
ವಿದ್ಯಾರಣ್ಯ ನಗರ
ಮಾಗಡಿ ರಸ್ತೆ, ಬೆಂಗಳೂರು

'ಗಂಡನಿಗೆ ಹೆಂಡತಿಯಲ್ಲ, ಅತ್ತೆಗೆ ಸೊಸೆಯಲ್ಲ, ಇನ್ನೊಬ್ಬ ಮಗನಿದ್ದರೆ ಅವನಿಗೆ ತಾಯಿಯೂ ಅಲ್ಲ, ಅವಳ ತಾಯಿಗೆ ಅವಳು ಮಗಳೂ ಅಲ್ಲ, ಅತ್ತಿಗೆ ನಾದಿನಿ ಏನೂ ಅಲ್ಲ, ಅವಳು ಕಿವುಡು ಮಗುವಿನ ತಾಯಿಯಷ್ಟೆ. ಮಗು ಮಾತು ಕಲಿಯುವವರೆಗೆ ಅವಳು ಅವಳೇ ಅಲ್ಲ, ಅವಳಿಗೆ ಅವಳದ್ದು ಎನ್ನುವ ಕನಸುಗಳಿಲ್ಲ, ಮನಸೂ ಇಲ್ಲ, ಏನಿದ್ದರೂ ಮಗನಿಗೆ ಮಾತು ಕಲಿಸುವ ಯಂತ್ರ ಮಾತ್ರ'

**ಡಾ|| ಮಳಲಿ ವಸಂತಕುಮಾರ್**

ರವೀಂದ್ರಭಟ್ಟರ 'ಮೂರನೇ ಕಿವಿ' ಕನ್ನಡ ಸಾರಸ್ವತ ಲೋಕದಲ್ಲಿ ಬೆರಗು ಮೂಡಿಸಿದ ವಿಶಿಷ್ಟಕೃತಿ. ಈ ಬಗೆಯ ಕೃತಿ ಕನ್ನಡದಲ್ಲಿ ಇದೇ ಮೊದಲು. ಇದು ವಿಜ್ಞಾನ ಸಾಹಿತ್ಯವೂ ಅಥವಾ ಸಾಹಿತ್ಯ ವಿಜ್ಞಾನವೂ ಎಂಬ ಭಾವನೆ ಉಂಟುಮಾಡುತ್ತದೆ. ಆದರೆ ವಸ್ತು ಸ್ವರೂಪದಲ್ಲಿ ಇದು ಶ್ರವಣ ವಿಜ್ಞಾನ. ಬರವಣಿಗೆಯ ಅಂದ ಚೆಂದ ಒಪ್ಪ ಓರಣಗಳನ್ನು ನೋಡಿದರೆ, ಅದರಲ್ಲಿನ ಘಟನಾವಳಿಗಳನ್ನು ಗಮನಿಸಿದರೆ, ಪಾತ್ರ ಚಲನೆಗಳ ಜೀವಂತಿಕೆಯನ್ನು ಕಂಡರೆ ಇದು ಶುದ್ಧಾಂಗ ಸಾಹಿತ್ಯ ಕೃತಿ ಅಥವಾ ಶ್ರವಣ ಜ್ಞಾನ, ವಿಜ್ಞಾನ ಮತ್ತು ಸಾಹಿತ್ಯಾಂಶಗಳನ್ನು ಒಳಗೊಂಡ ಸಂಕೀರ್ಣ ಕೃತಿ. ಆದುದರಿಂದಲೇ ಇರಬೇಕು, ಲೇಖಕರು ಕೃತಿಯನ್ನು ಒಂದು ನಿರ್ದಿಷ್ಟ ಪ್ರಕಾರದಲ್ಲಿ ಹೆಸರಿಸಿಲ್ಲ. ಮೇಲುನೋಟಕ್ಕೆ ಇದು ಹದಿನಾಲ್ಕು ಬಿಡಿ ಲೇಖನಗಳ ಸಂಚಯ. ಲೇಖನಗಳು ಬಿಡಿಯಾದರೂ ಇಡೀ ಕೃತಿಯನ್ನು ತುಂಬಿರುವ ವಿಷಯ ಒಂದೇ. ಅದು ಮಗುವಿನ 'ಕಿವುಡುತನ'.

ಲೇಖನಗಳನ್ನು ಬಿಡಿಯಾಗಿಸದೆ ಹೋದರೆ ಈ ಕೃತಿ ನಾಲ್ಕು ಜೀವಂತ ಪಾತ್ರಗಳನ್ನೊಳಗೊಂಡ ಸುಂದರ ಕಾದಂಬರಿ. ಇಲ್ಲವಾದರೆ ಒಂದೊಂದು ಲೇಖನವೂ ಒಂದೊಂದು ಘಟನೆಯನ್ನುಳ್ಳ ಪುಟ್ಟ ಪುಟ್ಟ ಕತೆಗಳು ಅಥವಾ ವಸ್ತುವೊಂದನ್ನು ಕುರಿತ ಆತ್ಮೀಯ ಅಭಿವ್ಯಕ್ತಿಯ ರಮಣೀಯ ಪ್ರಬಂಧಗಳು. ಆದುದರಿಂದಲೇ ಈ ಕೃತಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಹೊಸ ಜಾಡೊಂದನ್ನು ನಿರ್ಮಿಸಿದ ಅಪರೂಪದ ಕೃತಿ ಎಂಬುದು. ಆಕೃತಿ ಯಾವುದೇ ಇರಲಿ, ಕೃತಿಯ ಒಡಲನ್ನು ತುಂಬಿಕೊಂಡಿರುವುದು ಮಾನವೀಯತೆಯ ಮೌಲ್ಯ. ಅಂತಃಕರಣ ಮಿಡಿಯುವ ಈ ಜೀವನ್ಮೌಲ್ಯ - ಕೃತಿಯ ಘನತೆಯನ್ನು ಹೆಚ್ಚಿಸಿದೆ. ಹುಟ್ಟು ಕಿವುಡಾದ ಮಗುವಿನ ಬಗ್ಗೆ ತಾಯಿ, ತಂದೆ, ಅಜ್ಜಿ ಹೊಂದಿದ ಮಾನವೀಯತೆಯ ಸ್ಪಂದನೆ, ಕ್ರಿಯಾಶಕ್ತಿ ತಾನೇ ಒಂದು ಅಸದೃಶ ಪಾತ್ರವಾಗಿ ಅದ್ಭುತ ಪರಿಣಾಮವನ್ನುಂಟುಮಾಡಿದೆ. ಕೃತಿ ಎಲ್ಲೂ ಕಟ್ಟುಕತೆಯ ಕಗ್ಗವಲ್ಲ. ಕಲ್ಪನೆಯ ಅಂಶಗಳೊಂದೂ ಇಲ್ಲ, ಎಲ್ಲವೂ ವಾಸ್ತವದ ನೆಲಗಟ್ಟಿನ ಮೇಲೆ ರೂಪಿತವಾದ ಜೀವ ವಿಜ್ಞಾನದ ಭಾಗ.

ವಿಧಿ ಮತ್ತು ವಿಜ್ಞಾನಕ್ಕೆ ಸವಾಲಾಗಿ ನಿಂತು ಅಹರ್ನಿಶಿ ಸೆಣಸಿದ ತಾಯಿ-ತಂದೆಯರು ಅಸಾಧ್ಯವಾದುದನ್ನು ಸಾಧಿಸಿದ ಮಹಾನ್ ಸಾಧಕರು. ಇದೊಂದು ನೇರವಾಗಿ ವ್ಯಕ್ತಿಗತ ಸಾಧನೆಯಾದರೂ ಪರೋಕ್ಷವಾಗಿ ಸಾರ್ವತ್ರಿಕ ಸಮಾಜದ ಆರೋಗ್ಯಕ್ಕೆ ದಾರಿದೀಪವಾದ ಕೃತಿ. ಇದು ಇಂಗ್ಲಿಷ್ ಭಾಷೆಗೆ ಅನುವಾದವಾದರೆ ವಿಶ್ವವ್ಯಾಪಿಯಾದ ಮಾರ್ಗದರ್ಶಿ ಕೃತಿಯಾಗುವುದರಲ್ಲಿ ಸಂದೇಹವಿಲ್ಲ.

ಹಾಗೆ ನೋಡಿದರೆ, ಇದು ವೈಯಕ್ತಿಕ ಅನುಭವ ಜನ್ಯ ಕೃತಿ. ತಮ್ಮ ಮನೆಯದೇ ಸಮಸ್ಯೆ; ತಮ್ಮ ಮಗುವಿನದೇ ತೊಂದರೆ. ಶ್ರೀಮತಿ ದೀಪಾ ಮತ್ತು ಶ್ರೀ ರವೀಂದ್ರಭಟ್ಟರಿಗೆ ಇಬ್ಬರು ಗಂಡು ಮಕ್ಕಳು; ನಿಕೇತನ, ನಿರಂಜನ. ನಿಕೇತನ ದೊಡ್ಡವನು, ನಿರಂಜನ ಚಿಕ್ಕವನು. ನಿರಂಜನ ಹುಟ್ಟಿನಿಂದಲೇ ಕಿವುಡ. ಅವನಿಗೆ ಮಾತು ಬಾರದು ಎಂಬುದು ತಿಳಿದಾಗ ತಂದೆ ತಾಯಂದಿರಿಗಾದ ನೋವು ಹೃದಯದಲ್ಲಿ ಸಿಡಿಮದ್ದನಿಟ್ಟಂತೆ. ಅವರ ಅಂತರಂಗದ ಸಂಕಟ ಅಳೆಯಲಾರದ್ದು; ಅದು ಕಣ್ಣೀರ ಕಡಲಾಗಿ ಹರಿಯಿತು. ನಿರಾಶೆಯ ಪಾತಾಳಕ್ಕೆ ಬಿದ್ದ ಈ ದಂಪತಿಗಳು ಆಶಾವಾದದ ವೃಕ್ಷವನ್ನೇರಿ ಗೆಲುವಿನ ನಗೆ ಬೀರಿದ್ದು ಸಾಮಾನ್ಯ ಸಂಗತಿಯಲ್ಲ. ಈ ಮಧ್ಯೆ ಅವರು ಪಟ್ಟಪಾಡು, ತ್ಯಾಗ, ದುಡಿಮೆ, ಪರಿಶ್ರಮ, ತಾಳ್ಮೆ ಎಲ್ಲವೂ ಸಾಧನೆಯ ಹಾದಿಯ ವಿವಿಧ ಮೆಟ್ಟಿಲುಗಳೆಂದೇ ಹೇಳಬೇಕು. ಮಗುವಿಗೆ ಮಾತು ಬಾರದೆಂಬುದನ್ನು ತಿಳಿದೊಡನೆಯೇ ಕ್ಷಣವೂ ತಡಮಾಡದೆ ತಾಯಿ- ತಂದೆಯರು ಅದಕ್ಕೆ ಮಾತು ಕಲಿಸುವ ಪ್ರಯತ್ನ ಮಾಡಿದ್ದು ಬಹಳ ಮುಖ್ಯವಾದ ಅಂಶ. ಸಕಾಲದಲ್ಲಿ ವಹಿಸಿದ ಎಚ್ಚರಿಕೆ ಮಗುವಿನ ಭವಿಷ್ಯದ ರಕ್ಷಣೆಯ ವಜ್ರ ಕವಚವಾಯಿತೆಂದೇ ಹೇಳಬೇಕು. ಸಮಯಪ್ರಜ್ಞೆ ಉಳಿದೆಲ್ಲಾ ಪ್ರಜ್ಞೆಗಳಿಗಿಂತ ಉತ್ತಮವಾದುದು.

ಮಗುವಿಗೆ ಒಂದೊಂದು ಅಕ್ಷರ ಕಲಿಸುವಾಗಲೂ ದೀಪಾ ತಾಯಿಯವರು ತಮ್ಮೆಲ್ಲ ಶಕ್ತಿ ಸಾಮರ್ಥ್ಯವನ್ನು ಉಕ್ತಿ ಕೌಶಲಗಳನ್ನು ಬಳಸಿದ್ದಾರೆ. ತಮ್ಮೆಲ್ಲ ಸುಖಗಳನ್ನು ದೃಢನಿರ್ಧಾರದಿಂದ ತ್ಯಜಿಸಿದ್ದಾರೆ. ವ್ಯಕ್ತಿ ಸಂಬಂಧದ ಎಲ್ಲ ನಂಟನ್ನೂ ಕಳಚಿಕೊಂಡು, ಕಿವುಡ ಕಂದನಿಗೆ ಮಾತು ಕಲಿಸುವ ತಾಯಿಯಾಗಿದ್ದಾರೆ. 'ಗಂಡನಿಗೆ ಹೆಂಡತಿಯಲ್ಲ, ಅತ್ತೆಗೆ ಸೊಸೆಯಲ್ಲ, ಇನ್ನೊಬ್ಬ ಮಗನಿದ್ದರೆ ಅವನಿಗೆ ತಾಯಿಯೂ ಅಲ್ಲ, ಅವಳ ತಾಯಿಗೆ ಅವಳು ಮಗಳೂ ಅಲ್ಲ, ಅತ್ತಿಗೆ ನಾದಿನಿ ಏನೂ ಅಲ್ಲ, ಅವಳು ಕಿವುಡು ಮಗುವಿನ ತಾಯಿಯಷ್ಟೆ. ಮಗು ಮಾತು ಕಲಿಯುವವರೆಗೆ ಅವಳು ಅವಳೇ ಅಲ್ಲ, ಅವಳಿಗೆ ಅವಳದ್ದು ಎನ್ನುವ ಕನಸುಗಳಿಲ್ಲ, ಮನಸೂ ಇಲ್ಲ, ಏನಿದ್ದರೂ ಮಗನಿಗೆ ಮಾತು ಕಲಿಸುವ ಯಂತ್ರ ಮಾತ್ರ' (ಪುಟ ೭೦). ಬಹುಶಃ ತಾಯಿಯ ತ್ಯಾಗದ ಹಿರಿಮೆಯನ್ನು ಇದಕ್ಕಿಂತ ಅರ್ಥವತ್ತಾಗಿ ಚಿತ್ರಿಸಲು ಸಾಧ್ಯವಿಲ್ಲ. ದೀಪಾ ತಾಯಿ ಸ್ವತಃ ಶ್ರೇಷ್ಠ ಗಾಯಕಿಯಾಗಿದ್ದರೂ, ಅದಕ್ಕೆಲ್ಲ ತಿಲಾಂಜಲಿ ಕೊಡುತ್ತಾರೆ. ಇನ್ನು ಮಗು 'ಅಮ್ಮ', 'ಅಪ್ಪ' ಎಂಬುದನ್ನು ಕಲಿತಾಗ ತಾಯಿ-ತಂದೆಯರಿಗೆ ಸ್ವರ್ಗ ಮೂರೇ ಗೇಣು. ಎಲ್ಲ ಅಕ್ಷರಗಳನ್ನು ವೈಜ್ಞಾನಿಕ ವಿಧಾನದಲ್ಲಿಯೇ ಹೇಳಿ ಕೊಡುತ್ತಾರೆ. ಕನ್ನಡದ ನುಡಿ ದನಿಯಾಗುವ ಬಗೆಯ ಬಗ್ಗೆ

ಬರೆಯುತ್ತಾ... 'ಕನ್ನಡದಲ್ಲಿ ಹಲವಾರು ಅಕ್ಷರಗಳಿಗೆ ತುಟಿಯ ಚಲನೆಯ ಅಗತ್ಯವೇ ಇರುವುದಿಲ್ಲ. ಗಂಟಲು, ನಾಲಿಗೆ ಮತ್ತು ಮೂಗಿನ ಸಹಾಯದಿಂದ ಅಕ್ಷರಗಳೂ ಹೊರಬರುತ್ತವೆ. ನಿಮ್ಮಷ್ಟಕ್ಕೆ ನೀವು ಸುಮ್ಮನೆ ಕುಳಿತುಕೊಂಡು ಅ, ಆ, ಇ, ಈ ಹೇಳಿಕೊಳ್ಳುತ್ತಾ ಹೋಗಿ, ಮೊಟ್ಟಮೊದಲ ಅಕ್ಷರ ಅ ಮತ್ತು ಆ ಗಳು ಗಂಟಲಿನಲ್ಲಿ ಉತ್ಪಾದನೆಯಾಗುತ್ತವೆ. ಇ, ಈ ಅಕ್ಷರಗಳಿಗೂ ತುಟಿ ಚಲಿಸುವುದಿಲ್ಲ, ಎ, ಏ, ಐ ಅಕ್ಷರಗಳಿಗೂ ತುಟಿಯ ತಂಟೆಯೇ ಬೇಡ. ಅ ಅಕ್ಷರವಂತೂ ಇನ್ನೂ ಕಷ್ಟ. ಅದೇ ರೀತಿ ಕ ಖ ಗ ಘ ಸೇರಿದಂತೆ ಬಹುತೇಕ ಅಕ್ಷರಗಳಿಗೆ ತುಟಿಯ ಉಪಯೋಗವೇ ಆಗುವುದಿಲ್ಲ. ಹೀಗಾಗಿ ಕಿವುಡ ಮಕ್ಕಳೂ ತುಟಿಯ ಚಲನೆಯನ್ನು ನೋಡಿ ಮಾತನ್ನು ಗ್ರಹಿಸುತ್ತವೆಯಾದರೂ, ಮೊಟ್ಟ ಮೊದಲ ಬಾರಿಗೆ ಅವರಿಗೆ ಮಾತನ್ನು ಕಲಿಸುವಾಗ ಅಕ್ಷರದಿಂದ ಕಲಿಸಲು ಸಾಧ್ಯವಾಗುವುದಿಲ್ಲ' (ಪುಟ ೨೯) ಎಂದು ಹೇಳುತ್ತಾರೆ.

ರವೀಂದ್ರಭಟ್ಟರ ಭಾಷಾ ವಿಜ್ಞಾನದ ಜ್ಞಾನ ಶ್ರವಣ ವಿಜ್ಞಾನದ ನೆರವಿಗೆ ಬರುತ್ತದೆ. ಅದರ ಪ್ರಯೋಗಶೀಲತೆ ಮಗುವಿಗೆ ಮಾತು ಕಲಿಸುವಲ್ಲಿ ಉದ್ದಕ್ಕೂ ಸಹಕಾರಿಯಾಗುತ್ತದೆ. ತಂದೆ ತಾಯಿ ಇಬ್ಬರೂ ಒಳ್ಳೆಯ ವಿದ್ಯಾವಂತರಾದುದರಿಂದ ಮಗುವಿಗೆ ಮಾತು ಕಲಿಸುವುದಕ್ಕೆ ಅನುಕೂಲವಾಗುತ್ತದೆ. ಹೀಗಾಗಿ ಇದೊಂದು ಪ್ರಯೋಗಾತ್ಮಕ ಸಾಧನೆ ಎಂದು ಹೇಳಬಹುದು. ಸ್ಪರ್ಶಜ್ಞಾನದ ಮೂಲಕ ನಡೆಸುವ ಅಭ್ಯಾಸ ಸಹ ಈ ನಿಟ್ಟಿನಲ್ಲಿ ಗಮನಾರ್ಹ ಅಂಶವಾಗಿದೆ. ಸಾದೃಶ ಪಾಠಗಳಿಂದ, ದೃಷ್ಟಾಂತಗಳ ಬಳಕೆಯಿಂದ ಮಗುವಿಗೆ ಅರಿವು ಮೂಡಿಸಿದ್ದೂ ಉಂಟು. ಒಂದೊಂದು ಅಕ್ಷರ ಕಲಿಸಲು ಎಂಟೆಂಟು ದಿನ ತೆಗೆದುಕೊಂಡದ್ದೂ ಉಂಟು. ಊಟವೂ ಪಾಠವಾದ ಸಂದರ್ಭಗಳೂ ಇವೆ. ಅನಿವಾರ್ಯತೆಯನ್ನೂ ಉಂಟುಮಾಡಿ ಬಾಲಕನ ಬಾಯಿಯಲ್ಲಿ ಶಬ್ದ ಹೊರಡಿಸುವುದು ಕಲಿಕೆಯ ಒಂದು ಭಾಗವಾಯಿತು. ಬೇರೊಂದು ಮನೆಯಲ್ಲಿ ಸತ್ತವರಿಗಾಗಿ ನಡೆಯುವ ಗೋಳಾಟವನ್ನೇ ಮಾತು ಕಲಿಸುವ ಪಾಠಕ್ಕೆ ಪೀಠಿಕೆ ಆಗಿಸಿದ್ದೂ ಉಂಟು. ಕೊನೆಗೆ ದೀಪಾ ತಾಯಿ ಸುಖ ದುಃಖ, ಒಳಿತು-ಕೆಡುಕು, ಔಚಿತ್ಯ-ಅನೌಚಿತ್ಯ, ಮಾನ-ಅವಮಾನ ಇವುಗಳಾವುದನ್ನೂ ಪರಿಗಣಿಸದೆ ಅವನ ಬೋಧನೆ ಒಂದನ್ನೇ ಪರಿಗಣನೆಗೆ ತೆಗೆದುಕೊಂಡರು. ಎಷ್ಟೋ ವೇಳೆ ಬೋಧನೆಯ ಕಷ್ಟವನ್ನು ಸಹಿಸಲಾರದೆ ನಿರಂಜನ ತಾಯಿ ತಂದೆಯರ ಮೇಲೆ ಸಂಘರ್ಷಕ್ಕಿಳಿದದ್ದೂ ಉಂಟು. ಮಗುವಿನ ಬಟ್ಟೆ ಬಿಚ್ಚಿ ಅವನಿಗೆ ಅವಮಾನದ ಅರಿವು ಮೂಡಿಸಿದ್ದೂ ಆಯಿತು. ಕತೆಗಳ ಮೂಲಕ ಪಾಠ ಮಾಡುವ ಪರಿಣಾಮಕಾರಿ ಪ್ರಯತ್ನವಾಯಿತು. ಮುಖ್ಯವಾಗಿ ಮಾತೆಯ ಮಾತಿನ ಥೆರಪಿ ಫಲಶ್ರುತಿಯನ್ನು ನೀಡಿತು. ಇಲ್ಲಿ ಮುಖ್ಯವಾಗಿ ಹೇಳಬೇಕಾದ ಮಾತೆಂದರೆ, ಈ ತಂದೆ ತಾಯಿಗಳು ಅವನಿಗೆ ಮಾತು ಕಲಿಸುವ ಎಲ್ಲ ಸಂದರ್ಭಗಳಲ್ಲಿ ತಾವು ಸಹ ಅನೇಕ ವಿಷಯಗಳನ್ನು ಜೀವನದ ಪಾಠಗಳನ್ನು ಕಲಿತರೆಂಬುದು. ಮಾತಿನ ಥೆರಪಿ ಪ್ರತ್ಯಕ್ಷವಾಗಿ ನಿರಂಜನನ ಶ್ರವಣದೋಷ ನಿವಾರಣೆಗೆ ನೆರವಾದರೆ, ಪರೋಕ್ಷವಾಗಿ ತಮ್ಮ ಅರಿವಿನ ವಿಕಾಸಕ್ಕೂ ಸಹಾಯವಾಯಿತು. 'ಮೂರನೇ ಕಿವಿ' ಮುಖ್ಯವಾಗಿ ಶಾಸ್ತ್ರಗ್ರಂಥ. ಭಟ್ಟರ ಸರಳ ಸುಂದರವಾದ ಶೈಲಿ ಈ ಶಾಸ್ತ್ರೀಯತೆಯ ಪ್ರೌಢಿಮೆಯನ್ನು ಇಲ್ಲವಾಗಿಸಿ ರವೀಂದ್ರರಿಗಿರುವ ಉತ್ತಮ ಹಾಸ್ಯಪ್ರಜ್ಞೆ ಬರಹಕ್ಕೆ ಒಂದು ಉಲ್ಲಾಸದ ಚೆಲುವನ್ನು ತಂದುಕೊಟ್ಟಿದೆ. ಅಂತಹ ಒಂದು ಪ್ರಸಂಗ: ಮಗನಿಗೆ ಬೈಗುಳವನ್ನೂ ಕಲಿಸಬೇಕು ಎಂಬುದು ಅಪ್ಪನ ಆಸೆ. ಅದಕ್ಕಾಗಿ ಅವನಿಗೆ ಬೋ-ಮಗನೆ ಎಂಬ ಮಾತಿನ ಕಲಿಕೆ. ಮಗ ಆ ಮಾತನ್ನು ಕಲಿತು ಅದನ್ನು ಅಪ್ಪನ ಮೇಲೆ ಪ್ರಯೋಗಿಸಿದ. ಸೈಕಲ್ ತಂದು ಕೊಡೊ ಬೋ-ಮಗನೆ ಎಂದ. ಮಾಡಿದ್ದುಣ್ಣೋ ಮಹಾರಾಯ, ಆದರೆ ಅಪ್ಪ ಕೋಪಿಸಿಕೊಳ್ಳಲಿಲ್ಲ. ಬದಲಿಗೆ ಅವನನ್ನು ಆನಂದದಿಂದ ಅಪ್ಪಿ ಮುದ್ದಾಡಿದ್ದು ಮಾತ್ರವಲ್ಲ, ಆ ಮಾತಿನ ಅಪಾರ್ಥದ ಅರಿವು ಮೂಡಿಸಿ ಮುಂದೆಂದೂ ಅದನ್ನು ಉಚ್ಚರಿಸದಂತೆ ಎಚ್ಚರಿಸಿದರು. ಇದು ಲೇಖಕರ ಪ್ರಾಜ್ಞ ವ್ಯಕ್ತಿತ್ವಕ್ಕೆ ಕೈಗನ್ನಡಿ. ಇಲ್ಲಿಯೇ ಹೇಳಬೇಕಾದ ಇನ್ನೊಂದು ಸಂಗತಿ ಲೇಖಕರಿಗಿರುವ ಜಾತ್ಯತೀತ ನಿಲುವು. ಅವರು ತಮ್ಮ ದೊಡ್ಡ ಮಗ ನಿಕೇತನನಿಗೆ ''ನೋಡು ಸಮಾಜದಲ್ಲಿ ಜಾತಿ ಎನ್ನುವುದಿಲ್ಲ, ಕೇವಲ ಎರಡೇ ಜಾತಿ. ಒಂದು ಗಂಡು ಮತ್ತೊಂದು ಹೆಣ್ಣು ಜಾತಿ. ಅದನ್ನು ಬಿಟ್ಟು ಯಾರನ್ನೂ ಜಾತಿ ಕೇಳಬಾರದು. ಜಾತಿಯ ಹೆಸರಿನಲ್ಲಿ ಮೇಲು-ಕೀಳು ಎನ್ನುವ ಭಾವನೆಯನ್ನು ತೋರಬಾರದು'' ಎಂದು ಹೇಳಿದರು. ಬಹುಶಃ ಮಕ್ಕಳನ್ನು ಭವಿಷ್ಯದಲ್ಲಿ ಸತ್ಪ್ರಜೆಗಳನ್ನಾಗಿ ರೂಪಿಸುವಲ್ಲಿ ತೋರುವ ಇಂತಹ ಇರಾದೆ ಮಹತ್ವದ್ದು ಎಂಬುದು ನನ್ನ ಭಾವನೆ. ಮೇಲಿನ ಯಾವುದೇ ವಿಷಯಗಳನ್ನು ಮನಮುಟ್ಟುವಂತೆ ಹೇಳುವ ಲಲಿತ ಶೈಲಿ ರವೀಂದ್ರಭಟ್ಟರಿಗೆ ಕರಗತವಾಗಿದೆ. ಈ ಕೃತಿಯ ಪ್ರಮುಖ ಆಕರ್ಷಣೆಗಳಲ್ಲಿ ಅದೂ ಒಂದು. ಹಿತಮಿತವಾದ ಒಪ್ಪ ಓರಣದ ಮುದ್ದಾದ ಬರವಣಿಗೆ. ಬಹುಶಃ ಸ್ವತಃ ಪತ್ರಕರ್ತನಾಗಿರುವುದೂ ಇದಕ್ಕೆ ಕಾರಣ ಇರಬಹುದು. ಜಗತ್ತಿನಲ್ಲಿ 'ಶೈಲಿ'ಯನ್ನು ಕುರಿತು ಮರ್ರೆ ಎಂಬ ಇಂಗ್ಲಿಷ್ ಲೇಖಕ ಮಹಾ ಕೃತಿಯೊಂದನ್ನು ರಚಿಸಿದ್ದಾನೆ. ಅದರಲ್ಲಿ ಒಂದೆಡೆ ಅವನು, "A style is that by which one personality moves another" ಎಂದು ಹೇಳುತ್ತಾನೆ. ಈ ಮಾತು ಕುಮಾರವ್ಯಾಸ ಕವಿಯ ಭಾರತ ಮಹಾಕಾವ್ಯಕ್ಕೆ (ಕರ್ನಾಟಕ ಭಾರತ ಕಥಾಮಂಜರಿ) ಅಥವಾ ಅಂತಹ ಮಹಾಕಾವ್ಯಗಳಿಗೆ ಅನ್ವಯಿಸುತ್ತದೆಯಾದರೂ, ಪರಿಣಾಮದ ದೃಷ್ಟಿಯಿಂದ ಆಂಶಿಕವಾಗಿ ರವೀಂದ್ರಭಟ್ಟರ 'ಮೂರನೇ ಕಿವಿ'ಗೂ ಅನ್ವಯಿಸುತ್ತದೆ. ಆದರೆ ನಮ್ಮ ಮಹಾಲಿಂಗ ರಂಗ ಕವಿ ಹೇಳಿದ,

*ಸುಲಿದ ಬಾಳೆಯ ಹಣ್ಣಿನಂದದಿ*
*ಕಳೆದ ಸಿಗುರಿನ ಕಬ್ಬಿನಂದದಿ*
*ಅಳಿದ ಉಷ್ಣದ ಹಾಲಿನಂದದಿ*
*ಸುಲಭವಾಗಿಪ ಕನ್ನಡದಿ*
*ತಿಳಿದು ತನ್ನೊಳು ತನ್ನ ಮೋಕ್ಷವ*
*ಗಳಿಸಿಕೊಂಡೊಡೆ ಸಾಲದೆ ಸಂಸ್ಕೃತದೊಳಿನ್ನೇನು*

-ಎಂಬ ಮಾತು ಮನನೀಯ. ಈ ಕವಿ ಹೇಳಿದ ಕನ್ನಡ ಭಾಷೆಯ ಸೊಗಸು ನಮ್ಮ ರವೀಂದ್ರಭಟ್ಟರ ಕೃತಿ ಪೂರ್ಣ ಪ್ರಮಾಣದಲ್ಲಿ ಅನ್ವಯಿಸುತ್ತದೆ. ಪ್ರಸ್ತುತ ಕೃತಿಯಿಂದ ಒಂದೆರಡು ನಿದರ್ಶನಗಳನ್ನು ಕಾಣಬಹುದು. 'ಅವನು ಹುಟ್ಟು ಕಿವುಡ ಎನ್ನುವುದು ಗೊತ್ತಾದ ತಕ್ಷಣವೇ ನಮ್ಮ ಮನೆಯ ಬೆಳಕೆಲ್ಲಾ ಆರಿಹೋಯಿತು' (ಪುಟ ೬೦). 'ದೀಪಾಳ ಕಣ್ಣಲ್ಲಿ ನೀರಾದರೂ ಬರುತ್ತಿತ್ತು. ಆದರೆ ನನ್ನ ಕಣ್ಣುಗಳು ಬತ್ತಿಹೋಗಿದ್ದವು. ನಿರಂಜನ ಮಾತ್ರ ದಾರಿಯಲ್ಲಿ ಸಿಡಿಯುವ ಪಟಾಕಿಯ ಬೆಳಕನ್ನು ಕಂಡು ನಗುತ್ತಲೇ ಇದ್ದ. ಅವನ ಕಣ್ಣುಗಳಲ್ಲಿ ಬೆಳಕಿನ ಚಿತ್ತಾರಗಳಿದ್ದವು. ಬಣ್ಣ ಬಣ್ಣದ ಬೆಳಕು ಚೆಲ್ಲಾಟವಾಡುತ್ತಿದ್ದವು' (ಪುಟ ೬೦). 'ಪ್ರತಿದಿನ ಪ್ರತಿಕ್ಷಣ ಹೊಸ ಹೊಸ ಅನುಭವ. ಅದು ಮಗ ಕೊಟ್ಟ ಬಹುಮಾನ' (ಪುಟ ೧೧೫). 'ನಿರಂಜನ ಈಗ ಮಾತನಾಡುತ್ತಾನೆ ನಿಜ. ಎಲ್ಲರೊಂದಿಗೂ ವ್ಯವಹರಿಸುತ್ತಾನೆ. ಓದುಬರಹ ಯಾವುದರಲ್ಲಿಯೂ ತೊಂದರೆ ಇಲ್ಲ. ಆದರೂ ನೋವಿನ ಮಿಂಚು ನನ್ನಲ್ಲಿ ಹರಿಯುತ್ತಲೇ ಇತ್ತು. ಯಾಕೆಂದರೆ ಆತ ಯಾವುದೇ ಇಂಪಾದ ಹಾಡುಗಳನ್ನು ಕೇಳಿಸಿಕೊಳ್ಳಲಾರ. ಕೊಳಲಿನ ನಿನಾದ, ವೀಣೆಯ ಧ್ವನಿ, ತಬಲಾ, ಘಟಂ, ಚೆಂಡೆಯ ಅಬ್ಬರ, ಕೋಗಿಲೆಯ ದನಿ, ಹಕ್ಕಿಗಳ ಕಲರವ, ಯಾವುದನ್ನೂ ಸವಿಯಲಾರ ಎನ್ನುವುದು ನನ್ನ ಕೊರಗಿಗೆ ಕಾರಣವಾಗಿತ್ತು (ಪುಟ ೧೧೬). 'ಆದರೆ ಹಾಡು ಕೇಳಿಸಿಕೊಳ್ಳುವುದಕ್ಕಿಂತ ಬದುಕನ್ನೇ ಹಾಡಾಗಿಸಿಕೊಳ್ಳುವುದು ಮುಖ್ಯ. ಅವನ ಬದುಕೊಂದು ಭಾವಗೀತೆಯಾಗಲಿ' (ಪುಟ ೧೧೭). ಹೀಗೆ ಪದ್ಯಗಂಧಿಯಾದ ಗದ್ಯ ನಿಜಕ್ಕೂ ಆಹ್ಲಾದಕಾರಿ. 'ಆವುದಾದರೂ ನೆಪಂ ಫಲದಾಯಕಂ ತಪಂ' ಎನ್ನುವ ಕುವೆಂಪು ವಾಣಿಯಂತೆ ದೀಪಾ ತಾಯಿ ಮಗ ನಿರಂಜನನಿಗೆ ಮಾಡಿದ ಮಾತಿನ ಥೆರಪಿ ಕನ್ನಡದಲ್ಲಿ 'ಮೂರನೇ ಕಿವಿ' ಎಂಬ ಮಹತ್ವದ ಕೃತಿ ರಚನೆಗೆ ಕಾರಣವಾಯಿತು. ದೀಪಾ ಎನ್ನುವ ಹೆಸರು ಮಗನ ಬಾಳಿನ ಕತ್ತಲೆಯನ್ನು ಅಳಿಸಿ ಅನ್ವರ್ಥವಾಯಿತು. ಶ್ರೀಮತಿ ದೀಪಾ ಅವರು ತ್ಯಾಗದ ತೌರು, ಮಹಾಮಾತೆ. ಈ ಕೃತಿಯಲ್ಲಿ ನಿರಂಜನ, ದೀಪಾ ತಾಯಿ, ರವೀಂದ್ರಭಟ್ಟ, ನಿಕೇತನ, ಮೀನಾಕ್ಷಮ್ಮ ಎಲ್ಲರೂ ಪಾತ್ರಧಾರಿಗಳೇ. ನಿರಂಜನನ ಕಿವುಡು ನೀಗಿಸುವುದರಲ್ಲಿ ಕ್ರಿಯೆಗೊಳ್ಳುವ ಇವರ ಶಕ್ತಿ ಮನೋವಿಜ್ಞಾನದ ಹಿನ್ನೆಲೆಯಲ್ಲಿ ಮಹತ್ವದ್ದಾಗುತ್ತದೆ. ಇದೊಂದು ಕಠಿಣ ಸಾಧನೆಯ ಅಪಾರ ಪರಿಶ್ರಮದ ತಪಸ್ಸಿನ ಫಲವಾಗಿ ಬಂದ ಯಶಸ್ಸು. ಈ ಯಶಸ್ಸು ಲೋಕೋಪಯೋಗಿಯಾಗಬೇಕು. ರವೀಂದ್ರಭಟ್ಟರ 'ಮೂರನೇ ಕಿವಿ' ಇಂಗ್ಲಿಷಿಗೆ ಅನುವಾದಗೊಳ್ಳಬೇಕು. ತನ್ಮೂಲಕ ಭಾರತದಾದ್ಯಂತ ಮಾತ್ರವಲ್ಲ, ವಿಶ್ವದಾದ್ಯಂತ ಇರುವ ಶ್ರವಣ ವಿಜ್ಞಾನ ಕೇಂದ್ರಗಳಲ್ಲಿ ಇದು ಪಠ್ಯವಾಗಿ ನಿಯಮಿತವಾಗಬೇಕು. ಕೊನೆಯ ಪಕ್ಷ ಪರಾಮರ್ಶನ ಗ್ರಂಥಗಳಲ್ಲಿ ಒಂದಾಗಿಯಾದರೂ ಸೇರ್ಪಡೆಯಾಗಬೇಕು. ಏಕೆಂದರೆ ಇಲ್ಲಿನ ಪ್ರಯೋಗ ಪೂರ್ಣ ಯಶಸ್ಸಿನ ತಂತ್ರಾಂಶಗಳು ಶ್ರವಣದೋಷ ಇರುವ ಎಲ್ಲರಿಗೂ ನೆರವಾಗಬೇಕು. ಮುಖ್ಯವಾಗಿ ಪ್ರೀತಿ, ಅನುಕಂಪ, ದಯೆಯಿಂದ ಕೂಡಿದ ಮಾನವೀಯತೆ ವಿಜ್ಞಾನದೊಡನೆ ಸೇರಿ ಸಾಧಿಸಿದ ಯಶಸ್ಸು ಜಗತ್ತಿಗೆ ಮಾದರಿಯಾಗಬೇಕು. ಕೃತಿಯ ಹಿನ್ನೆಲೆಯಲ್ಲಿ ಲೇಖಕರ ಅಧ್ಯಾತ್ಮ ಪ್ರಧಾನವಾದ ಮನಸ್ಸಿನ ಸೂಕ್ಷ್ಮಪ್ರಜ್ಞೆ ಕೆಲಸ ಮಾಡಿರುವುದನ್ನು ಗುರುತಿಸಬಹುದು.

**ಡಾ|| ಮಳಲಿ ವಸಂತಕುಮಾರ್**
'ಭೂಮಿತಾಯಿ ತೋಟ', ಕಳಲವಾಡಿ, ಉದ್ಬೂರು ಅಂಚೆ
ಮೈಸೂರು (ದಕ್ಷಿಣ) ಜಿಲ್ಲೆ - ೫೭೦ ೦೦೮

# ಜರ್ಮನಿ ಕಾರಾಗೃಹದ ಕತ್ತಲಲ್ಲಿ ಬೆಳಕು ಕಂಡ 'ಔಸಬಂದ್'

ಡಾ॥ ಬಿ. ಎ. ಸನದಿ

ಅಮೇರಿಕೆಯಲ್ಲಿ ಏನು ನೋಡಿದರೂ ಹೊರಗಿನವರು 'ಆ-ಹಾ !' ಎಂದು ಬಾಯಿ ತೆರೆದು ತಮಗಾದ ಬೆರಗನ್ನು ವ್ಯಕ್ತಗೊಳಿಸುವುದು ರೂಢಿಯಾಗಿ ಬಿಟ್ಟಿದೆ. ಈ ಮೊದಲು ನಮ್ಮ ಹಲವೊಂದು ಲೇಖಕರು ಈ ದೇಶಕ್ಕೆ ಬಂದಾಗಲೂ ಅಮೇರಿಕೆಯನ್ನು ಹಾಡಿ ಹೊಗಳಿ ತಮ್ಮ ಪ್ರವಾಸ-ಕಥನಗಳನ್ನು ಬರೆದದ್ದುಂಟು. 'ನಮಗೆ ಏನಾದರೂ ಹೊಸದನ್ನು – ಅಂದರೆ ಬಹಳಷ್ಟು ಜನ ನೋಡದೇ ಇರುವುದನ್ನು ತೋರಿಸಪ್ಪ' ಎಂದು ನಾನು ಮಗನಿಗೆ ವಿನಂತಿಸಿಕೊಂಡೆ. 'ಆಗಲಿ ನೋಡೋಣ' ಎಂದು ಒಂದು ವಾರದಲ್ಲಿ ತನ್ನ ಮಿತ್ರರೊಡನೆ ಚರ್ಚಿಸಿ, ಈಗ ನಾವಿರುವ ಡಲ್ಲಾಸ್ ನಗರದಿಂದ ವಾಷಿಂಗ್ಟನ್ ಡಿ.ಸಿ.ಗೆ ಹೋಗುವ ಕಾರ್ಯಕ್ರಮ ಹಾಕಿಕೊಂಡ. ವಾಶಿಂಗ್ಟನ್ ಡಿ.ಸಿ. ಅಮೇರಿಕೆಯ ರಾಜಧಾನಿ. ಅಮೇರಿಕೆಯ ರಾಷ್ಟ್ರಾಧ್ಯಕ್ಷರ ಕಾರ್ಯಾಲಯವಿರುವ ಶ್ವೇತಭವನವೇ ಅದರ ಕೀರ್ತಿಯ ಹೆಗ್ಗುರುತು. ಅಲ್ಲಿ ಹೋದ ಬಳಿಕ, ಶ್ವೇತಭವನವಲ್ಲದೆ, ಇತರ ಸ್ಮಾರಕ ಭವನಗಳು, ಮ್ಯೂಜಿಯಂಗಳು, ಪಾರ್ಲಿಮೆಂಟ್ ಭವನ (ಕ್ಯಾಪಿಟಲ್) ಇತ್ಯಾದಿಗಳಲ್ಲದೆ ಖಲಿಲ್ ಜಿಬ್ರಾನ್ ಉದ್ಯಾನವನ್ನು ನೋಡಿ ಬಹಳೇ ಖುಷಿ ಆಯಿತು. ಅಲ್ಲಲ್ಲಿ ಕೆಲವು ಟಿಪ್ಪಣಿಗಳನ್ನೂ ಮಾಡಿಕೊಂಡೆ. ಅಬ್ರಾಹಮ್ ಲಿಂಕನ್ ಸ್ಮಾರಕಕ್ಕೆ ಹೋದಾಗ ಆಕಸ್ಮಿಕವಾಗಿ ಕಣ್ಣಿಗೆ ಬಿದ್ದ ಅವರ ಸುಂದರವಾದ ಕವಿತಾ ಸಂಕಲನವನ್ನು ನೋಡಿ 'ಎಲಾ ಇವನ ! ಈ ಮಹಾ ಮುತ್ಸದ್ದಿ ರಾಷ್ಟ್ರಾಧ್ಯಕ್ಷ ಅಬ್ರಾಹಮ್ ಲಿಂಕನ್ ಕವಿಯೂ ಆಗಿದ್ದನೇ !' ಎಂದು ಆಶ್ಚರ್ಯ ಪಟ್ಟು, ಅವನ ಕವಿತೆಗಳನ್ನು ಕನ್ನಡ ಓದುಗರಿಗೆ ಪರಿಚಯಿಸಬೇಕೆಂದು ಆ ಕವಿತಾ ಸಂಕಲನವನ್ನು ಖರೀದಿ ಮಾಡಿಕೊಂಡು ಹೊರಬಿದ್ದುದಾಯ್ತು. ಒಂದು ದೃಷ್ಟಿಯಿಂದ ನಾನು ಮನಸ್ಸಿನಲ್ಲಿ ಧೇನಿಸಿಕೊಂಡಿದ್ದ ಅಜ್ಞಾತ ಅಮೇರಿಕೆಯ ಒಂದು ವಿಷಯವೇ ನನಗೆ ಸಿಕ್ಕಂತಾಗಿತ್ತು. ಈವರೆಗೆ ಅಬ್ರಾಹಮ್ ಲಿಂಕನ್ ಅವರು ಒಬ್ಬ ಕವಿಯೂ ಆಗಿದ್ದ ಸಂಗತಿ ಕನ್ನಡಿಗರಿಗಾರಿಗೂ ತಿಳಿದಂತಿರಲಿಲ್ಲ. ಅದೊಂದು ಹೊಸ ವಿಷಯವನ್ನು ಜೇಬಿಗಿಳಿಸಿಕೊಂಡು ಮೂರು ದಿನ ಅಮೇರಿಕೆಯ ರಾಜಧಾನಿಯಲ್ಲಿ ಕಳೆದು, ಅಲ್ಲಿಂದ ನಾವು ಪಯಣಿಸಿದ್ದು ಪೆನ್ಸಿಲ್ವೇನಿಯಾ ರಾಜ್ಯದ ರಾಜಧಾನಿ ಫಿಲಾಡೆಲ್ಫಿಯಾ ನಗರಕ್ಕೆ. ಅದು ಅಮೇರಿಕೆ ಇನ್ನೂ ಬ್ರಿಟಿಷರ ಕಬ್ಜಾದಲ್ಲಿದ್ದಾಗ ಮೊಟ್ಟ ಮೊದಲಿಗೆ, ಆಗ ಅಸ್ತಿತ್ವದಲ್ಲಿದ್ದ ಅಮೇರಿಕೆಯ ೧೩ ವಸಾಹತುಗಳ ಪ್ರಮುಖರು ಒಂದೆಡೆ ಸೇರಿ ೧೭೭೬ರ ಜುಲೈ ೪ ರಂದು ಅಮೇರಿಕೆಯ ಸ್ವಾತಂತ್ರ್ಯದ ಘೋಷಣೆ ಮಾಡಿದ ಐತಿಹಾಸಿಕ ಖ್ಯಾತಿಯ ನಗರ. ಆ ನಗರದ ಐತಿಹಾಸಿಕ ಕಟ್ಟಡಗಳ ಶಿಲ್ಪ ಸೌಂದರ್ಯ ಹೊಸಬರನ್ನು ದಂಗುಗೊಳಿಸುತ್ತದೆ.

ನಾವು ಆ ನಗರದಲ್ಲಿ ಸುತ್ತಾಡಿ, ಮರುದಿನ ಅಲ್ಲಿಂದ ಸುಮಾರು ೮೦ ಮೈಲಿ ದೂರವಿರುವ ಲ್ಯಾಂಕೆಸ್ಟರ್ ಕೌಂಟಿಗೆ ಪ್ರಯಾಣ ಬೆಳೆಸಿದೆವು. ಅಲ್ಲಿಯ ವಿಶಾಲವಾದ ಹೊಲಗಳನ್ನು ತೋರಿಸುತ್ತ ನನ್ನ ಮಗ ಹೇಳಿದ : ''ಈ ಹೊಲಗಳಲ್ಲಿ ನೀವು ಸಮೃದ್ಧ ಬೆಳೆ ನೋಡ್ತೀರಲ್ಲಾ, ಈ ಬೆಳೆ ತೆಗೆಯುವವರು ಆಮಿಷ್ ಜನರು. ಇವರು ಇಡಿಯ ಅಮೇರಿಕೆಯ ಬಹುಸಂಖ್ಯಾತ ಕ್ರಿಶ್ಚಿಯನ್ ಜನಕ್ಕಿಂತ ಬೇರೆಯೇ ಮೂಲ ಸಂಸ್ಕೃತಿಯುಳ್ಳವರು. ಈ ಪ್ರದೇಶದ ಜನಜೀವನವನ್ನು ತೋರಿಸಲೆಂದೇ ನಿಮ್ಮನ್ನು ಇಲ್ಲಿ ಕರೆತಂದದ್ದು.'' ಆ ಮಾತು ಕೇಳಿ ನನಗೆ ಆಶ್ಚರ್ಯವಾಯಿತು. ನಾವು ಕುತೂಹಲದಿಂದ ಅವರ ಹಲವು ಹೊಲಗಳನ್ನು ಸುತ್ತು ಹಾಕಿ ನೋಡಿದೆವು. ತುಂಬಿದ ತೆನೆಗಳುಳ್ಳ ಗೋವಿನ ಜೋಳದ ವಿಶಾಲವಾದ ಹೊಲಗಳು ಬಲು ಆಕರ್ಷಕವಾಗಿ ಕಂಡವು. ಅವರ ಸಮಾಜ ಕೇಂದ್ರಕ್ಕೆ ಹೋದಾಗ ಅವರ ಬದುಕಿನ ರೀತಿ ರಿವಾಜುಗಳ ಕುರಿತು ಬಹಳಷ್ಟು ತಿಳಿದುಕೊಳ್ಳುವುದು ಸಾಧ್ಯವಾಯಿತು. ಆಮಿಷ ಜನಾಂಗದವರು ಇಟಲಿ ಮತ್ತು ಜರ್ಮನಿಗಳಿಂದ ಅಮೇರಿಕೆಗೆ ೧೬ನೆಯ ಶತಮಾನದಲ್ಲಿ ಅಮೇರಿಕೆಯ ಆಗಿನ ನೇತಾರ ವಿಲಿಯಮ್ ಪೆನ್ ಅವರ ಸೂಚನೆಯನ್ನನುಸರಿಸಿ ವಲಸೆ ಬಂದವರು. ಈ ಲ್ಯಾಂಕೆಸ್ಟರ್ ಕೌಂಟಿಯಲ್ಲದೆ, ಇಂಡಿಯಾನ, ಓಹಿಯೊ ರಾಜ್ಯಗಳಲ್ಲೂ ಹರಡಿಕೊಂಡಿದ್ದಾರೆ; ಕೆನಡಾ ದೇಶದ ಕೆಲ ಭಾಗಗಳಲ್ಲಿಯೂ ನೆಲಸಿದ್ದಾರೆ. ಅವರು ತಮ್ಮ ಪಾರಂಪರಿಕ ಬೈಬಲ್ ತತ್ವಗಳನ್ನು ಅನುಸರಿಸಿದರೂ ತಮ್ಮ ನಿತ್ಯ ಪ್ರಾರ್ಥನೆಗೆ ತಮ್ಮದೇ ಆದ ಬೇರೊಂದು ಗ್ರಂಥವನ್ನೇ ರಚಿಸಿಕೊಂಡವರೆಂದು ಅವರ ಸಮಾಜ ಮಾಹಿತಿ ಕೇಂದ್ರದಲ್ಲಿ ತಿಳಿದು ಬಂತು. ಅವರು ರಚಿಸಿಕೊಂಡ ಹೊಸ ಧಾರ್ಮಿಕ ಶ್ಲೋಕಗಳ ಸಂಕಲನದ ವಿಷಯ ಕೇಳಿ ನನಗೆ ಕುತೂಹಲವುಂಟಾಯಿತು. ಆ ಗ್ರಂಥದ ಹೆಸರು 'ಔಸಬಂದ್.' ಅವರು ಪ್ರತಿ ಎರಡು ವಾರಗಳಿಗೊಮ್ಮೆ ಪೂರ್ವನಿಶ್ಚಿತ ಗೃಹಸ್ಥರ ಮನೆಯೊಂದರಲ್ಲಿ ಸೇರಿ ಮಾರ್ಟಿನ್ ಲೂಥರ್ ಅವರು ಅನುವಾದಿಸಿದ ಬೈಬಲ್ ಪವಿತ್ರ ಗ್ರಂಥದ ಕೆಲವು ಭಾಗಗಳನ್ನು ವಾಚನ ಮಾಡುವುದಲ್ಲದೆ, ತಮ್ಮದೇ ಆದ 'ಔಸಬಂದ್' ಸ್ತೋತ್ರ ಗ್ರಂಥದ ಶ್ಲೋಕಗಳನ್ನು ನಿರ್ದಿಷ್ಟ ಧಾಟಿಯಲ್ಲಿ ಹಾಡುತ್ತಾರೆ. ಒಬ್ಬ ಪಾದ್ರಿಯವರು, ಇಡಿಯ ಪ್ರಾರ್ಥನಾ ಪರಿಕ್ರಮವನ್ನು ನಿರ್ದೇಶಿಸುತ್ತಾರೆ. ಬೈಬಲ್ ಗ್ರಂಥ-ಪಠಣದ ಮೊದಲು ಮತ್ತು ನಂತರ ಸಾಮೂಹಿಕವಾಗಿ ಔಸಬಂದ್ ಗ್ರಂಥದ ಸ್ತೋತ್ರಗಳನ್ನು ಸರಾಗವಾಗಿ ಹಾಡುತ್ತಾರೆ. ಊಟ ಮತ್ತು ಕ್ರೀಡಾಕೂಟದ ಸಮಯದ ಹೊರತಾಗಿ, ಈ ಪ್ರಾರ್ಥನಾ - ಪರಿಕ್ರಮವು ಇಡಿಯ ದಿನ ನಡೆಯುತ್ತದೆ. ಆಮಿಷ್ ಯುವಕ-ಯುವತಿಯರಿಗಂತೂ ಇದೊಂದು ಸಂಭ್ರಮದ ದಿನವೇ.

ಈ ಆಮಿಷ್ ಜನಾಂಗದವರು ಅಮೆರಿಕೆಯಲ್ಲಿ ಪ್ರವೇಶಿಸುವ ಮೊದಲು ತಮ್ಮ ಪ್ರಾರ್ಥನೆಗಾಗಿ ಬಳಸಲು ತಮ್ಮದೇ ಆದ ಹೊಸ ಸ್ತೋತ್ರ-ಗ್ರಂಥವನ್ನು ರಚಿಸಿಕೊಂಡ ಕಥೆ ನನಗೆ ಬಲು ಕುತೂಹಲ ಕಾರಿಯಾಗಿ ಕಂಡಿತು. ಅದು ಯಾವ ಋಷಿ-ಮುನಿ




## ಸುದ್ದಿ ಚಿತ್ರ

*ನವಕರ್ನಾಟಕ ಪ್ರಕಟಿಸಿದ ಖ್ಯಾತ ಪತ್ರಕರ್ತ ಕುಲದೀಪ್ ನಯ್ಯರ್ ಅವರ ಆತ್ಮಚರಿತ್ರೆ 'ಒಂದು ಜೀವನ ಸಾಲದು !' (ಕನ್ನಡಾನುವಾದ ಡಾ॥ ಆರ್. ಪೂರ್ಣಿಮಾ) ಕೃತಿಯ ಲೋಕಾರ್ಪಣೆ ದಿನಾಂಕ ೧೫-೯-೨೦೧೨ರಂದು ನಗರದ ಗಾಂಧಿಭವನದಲ್ಲಿ ನಡೆಯಿತು. ಬಹು ಸಂಖ್ಯೆಯಲ್ಲಿ ಸಾಹಿತ್ಯಾಸಕ್ತರು, ಪತ್ರಕರ್ತರು ಆಗಮಿಸಿದ್ದರು. ಚಿತ್ರದಲ್ಲಿ ಕೃತಿಯ ಅನುವಾದಕಿ ಡಾ॥ ಆರ್. ಪೂರ್ಣಿಮಾ, ಲೇಖಕ ಕುಲದೀಪ್ ನಯ್ಯರ್, ಅಧ್ಯಕ್ಷತೆ ವಹಿಸಿ ಲೋಕಾರ್ಪಣೆ ಮಾಡಿದ ಡಾ॥ ಚಿರಂಜೀವ್ ಸಿಂಗ್ ಹಾಗೂ ನವಕರ್ನಾಟಕದ ವ್ಯವಸ್ಥಾಪಕ ನಿರ್ದೇಶಕ ಆರ್. ಎಸ್. ರಾಜಾರಾಮ್ ಅವರನ್ನು ಕಾಣಬಹುದು.*

ಗಳಾಗಲೀ, ವಿದ್ವಾಂಸರಾಗಲೀ, ಧರ್ಮಗುರುಗಳಾಗಲೀ ರಚಿಸಿದ ಗ್ರಂಥವಲ್ಲ, ಒಂದು ದೃಷ್ಟಿಯಿಂದ ಇದು ಸಾಮೂಹಿಕ ಪ್ರಯತ್ನದ ಫಲ. ನಮ್ಮ ದೇಶದಲ್ಲಿ ಕೆಲವು ಸೆರೆಮನೆವಾಸಿಗಳು ಕಾವ್ಯರಚನೆ ಮಾಡುವುದನ್ನು ನಾವು ಕೇಳಿದ್ದೇವೆ. ಹಾಗೆಯೇ ೧೬ನೇ ಶತಮಾನದಲ್ಲಿ ಜರ್ಮನಿ ದೇಶದಲ್ಲಿ ಕ್ರಿಶ್ಚಿಯನ್ ಧರ್ಮಾನುಯಾಯಿಗಳಲ್ಲಿ ಮತಭೇದ ವುಂಟಾಗಿ, ಅದು ತಾರಕಕ್ಕೇರಿದಾಗ, ದೇಶದಲ್ಲಿ ಧಾರ್ಮಿಕ ಕೋಲಾಹಲವುಂಟಾಗುವ ಸಂಭವ ಕಂಡು ಬಂದದ್ದರಿಂದ ಜರ್ಮನಿ ಸರಕಾರವು ಅನೇಕ ಭಿನ್ನಮತೀಯ ಆಂದೋಲನಕಾರರನ್ನು ಬಂಧಿಸಿ ಸೆರೆಮನೆ ಗಟ್ಟಿತು. ಇಟಲಿ ಮತ್ತು ಸ್ವಿಟ್ಜರ್ಲಂಡ್ ಮೂಲದ ಅನಾಬಾಪ್ಟಿಸ್ಟ್ ಗುಂಪಿನ ಆಂದೋಲನಕಾರರು ಜರ್ಮನಿಯ ಸೆರೆಮನೆಯಲ್ಲಿ ಅತಿಥಿಗಳಾಗಿದ್ದಾಗ, ಅಲ್ಲಿಯೇ ಪ್ರಾರ್ಥನೆಗಾಗಿ ಸ್ವಯಂ- ಪ್ರೇರಣೆಯಿಂದ ಕೆಲವು ಹೊಸ ಸ್ತೋತ್ರಗಳನ್ನು ರಚಿಸಿ, ೧೫೬೪ರಲ್ಲಿ ಮೊದಲ ಬಾರಿಗೆ ಗ್ರಂಥ ರೂಪದಲ್ಲಿ ಪ್ರಕಟಿಸಿದರು. ಹೀಗೆ, ಈ ಸ್ತೋತ್ರಗ್ರಂಥ ಹುಟ್ಟಿದ್ದು ಜರ್ಮನಿಯ ಬಾವರಿಯಾ ಸೆರೆಮನೆಯಲ್ಲಿ! ಕಾರಾಗೃಹದ ಕತ್ತಲ ಕೋಣೆಯಲ್ಲಿ!! ಮೊದಲು ೧೫೬೪ರಲ್ಲಿ ಕೇವಲ ೫೧ ಸ್ತೋತ್ರಗಳನ್ನೊಳಗೊಂಡ ಗ್ರಂಥ ಪ್ರಕಟವಾಯಿತು. ನಂತರ ಆ ಸಂಖ್ಯೆ ದಿನದಿಂದ ದಿನಕ್ಕೆ ಬೆಳೆಯುತ್ತ ಹೋಯಿತು. ಮುಖ್ಯವಾಗಿ ಅನಾಬಾಪ್ಟಿಸ್ಟ್ ತಂಡದ ಪ್ರಮುಖರಾದ ಹಾನ್ಸ್ ಬೆಫ಼್, ಮೈಕೆಲ್ ಶಿಯ್ನಥರ್, ಸೆಬಾಸ್ಟಿಯನ್ ಫ್ರಾಂಕ್, ಫೆಲಿಕ್ಸ್ ಮಾಂಜ಼್, ಮೈಕೆಲ್ ಶಾಟ್ಲರ್, ಹಾಂಸ್ ಹಟ್, ಲಿಯೋನಾರ್ಡ್ ಸ್ಕೀಮರ್, ಹಾಂಸ್ ಸ್ಲಾಫರ್, ಜಾರ್ಜ್ ಬ್ಲಾರೊಕ್, ಲಿಯುಪೋಲ್ಡ್, ಮತ್ತಿತರರು ಈ ಸ್ತೋತ್ರಗಳನ್ನು ರಚಿಸಿ ಮೂಲ ಸಂಗ್ರಹಕ್ಕೆ ಸೇರಿಸುತ್ತ ಹೋದರು. ಮೊದಲು ಕೇವಲ ೫೧ ಸ್ತೋತ್ರಗಳ ಸಂಗ್ರಹವಿದ್ದದ್ದು ೧೫೮೩ರಲ್ಲಿ ಪ್ರಕಟವಾದ ಎರಡನೆಯ ಆವೃತ್ತಿಯಲ್ಲಿ ಒಟ್ಟು ೧೪೦ ಸ್ತೋತ್ರಗಳು ಸೇರಿಕೊಂಡಿದ್ದವು. ಈ ಎರಡನೆಯ ಆವೃತ್ತಿಗೆ ಈ ಸ್ತೋತ್ರಕಾರರು 'ಔಸಬಂದ್' ಎಂದು ನಾಮಕರಣ ಮಾಡಿದರು. ಆದರೆ, ಇಂಥ ಹೊಸ ಸ್ತೋತ್ರಗಳ ರಚನಾಕಾರ್ಯದ ಆರಂಭದ ಹಂತದಲ್ಲಿ ಬಲು ಉತ್ಸಾಹದಿಂದ ಮುಂದಾಗಿದ್ದ ಹಾನ್ಸ್ ಬೆಫ಼್ ಎಂಬ ಆಂದೋಲನಕಾರ ಜೈಲಿನಲ್ಲಿಯೇ ಕೊನೆಯುಸಿರೆಳೆದದ್ದು ಅವರಿಗೆಲ್ಲ ಬಲು ಬೇಸರದ ಸಂಗತಿಯೆನಿಸಿತ್ತು. ಈ ಸ್ತೋತ್ರಗಳು ಸಮಸ್ತ ಆಮಿಷ್ ಜನಾಂಗದಲ್ಲಿ ಜನಪ್ರಿಯವಾದವು. ಅವುಗಳ ಬೇಡಿಕೆ ಹೆಚ್ಚಿತು. ಆವೃತ್ತಿಯ ಮೇಲೆ ಆವೃತ್ತಿಗಳು ಅಚ್ಚಾದವು. ಮತ್ತೆ ಹತ್ತು ಹೊಸ ಸ್ತೋತ್ರಗಳೂ ಸೇರ್ಪಡೆಯಾದವು. ಅನಾಬಾಪ್ಟಿಸ್ಟ್ ತತ್ವ-ವಿಚಾರಗಳಲ್ಲದೆ, ಈ ಧಾರ್ಮಿಕ ಪರಿವರ್ತನೆಯ ಆಂದೋಲನದಲ್ಲಿ ಹೋರಾಡಿ ಜೀವಬಲಿದಾನ ಮಾಡಿದವರ ಕಥಾನಕಗಳನ್ನೂ 'ಔಸಬಂದ್' ಗ್ರಂಥದ ಹೊಸ ಆವೃತ್ತಿಗಳಲ್ಲಿ ಸೇರಿಸಲಾಯಿತು. ಹೀಗಾಗಿ, ಈ ಗ್ರಂಥವೀಗ ೮೦೦ ಪುಟಗಳ ಧರ್ಮಗ್ರಂಥವಾಗಿ, ಆಮಿಷರ ಕೈದೀವಿಗೆಯಾಗಿ ಬಳಸಲ್ಪಡುತ್ತಿದೆ.




'ಔಸಬಂದ್' ಗ್ರಂಥದಲ್ಲಿ ಶೇಖರಿಸಲಾದ ಸ್ತೋತ್ರಗಳಿಗೆ ಈ ಮೊದಲೇ ಪ್ರಚಲಿತವಿರುವ ಜಾನಪದ ಗೀತೆಗಳ ಧಾಟಿಗಳನ್ನು ಅಳವಡಿಸಿ, ಆಯಾ ಸ್ತೋತ್ರದ ಜೊತೆಗೇ ಆ ಧಾಟಿಯ ಸೂಚನೆ ಕೊಡಲಾಗಿರುತ್ತದೆ. ಹೀಗಾಗಿ, ಈ ಸ್ತೋತ್ರಗಳನ್ನು ಯಾವ ದೇಶದ ಯಾವ ಭಾಗದಲ್ಲಿ ಹಾಡಿದರೂ ಸಕಲರೂ ಯಾವ ಅಡಚಣೆಯಿಲ್ಲದೆ ಅದೇ ಅಭಿನ್ನ ಧಾಟಿಯಲ್ಲಿ ಸಲೀಸಾಗಿ ಹಾಡಬಹುದು. ಕೆಲವು ಸ್ತೋತ್ರಗಳು ಉದ್ದವಾಗಿದ್ದು, ಮತ್ತೆ ಕೆಲವು ಸಣ್ಣವಾಗಿದ್ದರೂ, ಅವುಗಳನ್ನು ಪ್ರಾರ್ಥನೆಯ ದಿನಗಳಲ್ಲಿ ಸಾದರ ಪಡಿಸಲು ಯಾವ ಸಮಸ್ಯೆಯೂ ಬಾಧಿಸುವುದಿಲ್ಲ. (ಇಲ್ಲಿ ನಮ್ಮ ನಾಡಗೀತೆಯ ಹಾಡುಗಾರಿಕೆಯಲ್ಲಿ ಕಾಣುವ ವ್ಯತ್ಯಾಸಗಳನ್ನು ಸ್ಮರಿಸಿಕೊಳ್ಳಬಹುದು). 'ಔಸಬಂದ್' ಎಂದರೇನೇ ಆಯ್ದ ಸ್ತೋತ್ರಗಳ ಗ್ರಂಥ, ಇದು ಮೂಲ ಕ್ರಿಶ್ಚಿಯನ್ ಸಂಪ್ರದಾಯಗಳಿಗೆ ವ್ಯತಿರಿಕ್ತವಾದುದೆಂದು ಸ್ವಿಟ್ಜರ್ಲಂಡ್ ಸರಕಾರದವರು ೧೬೭೨ರಲ್ಲಿ ತಮ್ಮ ದೇಶದಲ್ಲಿ ಈ ಗ್ರಂಥಕ್ಕೆ ಮುಟ್ಟುಗೋಲನ್ನೂ ಹಾಕಿದ್ದರು. ಆದರೆ, ಅಮೆರಿಕಾ, ಕೆನಡಾ ಮತ್ತಿತರ ದೇಶಗಳಲ್ಲಿರುವ ಆಮಿಷ್ ಜನಾಂಗದವರೆಲ್ಲ ತಮ್ಮ ಪ್ರಾರ್ಥನಾ ದಿನಗಳಲ್ಲಿ ಇದೇ ಗ್ರಂಥವನ್ನು ಭಕ್ತಿಯಿಂದ ಬಳಸುತ್ತಾರೆ. ಅಂತೆಯೇ ಒಂದರ ನಂತರ ಒಂದರಂತೆ, ಈ ಗ್ರಂಥದ ಹನ್ನೊಂದು ಆವೃತ್ತಿಗಳು ಪ್ರಕಟವಾದದ್ದು ಅಚ್ಚರಿಯ ಸಂಗತಿಯೇನಲ್ಲ.

ಕ್ರೈಸ್ತ ಕುಟುಂಬಗಳಲ್ಲಿ ಜನಿಸಿದ ಎಳೆಯರಿಗೆ ಕೊಡುವ ಧಾರ್ಮಿಕ ದೀಕ್ಷೆಯ ವಯೋಮಾನದ ಕಟ್ಟು-ನಿಟ್ಟುಗಳನ್ನು ಕಿತ್ತೆಸೆದು ಅವರಿಗೆ ಸ್ವತಂತ್ರ ವಿಚಾರ ಮಾಡಲು ಆಸ್ಪದವೀಯುವ ಹೊಸ ಧಾರ್ಮಿಕ ಧೋರಣೆಯೊಂದನ್ನು ಪ್ರತಿಪಾದಿಸಿದ ಆಮಿಷ್ ಜನಜೀವನದ ತತ್ವಪ್ರಣಾಲಿಗೆ ಸಂಬಂಧಿಸಿದಂತೆ ಕೆಲವು ಮೂಲಭೂತ ಬದಲಾವಣೆಗಳನ್ನು ತರಬಯಸಿದ ಅನಾಬಾಪ್ಟಿಸ್ಟ್ ಪಂಥದವರು ಮಾರ್ಟಿನ್ ಲೂಥರ್ ಅವರ ಅನುಯಾಯಿಗಳಾಗಿ ನಿಂತದ್ದು, ಹಾಗೂ ತಮ್ಮ ಹೊಸ ವಿಚಾರಗಳಿಗೆ ಚಾಲನೆ ನೀಡಲು ಸಂಘಟಿತ ಆಂದೋಲನವನ್ನೇ ಹೂಡಿದ್ದು ಪಾರಂಪರಿಕ ವ್ಯವಸ್ಥೆಯನ್ನೇ ನಂಬಿಕೊಂಡಿದ್ದ ಬಹುಸಂಖ್ಯಾತರಿಗೆ ಈ ವಿಚಾರ ಜೀರ್ಣವಾಗುವಂತಿರಲಿಲ್ಲ. ಅವರು ಬದಲಾವಣೆಯ ಹೊಸ ವಿಚಾರಗಳನ್ನು ಒಪ್ಪಲಿಲ್ಲ. ಪರಿವರ್ತನೆಯ ಹರಿಕಾರರು ಬಂಡೆದ್ದರು. ಜರ್ಮನಿಯ ಸರಕಾರ ತನ್ನ ಅಧಿಕಾರ ಚಲಾಯಿಸಿ, ೧೫೩೫ರಲ್ಲಿ ಭಿನ್ನಮತೀಯ ಆಂದೋಲನಕಾರರನ್ನು ಕಾರಾಗೃಹಕ್ಕೆ ತಳ್ಳಿತು... ಕಾರಾಗೃಹದ ನಾಲ್ಕು ಗೋಡೆಗಳ ನಡುವೆ ಈ ಆಂದೋಲನಕಾರರು ತಮ್ಮ ತಮ್ಮ ಅನಿಸಿಕೆಗಳಿಗೆ ಅಭಿವ್ಯಕ್ತಿ ನೀಡುತ್ತ ಹೊಸ ಬದುಕಿನ ತಮ್ಮ ಹಂಬಲವನ್ನು ಈಡೇರಿಸುವಂತೆ ದೇವರಲ್ಲಿ ಮೊರೆಯಿಟ್ಟ ಹಾಡುಗಳೇ 'ಔಸಬಂದ್' ಗ್ರಂಥದಲ್ಲಿ ಸೇರಿಕೊಂಡಿವೆ. ಈ ಎಲ್ಲ ಭಕ್ತಿಗೀತೆಗಳ ಜೀವಾಳವೆಂದರೆ ಪರಿಶುದ್ಧ ದೈವಿಕ ಭಕ್ತಿ.

ನಮ್ಮ ನಾಡಿನ ಶಿವಶರಣರು ಕೇಳಿದ ಒಂದು ಮಹತ್ವದ ಪ್ರಶ್ನೆ ಈ ಔಸಬಂದ್ ಪದ್ಯಗಳಿಗೂ ಅನ್ವಯಿಸಬಹುದು: 'ನಂಬಿ ಕರೆದೊಡೆ ಓ ಎನ್ನನೇ ಶಿವನು ?' ಪ್ರಚಲಿತ ಜಾನಪದ ಹಾಡುಗಳ ಧಾಟಿಯಲ್ಲೇ ಸ್ವತಃ ಗುಣುಗುಣಿಸುತ್ತ ಈ ಹಾಡುಗಳನ್ನು ಬರೆದು, ಒಬ್ಬರಿಗೊಬ್ಬರು ಓದಿ ತೋರಿಸಿ ಅಂತಿಮವಾಗಿ ಸುಮಾರು ನೂರಾಐವತ್ತು ಭಕ್ತಿಗೀತೆಗಳನ್ನು ಈ ಗ್ರಂಥರೂಪದಲ್ಲಿ ಒಟ್ಟಾಗಿಸಿದರು. ಇವು ದೇವರ ಸ್ತೋತ್ರಗಳಾಗಿ ಮೂಡಿ ಬಂದ ಹಾಡುಗಳು. ಕೈದಿಗಳು ಕಂಡ ದೈವೀ ಬೆಳಕಿನ ಕಿರಣಗಳು. ಸುಮಾರು ನಾನೂರು ವರ್ಷಗಳ ಹಿಂದೆ, ಸೆರೆಮನೆಯ ಕತ್ತಲ ಕೋಣೆಗಳಲ್ಲಿ ಮೂಡಿ ಬಂದ ಈ ಮಂತ್ರಗಳು ಇಂದಿಗೂ ಆಮಿಷ್ ಜನಾಂಗದ ಮನೆ-ಮನಗಳಲ್ಲಿ ಬೆಳಕು ಬೀರುತ್ತಿವೆ. ವಿಶ್ವದಲ್ಲೇ ಈ ಮಾದರಿಯ ಪ್ರಯೋಗ ನಡೆದದ್ದು ಇದೇ ಮೊದಲೆಂದು ಆಮಿಷರ ಅಭಿಪ್ರಾಯ.

**ಡಾ|| ಬಿ. ಎ. ಸನದಿ**
'ಮಿಲನ', ವಿನಾಯಕ ಸಾ-ಮಿಲ್ ಎದುರು, ಹೆರವಟ್ಟ
ಕುಮಟಾ - ೫೮೧ ೩೩೨, ಉತ್ತರ ಕನ್ನಡ ಜಿಲ್ಲೆ

ನಮ್ಮ ಪ್ರೀತಿ
ಮರ
ಉರುಳಿ
ಬಿದ್ದ
ಜಾಗದಲ್ಲಿ
ಸಣ್ಣದೊಂದು ಸಸಿ
ನಗುತ್ತಿದೆ !

**ವಿ. ಹರಿನಾಥ ಬಾಬು**
ಉಪ ಖಜಾನಾಧಿಕಾರಿ
ಗಂಗಾವತಿ - ೫೮೩ ೨೨೭




ಜನಪ್ರಿಯ ಮೂರನೇ ಮುದ್ರಣ

# ವಿಶ್ವಕಥಾಕೋಶ

ಪ್ರಧಾನ ಸಂಪಾದಕ ನಿರಂಜನ

96 ದೇಶ-ಪ್ರದೇಶಗಳ
320 ಲೇಖಕರ
324 ಶ್ರೇಷ್ಠ ಕಥೆಗಳ
ಕಣಜ

4088 ಪುಟಗಳು

























ಪ್ರತಿ ಸಂಪುಟದ ಬೆಲೆ ₹75

ಸೆಟ್ ರಿಯಾಯಿತಿ ಬೆಲೆ → ₹1750

3 ವರ್ಷದ 'ಹೊಸತು' ಚಂದಾದಾರರಿಗೆ 20% ವಿಶೇಷ ರಿಯಾಯಿತಿ. ಅಂಚೆ ವೆಚ್ಚ (ರೂ. 100) ಸೇರಿಸಿ ಒಟ್ಟು ರೂ. 1500ನ್ನು ಎಂ. ಓ. ಅಥವಾ ಡಿ.ಡಿ. ಮೂಲಕ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ.




## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – 560 001.
ದೂರವಾಣಿ : 30578022, 22203580. ಫ್ಯಾಕ್ಸ್: 30578023.
e-mail : navakarnataka@gmail.com. URL : www.navakarnataka.com blog : http://navakarnataka.blogspot.com

ನವಕರ್ನಾಟಕದ ಮಳಿಗೆಗಳಲ್ಲಿ ಮತ್ತು ಪುಸ್ತಕ ಪ್ರದರ್ಶನಗಳಲ್ಲಿ ಕೂಡ ಲಭ್ಯ.

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. Siddanagouda Patil

**HOSATHU** Kannada Monthly / OCTOBER 2012 / Rs. 12
RNI Regd. KARKAN / 1999 / 614. Karnataka Regd. KRNA/BGE/7/2012-14
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)













## ಓದಿ; ಚಂದಾದಾರರಾಗಿ, ಚಂದಾ ಉಡುಗೊರೆ ನೀಡಿ

**ಜೀವನದ ಎಲ್ಲ ಕ್ಷೇತ್ರಗಳ ಆಗುಹೋಗುಗಳನ್ನು**
**ಗಂಭೀರ ವಿಶ್ಲೇಷಣೆಗೆ ಒಳಪಡಿಸುವ**



ತಿಂಗಳ ಪತ್ರಿಕೆ

# ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಗೌರವ ಸಂಪಾದಕರು : ಡಾ|| ಜಿ. ರಾಮಕೃಷ್ಣ
ಸಂಪಾದಕರು : ಡಾ|| ಸಿದ್ದನಗೌಡ ಪಾಟೀಲ

ಆಕಾರ ಡಿಮ್ಮೈ 1/4 ಪುಟಗಳು 64 (ವಿಶೇಷಾಂಕ 256)
ಸಾದಾ ಪ್ರತಿ : ರೂ. 12 (ವಿಶೇಷಾಂಕ ರೂ. 35)
ವಾರ್ಷಿಕ ಚಂದಾ ರೂ. 150
ಮೂರು ವರ್ಷಕ್ಕೆ ರೂ. 350

**ಈ ಪ್ರಗತಿಪರ - ವೈಚಾರಿಕ ನಿಲುವಿನ ಪತ್ರಿಕೆಯನ್ನು ನೀವು ಮೆಚ್ಚಿದ್ದೀರೆಂದಾದಲ್ಲಿ ದಯವಿಟ್ಟು ಚಂದಾದಾರರಾಗಿ. ಹಾಗೆಯೇ, ನಿಮ್ಮ ಸ್ನೇಹಿತರಿಗೂ ಈ ಪತ್ರಿಕೆಯನ್ನು ಪರಿಚಯಿಸಿ; ಅವರೂ ಓದಿ ಚಂದಾದಾರರಾದಲ್ಲಿ ಪತ್ರಿಕೆಯ ಪ್ರಸಾರ ಹೆಚ್ಚುತ್ತದೆ. ನಮ್ಮ ಶ್ರಮ ಸಾರ್ಥಕವಾಗುತ್ತದೆ.**

ನೀವು ಭಾಗವಹಿಸುವ ಶುಭ ಸಮಾರಂಭಗಳಲ್ಲಿ, ಹುಟ್ಟುಹಬ್ಬಗಳಲ್ಲಿ, ಪ್ರತಿಭಾ ಪುರಸ್ಕಾರ ನೀಡುವ ಸಂದರ್ಭದಲ್ಲಿ ಉಡುಗೊರೆ ನೀಡ ಬೇಕಾದಾಗ 'ಹೊಸತು' ಪತ್ರಿಕೆಯ ಚಂದಾವನ್ನೇ ಉಡುಗೊರೆ ರೂಪದಲ್ಲಿ ನೀಡಬಹುದಲ್ಲವೆ? ಯಾರಿಗೆ ಉಡುಗೊರೆ ನೀಡಬೇಕೆಂದಿರುವಿರೋ ಅವರ ವಿಳಾಸ ಮತ್ತು ಚಂದಾ ಮೊಬಲಗನ್ನು ನಮ್ಮ ವಿಳಾಸಕ್ಕೆ ಕಳಿಸಿದರೆ ನೀವು ತಿಳಿಸಿದ ವಿಳಾಸಕ್ಕೆ ಪತ್ರಿಕೆ ಕಳಿಸುವ ಜವಾಬ್ದಾರಿ ನಮ್ಮದು.

ಚಂದಾ ನೋಂದಾವಣೆ ಚಳುವಳಿಯನ್ನು ಬೆಂಬಲಿಸಿ
ನಿಮ್ಮ ಸ್ನೇಹಿತರನ್ನೂ ಚಂದಾದಾರರನ್ನಾಗಿಸಿ
ಅವರೂ ಚಂದಾ ಉಡುಗೊರೆ ನೀಡುವಂತೆ ಪ್ರೇರೇಪಿಸಿ













'ಹೊಸತು' ತಿಂಗಳ ಪತ್ರಿಕೆ, 15, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001